॥ ಶ್ರೀ ವಿಟ್ಠಲೋ ವಿಜಯತೇ ॥

# ಗೀತಾದರ್ಶ



ಶ್ರೀಮಜ್ಜಗದ್ಗುರು ಶ್ರೀಮನ್ಮಧ್ವಾಚಾರ್ಯರವರ ಸಂಸ್ಥಾನ
ಶ್ರೀ ಶೀರೂರು ಮಠದ
ಶ್ರೀ ಶ್ರೀ ೧೦೮ ಶ್ರೀಮಲ್ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರಿಂದ
ವಿರಚಿತವಾದುದು ಮತ್ತು ಪ್ರಕಾಶಿತವಾದುದು.

1954

॥ ಶ್ರೀ ವಿಟ್ಠಲೋ ವಿಜಯತೇ ॥

# ಗೀತಾದರ್ಶ



ಶ್ರೀಮಜ್ಜಗದ್ಗುರು ಶ್ರೀಮನ್ಮಧ್ವಾಚಾರ್ಯರವರ ಸಂಸ್ಥಾನ
ಶ್ರೀ ಶೀರೂರು ಮಠದ
ಶ್ರೀ ಶ್ರೀ ೧೦೮ ಶ್ರೀಮಲ್ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರಿಂದ
ವಿರಚಿತವಾದುದು ಮತ್ತು ಪ್ರಕಾಶಿತವಾದುದು



ಮೆಜಿಸ್ಟಿಕ್ ಪ್ರೆಸ್, ಉಡುಪಿ.
ಇವರಿಂದ ಮುದ್ರಿಸಲ್ಪಟ್ಟಿತು.

1954



ಕುಂತಲಸಂತತಿಲಸಿತಂ ಚೂಡಾತ್ರಯಶೋಭಿಮೌಳಿಭಾಗಮಹಂ ।
ಶತಪತ್ರಪತ್ರನೇತ್ರಂ ಶಶಿವದನಂ ಪ್ರತಿದಿನಂ ದಿದೃಕ್ಷಾಮಿ ॥



ಶ್ರೀಧಾಮಾ ಯಸ್ಯ ಹೃತ್ಸೀಮ್ನಿ ಕೃತಧಾಮಾ ನಿರಂತರಂ ।
ಸುಧೀಃ ಶ್ರಿಯಂ ದಿಶತು ನಃ ಸ ಮಧ್ವಕ್ಷೀರಸಾಗರಃ ॥



ಓಂ ನಮೋ ವಾದಿರಾಜಾಯ ದೀರ್ಘದಾರಿದ್ರ್ಯಘಾತಿನೇ ।
ರಾಜಭೋಗಪ್ರದಾತ್ರೇ ಚ ನಮೋಽಸ್ತು ಜಯದಾಯಿನೇ ॥



ಶ್ರೀ ೧೦೮ ಶ್ರೀಮಲ್ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು.

# ಪ್ರಸ್ತಾವನಾ

ಶ್ರೀಮನ್ಮಹಾಭಾರತದಲ್ಲಿ ಸಮುದ್ರದಲ್ಲಿ ರತ್ನಗಳಂತೆ ವಿಷಯಗಳು ತುಂಬಿ ತುಳುಕುತಿದ್ದರೂ ಸರ್ವ ಸಾಮಾನ್ಯರಿಗೆ ತಿಳಿಯಲಶಕ್ಯಗಳೆಂತ ಭಾವಿಸಿ ಅದರ ಸಾರ ಸರ್ವಸ್ವವೆಂಬುವಂತೆ ಪರಮ ಕರುಣಾಳುಗಳಾದ ಶ್ರೀ ವೇದವ್ಯಾಸರೇ ಶ್ರೀಮದ್ಭಾರತದಲ್ಲಿ ಶ್ರೀಮದ್ಭಗವದ್ಗೀತೆಯನ್ನು ರಚಿಸಿದ್ದಾರೆ.

ಈ ಗೀತೆಯ ಅರ್ಥವೂ ಕೂಡ ಸಂಸ್ಕೃತಾನಭಿಜ್ಞರೂ ಅರ್ಥಗ್ರಹಣದ ಕುತೂಹಲಿಗಳೂ ಆದವರಿಗೆ ತಿಳಿಸಲೋಸುಗ ಅನೇಕ ಮಹಾ ಮಹನೀಯರು ನೂರಾರಕ್ಕಿಂತಲೂ ಮಿಕ್ಕಿದ ತತ್ತದ್ದೇಶಭಾಷೆಗಳಲ್ಲಿ ಪರಿವರ್ತಿಸಲ್ಪಟ್ಟು ಪ್ರಕಟಿತವಾದ ವಿಷಯವು ಸರ್ವರಿಗೂ ವಿದಿತವಷ್ಟೆ. ಹೀಗಿದ್ದರೂ ಕನ್ನಡ ಭಾಷೆಯಲ್ಲಿ ನಮ್ಮ ಸಿದ್ಧಾಂತಕ್ಕೆ ವ್ಯತ್ಯಯಬಾರದಂತೆ ಅದನ್ನನುಸರಿಸಿ ಬರೆದ ಭಾಷಾಟೀಕೆಗಳು ವಿರಳಗಳೆಂತ ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಈ ನ್ಯೂನತೆಯನ್ನು ಮನದಲ್ಲಿ ತಂದು ತತ್ಪರಿಹಾರಾರ್ಥವಾಗಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯತ್ಯಾದ್ಯನೇಕ ಬಿರುದಾಂಕಿತರಾದ ಶ್ರೀಮಜ್ಜಗದ್ಗುರು ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರವರ ಪೀಠಾಧಿರೂಢರಾದ ಶ್ರೀ ಶೀರೂರು ಮಠಾಧೀಶರಾದ ಶ್ರೀ ಶ್ರೀ. ೧೦೮ ಶ್ರೀಮಲ್ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು ತನ್ನ ಪೌಢಿಮೆಯಿಂದ ಸಕಲರಿಗೂ ತಿಳಿಯುವಂತೆ ಸುಲಭ ಭಾಷಾ ಶೈಲಿಯಲ್ಲಿ ಬರದು ಹಿಂದೆಯೇ ಕೆಲಭಾಗ ಪ್ರಕಟಿಸಿದ್ದು ವಾಚಕರೆಲ್ಲರಿಗೂ ತಿಳದ ವಿಷಯವಷ್ಟೆ. ಆ ಮುದ್ರಿತ ಪುಸ್ತಕಗಳೆಲ್ಲಾ ಸಹಸಾ ವಾಚಕರ ಉತ್ಸಾಹದಿಂದ ಅಲ್ಪಕಾಲದಲ್ಲಿಯೇ ಖರ್ಚಾಗಿ (ಪ್ರಿಂಟ್ ಔಟು) ಹೋದ ಪ್ರಯುಕ್ತ ಈಗ ಆ ಪುಸ್ತಕವು ಅಪೇಕ್ಷಿಸುವವರಿಗೆ ಸಿಗದಿರುವ ಕಾರಣವೂ ಪೂರ್ವದಲ್ಲಿ ೬ ಅಧ್ಯಾಯದ ಟೀಕೆಯು ಮಾತ್ರ ಪ್ರಿಂಟಾಗಿ ಮುಂದಿನ ಭಾಗವು ಹಾಗೆಯೇ ಉಳಿದ ಪ್ರಯುಕ್ತವೂ ದಿನೇ ದಿನೇ ಅಪೇಕ್ಷಿಸುವವರ ಸಂಖ್ಯೆಯು ಅಧಿಕವಾಗುತ್ತಾ ಬರುವುದರಿಂದಲೂ ಶ್ರೀ ಶ್ರೀಗಳವರು ತನ್ನ ಶಿಷ್ಯವರ್ಗದಲ್ಲಿ ಪರಮ ಪ್ರೇಮದಿಂದ ಆದ್ಯಂತವಾಗಿ ಶ್ರೀಮದ್ಭಗವದ್ಗೀತೆಯ ಭಾಷಾಂತರವನ್ನು ರಚಿಸಿ ಪ್ರಕಟಿಸಲು ಉದ್ಯುಕ್ತರಾಗಿದ್ದಾರೆನ್ನುವುದು ಎಲ್ಲರಿಂದಲೂ ಪ್ರಶಂಸನೀಯವಾದ ವಿಷಯವು.

ಇದರಿಂದ ಈ ಭಾಷಾಂತರವು, ಗೀತೆಯು ಗಹನ ವಿಷಯಗರ್ಭಿತವಾಗಿದ್ದರೂ ನಿಗೂಢವಾಗಿ ಪರತತ್ವ ಪ್ರಕಾಶಕವಾಗಿದ್ದರೂ ಅದರ ಯಥಾರ್ಥವನ್ನು ಭಾಷಾಂತರದಲ್ಲಿ ಪರಿಮಿತ ಶಬ್ದಗಳಿಂದ ಹೇಳುವುದು ಶಾಸ್ತ್ರ ಪರಿಶ್ರಮವಿಲ್ಲದವರಿಗೆ ಸುಲಭವಲ್ಲ. ಇದು ಸರ್ವ ಸಮ್ಮತವಷ್ಟೆ. ಹೀಗೆ ಇರಲು ಪ್ರಕೃತ ಪ್ರಿಂಟಾದ ಶ್ರೀ ಶ್ರೀಗಳವರ ಗೀತೆಯ ಭಾಷಾಂತರವು ಅಲ್ಪ ಕಾಲದಲ್ಲಿಯೇ ಸಮಾಪ್ತಿಯನ್ನು ಹೊಂದಿದ್ದು ನೋಡುವಾಗ ಈ ವ್ಯಾಖ್ಯೆಯ ಸುಲಭ ಶೈಲಿಯಲ್ಲಿ ವಾಚಕರಿಗೆ ತಿಳಿಸುವ ಮಹಿಮೆಯೂ ಗ್ರಂಥಕರ್ತೃಗಳ ರಚನಾ ಕೌಶಲವೂ ಸಹೃದಯರಿಗೆ ವ್ಯಕ್ತವಾಗದಿರಲಾರವು.

ಹೀಗೆಯೇ ಇನ್ನು ಮುಂದೆಯೂ ಶ್ರೀ ಶ್ರೀಗಳವರು ತನ್ನದೇ ಆದ ಒಂದು ನವೀನ ಶೈಲಿಯಿಂದ ಇತರ ಗ್ರಂಥಗಳ ಭಾಷಾಂತರವನ್ನು ಮಾಡಿ ಜನತೆಯ ಮುಂದಿಟ್ಟರೆ ಬಹಳ ಉಪಕಾರವಾದೀತೆಂತ ನಾವು ನಂಬುತ್ತೇವೆ. ಆದಕ್ಕೋಸ್ಕರ ಶ್ರೀ ಶ್ರೀಗಳವರಿಗೆ ದೀರ್ಘಾಯುರಾರೋಗ್ಯಾದಿಗಳನ್ನು ಕೊಟ್ಟು ಸತ್ಕೀರ್ತಿಪಾತ್ರರನ್ನಾಗಿ ಮಾಡಿ ನಮ್ಮೆಲ್ಲರನ್ನು ಸಂತೋಷಪಡಿಸುತ್ತಿರುವಂತೆ ಬಹುಕಾಲದಲ್ಲಿ ನಮ್ಮ ಶ್ರೀಕೃಷ್ಣ ಪರಮಾತ್ಮನು ಅನುಗ್ರಹಿಸಲಿ ಎಂದು ಶ್ರೀಕೃಷ್ಣನನ್ನು ತ್ರಿಕರಣಪೂರ್ವಕವಾಗಿ ಸರ್ವದಾ ನಾವು ಪ್ರಾರ್ಥಿಸುತ್ತೇವೆ.

ಇತಿ ಶಂ

ಶ್ರೀ ಪಿ. ನಾರಾಯಣಾಚಾರ್ಯರು,
ತರ್ಕಕೇಸರಿ, ವೇದಾಂತ ಪ್ರಧಾನ ಪಂಡಿತರು,
ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ, ಉಡುಪಿ.
ಅಧ್ಯಕ್ಷರು: ಶ್ರೀವಾದಿರಾಜೀಯ ಗ್ರಂಥ ಪ್ರಕಾಶನ ಸಮಿತಿ, ಉಡುಪಿ

---



ಈ ಪುಸ್ತಕವು ದೊರೆಯುವ ಸ್ಥಳ
ಅಗ್ರಹಾರ ನಾರಾಯಣ ತಂತ್ರಿಗಳು,
ಪಂಡಿತ, ಸಂಸ್ಕೃತ ಕಾಲೇಜು, ಶ್ರೀ ಶೀರೂರು ಮಠ, ಉಡುಪಿ, ದ. ಕ.

# PRE FACE

The Bhagavadgitha is an epitome of the essentials of the whole Vedic teaching. A knowledge of its teaching leads to the realization of all human aspirations. The chief problem facing the world today is the reconciliation of man-kind. The Bhagavadgitha attempts to reconcile varried forms of religious consciousness, and emphasizes the root conceptions of religion which are eternal.

There are differences among scholars in the detailed interpretations of the Gita. There are a number of commentators on the Gita. The great teachers have written commentaries on the Gita in support of their own teachings and in refutation of those of others.

Sri Madhwacharya wrote the Githabhashya and the Githatatparya. He has derived from the Githa, the tends of Dwaitha philosophy. According to him "Devotion is the method emphasized in the Githa."

The Githa has been translated into more than two hundred languages of the world. But a translation into Kannada based on Dwaita Philosophy has been wanting. His Holiness Sri Lakshmindra Theertha Swamiji of Sri Shiroor Mutt Udipi, a scholar in Madhwa Philosophy has written this translation of the eighteen chapters of the Gita in simple Kannada. No translation of the Githa can bring out the dignity and grace of the original. His

Holiness has attempted to render the thought and convey the spirit as much as possible while translating.

With the laudable idea of spreading the Doctrine of Sri Madhwacharya, His Holiness intends to offer this Book free of cost to all those Kannada knowing aspirants who are thirsting after the knowledge of the Supreme.

May Lord Krishna confer the divine grace on those who endeavour to derive spiritual benifit from this Book.

***Dr. P. G. Achar,***
**CONSULTING PHYSICIAN**
**and**
**SURGEON EYE SPECIALIST**
***Hon Secretary & Treasurer***
**S. M. S. P. Sabha, UDIPI, S. K.**

॥ ಶ್ರೀಃ ॥



॥ ಶ್ರೀಗೋಪಾಲಕೃಷ್ಣಾಯ ನಮಃ ॥

# ಗೀತಾದರ್ಶ



## ಪ್ರಥಮೋಽಧ್ಯಾಯಃ

---

॥ ಧೃತರಾಷ್ಟ್ರ ಉವಾಚ ॥

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧ ॥**

---

ಮುಖ್ಯ ಸೇನಾಪತಿಯ ಅವಸಾನವನ್ನು ಕೇಳಿ ದುಃಖಾಕ್ರಾಂತನಾದ ಧೃತರಾಷ್ಟ್ರನು ಹೀಗಾಗಲಿಕ್ಕಿಲ್ಲವೆಂದು ತಾನು ತಿಳಿದುಕೊಂಡಿದ್ದುದರಿಂದ, ಆದ್ಯಂತ ವೃತ್ತಾಂತವನ್ನು ತಿಳಿಯಲಪೇಕ್ಷೆಯುಳ್ಳವನಾಗಿ ವ್ಯಾಸರಿಂದ ದತ್ತವಾದ ಯುದ್ಧದ ಪ್ರತ್ಯಕ್ಷ ಸಕಲಪರಿಜ್ಞಾನವುಳ್ಳ ಸಂಜಯನನ್ನು ಕುರಿತು ಪ್ರಶ್ನೆ ಮಾಡಿದ್ದಾನೆ. ಇದರಲ್ಲಿ ಧೃತರಾಷ್ಟ್ರನಿಗೆ ತನ್ನ ಮಕ್ಕಳಲ್ಲಿ ಅಧಿಕವಾದ ಮಮತೆಯನ್ನು ಅಂದರೆ ಪಕ್ಷಪಾತ ಮತ್ತು ವ್ಯಾಮೋಹವನ್ನು ವ್ಯಾಸರು ಸ್ಪಷ್ಟವಾಗಿ ಸೂಚಿಸಿದ್ದಾರೆ. 'ಮಾಮಕಾಃ' ಎಂದು ದುರ್ಯೋಧನಾದಿಗಳನ್ನು ಹೇಳಿ, 'ಪಾಂಡವಾಃ' ಎಂದು ಯುಧಿಷ್ಠಿರಾದಿಗಳನ್ನು ಪ್ರತ್ಯೇಕ ಹೆಸರಿನಿಂದ ನಿರ್ದೇಶಮಾಡಿದ ಪ್ರಯುಕ್ತ ಪಾಂಡವರು 'ಮಾಮಕ'(ತನ್ನ

॥ ಸಂಜಯ ಉವಾಚ ॥

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ ೨ ॥**

---

ವರು)ರಲ್ಲವೆಂಬುದನ್ನು ಸ್ಪಷ್ಟವಾಗಿ ತೋರಿಸಿದಂತಾಯಿತು. ಇನ್ನು ವ್ಯಾಮೋಹವೇನೆಂದರೆ:–ಯುಧಿಷ್ಠಿರಾದಿಗಳು ಧರ್ಮೈಕಪರಾಯಣರು. ನಮ್ಮ ಪೂರ್ವಿಕರ ಪುಣ್ಯಭೂಮಿಯಾದ ಕುರುಕ್ಷೇತ್ರದಲ್ಲಿ ಪಾಂಡವರು ಸರ್ವಥಾ ಗುರುವಧಾದಿರೂಪವಾದ ಅನ್ಯಾಯವನ್ನು ಮಾಡಲಿಕ್ಕಿಲ್ಲವೆಂಬೀ ಧೃತರಾಷ್ಟ್ರನ ಹಾರ್ದವಿದು 'ಧರ್ಮಕ್ಷೇತ್ರೇ ಕುರುಕ್ಷೇತ್ರೇ' ಎಂಬ ಪದದಿಂದ ವ್ಯಕ್ತವಾಗುತ್ತದೆ. ವಿಧರ್ಮಿಗಳಿಗೂ ಕೂಡ ಈ ಪುಣ್ಯಭೂಮಿಯಲ್ಲಿ ಧರ್ಮಬುದ್ಧಿಯು ಹುಟ್ಟುತ್ತದೆ. ಧರ್ಮತತ್ಪರರಾದ ಪಾಂಡವರಿಗೆ ಎಷ್ಟಕ್ಕೂ ಅಧರ್ಮಬುದ್ಧಿಯು ಹುಟ್ಟಲಿಕ್ಕಿಲ್ಲ. ಇನ್ನು ಕುರುಗಳ ಕ್ಷೇತ್ರವಿದು; ಅಂದರೆ ಕುರುಗಳ ಭೂಮಿಯಲ್ಲಿ ಇತರರಿಗೆ ಜಯವಿಲ್ಲ. ಆದರಲ್ಲಿಯೂ ಕಪಟದಲ್ಲಿ ಪಟುಗಳಾದ ನನ್ನ ಪುತ್ರರು ಕಪಟವನ್ನರಿಯದ ಪಾಂಡವರನ್ನು ಜಯಿಸುವುದು ಸಿದ್ಧವೇ. ಹೀಗಿರುವಾಗ ಈ ಮಹಾ ಅನಿಷ್ಟಪ್ರಸಂಗವು ಹೇಗೆ ಬಂದಿತು? ಅಲ್ಲಿ ನೆರೆದವರು ಏನು ಮಾಡಿದರು? ಎಂದು ಸಂಜಯನನ್ನು ಕುರಿತು ಧೃತರಾಷ್ಟ್ರನು ಪ್ರಶ್ನೆಮಾಡಿದ್ದಾನೆ. ॥ ೧ ॥

ವ್ಯಾಸಾನುಗ್ರಹದಿಂದ ಲಬ್ಧವಾದ ದಿವ್ಯದೃಷ್ಟಿಯುಳ್ಳ ಸಂಜಯನು ಅಲ್ಲಿ ನಡೆದ ವಿಷಯವನ್ನೂ ಸಕಲರ ಹಾರ್ದವನ್ನೂ ಕೂಡ ಅರಿತು ಇದ್ದುದನ್ನು ಇದ್ದ ಹಾಗೆ ಹೇಳುತ್ತಾನೆ. ದುರ್ಯೋಧನನು ಸ್ವಯಂ ಭೀತನಾಗಿದ್ದ ಪ್ರಯುಕ್ತವೂ, ಪ್ರತಿಯೊಬ್ಬರಲ್ಲಿಯೂ ಶಂಕಿಸುವವನಾಗಿದ್ದ ಪ್ರಯುಕ್ತವೂ, ಉಭಯ ಗುರುಗಳಾದ ದ್ರೋಣಾಚಾರ್ಯರಲ್ಲಿಯೂ ಕೂಡ ಅನಿಷ್ಟಾಶಂಕಿಯಾಗಿ ಅವರನ್ನೇ ಪ್ರಥಮತಃ ಎಚ್ಚರಿಸುವ ದುರ್ಬುದ್ಧಿಯಿಂದ ತಾನೇ ಹೋಗಿ ಮಾತನಾಡಿದ್ದಾನೆ. ಇಲ್ಲಿ 'ದ್ರೋಣ' ಇತ್ಯಾದಿ ಶಬ್ದಗಳನ್ನು ಬಿಟ್ಟು 'ಆಚಾರ್ಯ' ಎಂದು ಹೇಳಿದುದರಿಂದಲೇ ಅವರಲ್ಲಿ ತನಗಿರುವ ಶಿಷ್ಯಪಕ್ಷಪಾತಶಂಕೆಯೂ, 'ವ್ಯೂಢಂ' ಎಂದು ಹೇಳಿದುದರಿಂದ ಶತ್ರುಸೈನ್ಯದ ದರ್ಶನಮಾತ್ರದಿಂದಲೇ ತನಗಿರುವ ಭೀತಿಯೂ ವ್ಯಕ್ತವಾಗುತ್ತವೆ. ಇಷ್ಟು ಅಭಿ

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಂ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**
**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**

---

ಪ್ರಾಯವನ್ನು ಅಲ್ಲಿರುವ 'ತು' ಶಬ್ದವು ಎತ್ತಿ ತೋರಿಸುತ್ತದೆ. ಸಂಜಯ! ಪುಣ್ಯಭೂಮಿಯಾದ ಕುರುಕ್ಷೇತ್ರದಲ್ಲಿ ಯುದ್ಧೇಚ್ಛುಗಳಾಗಿ ಸೇರಿದ ಪಾಂಡವರೂ ನನ್ನವರಾದ ಕೌರವರೂ ಏನು ಮಾಡಿದರೆಂದು ಧೃತರಾಷ್ಟ್ರನು ಕೇಳಲು, ಸಂಜಯನು ಹೇಳಿದುದೇನೆಂದರೆ—ಯುದ್ಧಾರ್ಥವಾಗಿ ಕೂಡಿದ ಪಾಂಡವ ಸೇನೆಯನ್ನು ನೋಡಿ ದುರ್ಯೋಧನನು ಆಗ ಗುರುಗಳಾದ ದ್ರೋಣರ ಬಳಿಗೆ ಬಂದು ಮುಂದೆ ಹೇಳುವ ರೀತಿಯಲ್ಲಿ ಮಾತನಾಡಿದನು. ॥೨

ತಮ್ಮ ಶಿಷ್ಯನಾದ ದ್ರುಪದಪುತ್ರನಾದ ಧೃಷ್ಟದ್ಯುಮ್ನನಿಂದ ಯುದ್ಧೋಪಯೋಗಿ ರೀತಿಯಲ್ಲಿ ಕೂಡಿಸಲ್ಪಟ್ಟ ಪಾಂಡುಪುತ್ರರ ಮಹತ್ತಾದ ಸೇನೆಯನ್ನು ನೋಡಿರಿ—ಎಂದು ಗುರುಗಳಾದ ದ್ರೋಣರೊಡನೆ ರಾಜನಾದ ದುರ್ಯೋಧನನು ಹೇಳಿದನು. ಇಲ್ಲಿ ತನ್ನ ಸೇನೆಯ ಸಂಖ್ಯೆಗಿಂತ ಪಾಂಡವರ ಸೇನೆಯ ಸಂಖ್ಯೆಯು ಕಡಿಮೆಯಾಗಿದ್ದರೂ ಆ ಪಾಂಡವ ಸೇನೆಗೆ 'ಮಹತೀಂ' ಎಂದು ವಿಶೇಷಣ ಕೊಟ್ಟ ಪ್ರಯುಕ್ತ ದುರ್ಯೋಧನನು ತನ್ನ ಭಯವನ್ನು ವ್ಯಕ್ತಮಾಡಿದ್ದಾನೆ. ಮಾತ್ರವಲ್ಲದೆ, 'ಧೃಷ್ಟದ್ಯುಮ್ನೇನ' ಎಂದು ಹೇಳದೆ 'ದ್ರುಪದಪುತ್ರೇಣ' ಎಂದು ಹೇಳಿದ ಪ್ರಯುಕ್ತ ವೈರಿಯ ತನುಜನೆಂದು ತಿಳಿದೊಡನೆ ಸಿಟ್ಟೇರುವಂತೆ ದ್ರೋಣರನ್ನು ಹುರಿದುಂಬಿಸಿದ್ದಾನೆಂದೂ ತಿಳಿಯುತ್ತದೆ. ಇಂತಹ ಹುಚ್ಚುತನದ ಅವಿವೇಕವು ಕುರುಸಿಂಹರಾದ ಪಿತಾಮಹರಲ್ಲಿ ನಡೆಯದೆಂದೂ ಬ್ರಾಹ್ಮಣರಾದ ದ್ರೋಣರಲ್ಲಿ ತನ್ನ ಮನೋಗತವು ಸಿದ್ಧಿಯಾದೀತೆಂದೂ ಭಾವಿಸಿ, ಮೊತ್ತಮೊದಲು ಇವರಲ್ಲಿ ಅರಿಕೆ ಮಾಡಲು ಬಂದಿದ್ದಾನೆ. ॥ ೩ ॥

ದ್ರೋಣಾಚಾರ್ಯರಿಗೆ ತಿಳಿದಿದ್ದರೂ ದೊಡ್ಡವರಲ್ಲಿ ವಿಜ್ಞಾಪಿಸುವುದು ಕರ್ತವ್ಯವಾದ ಪ್ರಯುಕ್ತ ಎಚ್ಚರಿಕೆ ಕೊಡುವ ರೀತಿಯಲ್ಲಿ ಪಾಂಡವ ಸೇನೆಯಲ್ಲಿರುವ ಮಹಾಧನ್ವಿಗಳಾದ ಶೂರರ ಹೆಸರುಗಳನ್ನು ದುರ್ಯೋಧನನು

ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।
ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥
ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥
ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ॥೭॥
ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮ ॥

---

ಈ ಶ್ಲೋಕದಲ್ಲಿ ನಿವೇದಿಸಿದ್ದಾನೆ. ಇವನಿಗೆ ಭಯಜನಕರು ಪಾಂಡವರಲ್ಲಿ ಪ್ರಮುಖರಾದ ಭೀಮಾರ್ಜುನರು. ಆದಕಾರಣ ಇಲ್ಲಿಯೂ ತನ್ನ ಮನಸ್ಸಿನಲ್ಲಿದ್ದ ಆ ಭೀಮಾರ್ಜುನರನ್ನೇ ಪ್ರಥಮದಲ್ಲಿ ತೋರಿಸಿ, ಇವರಿಗೆ ಇತರರು ಸಮಾನಿಕರೆಂದು ತೋರಿಸಿದ್ದಾನೆ. ಆದರಲ್ಲಿಯೂ ಭೀಮಸೇನನಿಂದ ಭಯವು ಇನ್ನೂ ಅಧಿಕವಾಗಿರುವ ಕಾರಣ ಭೀಮಸೇನನ ಹೆಸರನ್ನು ಅವರೊಳಗೆ ಮೊದಲು ತೋರಿಸಿದ್ದಾನೆ. ॥ ೪ ॥

ಶಸ್ತ್ರಾಸ್ತ್ರವಿದ್ಯಾಪ್ರವೀಣರಾಗಿ ಒಬ್ಬೊಬ್ಬರೇ ಹತ್ತುಸಹಸ್ರ ಧನುರ್ಧಾರಿಗಳಾದ ಯೋಧರನ್ನು ಎದುರಾಗಿ ಯುದ್ಧದಲ್ಲಿ ನಿಗ್ರಹಿಸುವ ಶಕ್ತಿಯಿದ್ದು, ಮಹಾರಥರೆಂದು ಪ್ರಸಿದ್ಧರಾದವರು ಪಾಂಡವರ ಸೇನೆಯಲ್ಲಿ ಬಹುಮಂದಿಗಳಿದ್ದಾರೆ. ॥ ೫,೬ ॥

ಹಾಗೆಯೇ ಪರಿಚಯಕ್ಕಾಗಿ ನಮ್ಮ ಸೇನೆಯಲ್ಲಿರುವ ವಿಶಿಷ್ಟರು ಅಂದರೆ ಉತ್ತಮರನ್ನು ಹೇಳುತ್ತೇನೆಂದು ಪ್ರತಿಜ್ಞೆಮಾಡಿ ಮೇಲಿನ ಶ್ಲೋಕಗಳಿಂದ ತಿಳಿಸಿದ್ದಾನೆ. ಈ ಶ್ಲೋಕದಲ್ಲಿ ಪ್ರಧಾನರಿಗೆ 'ವಿಶಿಷ್ಟಾ' ಎಂದು ವಿಶೇಷಣ ಕೊಟ್ಟರೂ 'ಅಸ್ಮಾಕಂ ತು' ಎಂಬ 'ತು' ಶಬ್ದವನ್ನು ಪ್ರಯೋಗ ಮಾಡಿದ ಪ್ರಯುಕ್ತ ಹಿಂದೆ ಹೇಳಿದ ರೀತಿಯಿಂದ ತನ್ನ ಭಯವನ್ನು ಸೂಚಿಸುತ್ತಾನೆ. ॥ ೭ ॥

ಇಲ್ಲಿ ಆಚಾರ್ಯರ ಮುಂದೆ ಪ್ರಧಾನರ ಪರಿಗಣನೆಮಾಡಲು ಹೊರಟ ಪ್ರಯುಕ್ತ ಸಮ್ಮುಖದಲ್ಲಿರುವ ಆಚಾರ್ಯರನ್ನೇ ಪ್ರಥಮತಃ ಹೆಸರೆತ್ತಿ ಸರ್ವ

ಅನ್ಯೇ ಚ ಬಹವಶ್ಶೂರಾ ಮದರ್ಥೇ ತ್ಯಕ್ತಜೀವಿತಾಃ ।
ನಾನಾಶಸ್ತ್ರಪ್ರಹರಣಾಸ್ಸರ್ವೇ ಯುದ್ಧವಿಶಾರದಾಃ ॥ ೯ ॥
ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।
ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥
ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।
ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ॥ ೧೧ ॥

---

ಸೇನಾಪತಿಗಳಾದ ಭೀಷ್ಮರ ನಾಮವನ್ನು ಎರಡನೆಯದಾಗಿ ಗ್ರಹಣಮಾಡಿರುತ್ತಾನೆ. ॥ ೮, ೯ ॥

ಹಿಂದೆ ಹೇಳಿದ ರೀತಿಯಲ್ಲಿ ಅಸ್ಪಷ್ಟವಾಗಿದ್ದ ತನ್ನ ಭಯವನ್ನು ಸ್ಪಷ್ಟ ಶಬ್ದಗಳಿಂದ ಸೂಚಿಸುವನು. ಭೀಷ್ಮರಿಂದ ಪರಿಪಾಲಿತವಾದ ಹನ್ನೊಂದು ಅಕ್ಷೋಹಿಣೀಪರಿಮಿತ ಸೇನೆಯು ಅಪರ್ಯಾಪ್ತವು-ಪಾಂಡವರ ವಿಷಯದಲ್ಲಿ ಸಾಲದು; ಎಂದರೆ ಸಂಖ್ಯೆಯಲ್ಲಿ ಹೆಚ್ಚು ಇದ್ದರೂ ಸರ್ವಸೇನಾಧಿಪತ್ಯವನ್ನು ಭೀಷ್ಮರು ವಹಿಸಿದ್ದರೂ ಪಾಂಡವರ ಎದುರಿನಲ್ಲಿ ನಿಲ್ಲಲು ಅಸಮರ್ಥವೇ. ಪಾಂಡವರ ಈ ಸೈನ್ಯವಾದರೂ ಭೀಮನಿಂದ ರಕ್ಷಿತವಾಗಿ ನಮ್ಮೊಡನೆ ರಾಡಲು ಶಕ್ತವೇ. ಇಷ್ಟು ಸ್ಪಷ್ಟವಾಗಿ ತನ್ನ ಭಯವನ್ನು ಆಚಾರ್ಯರ ಮುಂದೆ ಕ್ಷತ್ರಿಯಕುಲಪ್ರಸೂತನಾದ ಕೌರವನು ತಿಳಿಸುವುದು ಅನುಚಿತವೆಂದು ಭಾವಿಸುವುದಾದರೆ, ಹೀಗಾದರೂ ಶ್ಲೋಕಾಭಿಪ್ರಾಯವನ್ನು ತಿಳಿಯಬಹುದು. ಭೀಷ್ಮಾಭಿರಕ್ಷಿತವಾದ ನಮ್ಮ ಸೈನ್ಯವು ಅಪರ್ಯಾಪ್ತವು, ಅಪರಿಮಿತವಾದುದು. ಭೀಮರಕ್ಷಿತ ಸೇನೆಯು 'ಪರ್ಯಾಪ್ತಂ', ಪರಿಮಿತವಾದುದು. ಆ ಪ್ರಯುಕ್ತ ನಮಗೇನು ಭಯ? ॥ ೧೦ ॥

ಆದಕಾರಣ ಸರ್ವಸೈನ್ಯರಕ್ಷಕರಾಗಿ ಭೀಷ್ಮರಿದ್ದರೂ ತಾವುಗಳೆಲ್ಲ ಸರ್ವ ಮಾರ್ಗಗಳಲ್ಲಿಯೂ ಭೀಷ್ಮಾಚಾರ್ಯರನ್ನೇ ರಕ್ಷಿಸಿಕೊಂಡಿರಬೇಕು. ಭೀಷ್ಮರಿದ್ದರೆ ನಾವಿದ್ದಂತೆಯೇ. ಅವರಿಲ್ಲದಿದ್ದರೆ ನಾವಿಲ್ಲದಂತೆ ಎಂಬೀ ಅಭಿಪ್ರಾಯವನ್ನು ಇದರಲ್ಲಿ 'ಹಿ' ಎಂಬ ಶಬ್ದವು ಸೂಚಿಸುತ್ತದೆ. ॥ ೧೧ ॥

ರಣಾರಂಗದಲ್ಲಿ ದ್ರೋಣರ ಸಮೀಪದಲ್ಲೇ ಇರುವ ಭೀಷ್ಮಾಚಾರ್ಯರು ದುರ್ಯೋಧನನ ಭೀತಿ ಮತ್ತು ಕಾತರತೆಯನ್ನು ತಿಳಿದು ಅವನಿಗೆ ಸಂತೋಷ

ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।
ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್॥೧೨॥
ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।
ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ ೧೩ ॥
ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।
ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥
ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।
ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥

---

ಹುಟ್ಟುವಂತೆ ಶ್ರೇಷ್ಠವಾದ ಧ್ವನಿಗೈಯುತ್ತಾ ಯುದ್ಧಸೂಚಕವಾದ ಶಂಖವನ್ನು ಊದಿದರು. ॥ ೧೨ ॥

ತರುವಾಯ ಸೇನೆಯಲ್ಲಿರುವವರು ಸೇನಾಪತಿಯ ಶಂಖಧ್ವನಿಯನ್ನನುಸರಿಸಿ ನಾನಾವಿಧಗಳಾದ ಯುದ್ಧಸೂಚಕ ವಾದ್ಯಗಳನ್ನು ಬಾರಿಸಿದ ಪ್ರಯುಕ್ತ ಸೇನೆಗೆ ನಾಯಕಾಧೀನತ್ವವೂ ಏಕಮತ್ಯವೂ ವ್ಯಕ್ತವಾಗುತ್ತದೆ. ॥ ೧೩ ॥

ಕೌರವಸೈನ್ಯದಲ್ಲಿ ಯುದ್ಧಸೂಚಕ ಧ್ವನಿಯಾದೊಡನೆ ಅದಕ್ಕೆ ಪ್ರತಿಯಾಗಿ ಶ್ವೇತಾಶ್ವಗಳಿಂದ ಕೂಡಿದ ಮಹಾರಥದಲ್ಲಿ ಉಪವಿಷ್ಟರಾದ ಶ್ರೀಕೃಷ್ಣಾರ್ಜುನರು ದಿವ್ಯಶಂಖಧ್ವನಿ ಮಾಡಿದರು. ಇಲ್ಲಿ ಕೃಷ್ಣನೆಂದು ಹೇಳದೆ 'ಮಾಧವ' ಎಂಬ ಶಬ್ದಪ್ರಯೋಗಮಾಡಿದ ಪ್ರಯುಕ್ತ ಮಾಧವನು, ಅಂದರೆ ಲಕ್ಷ್ಮೀಪತಿಯು ಸಹಾಯಕನಾಗಿದ್ದಲ್ಲಿಯೇ ಲಕ್ಷ್ಮಿಯು ಒಲಿಯುತ್ತಾಳೆಂದು ಸೂಚಿತವಾಯಿತು. ಪ್ರಥಮದಲ್ಲಿ ಧರ್ಮರಾಜಾದಿಗಳು ಶಂಖವನ್ನು ಊದದೆ ಕೃಷ್ಣನು ಪ್ರಥಮದಲ್ಲಿ ಊದಿದನೆಂದ ಪ್ರಯುಕ್ತ ಪ್ರತಿಯೊಂದು ಕರ್ಮದಲ್ಲಿಯೂ ಪಾಂಡವರು ಕೃಷ್ಣನನ್ನು ಸಹಕರಿಸಿರುತ್ತಾರೆಂಬುದು ಸೂಚಿತವಾಯಿತು. ॥ ೧೪ ॥

ಇನ್ನು ಸ್ಪಷ್ಟವಾಗಿ ಯಾರ್ಯಾರು ಯಾವ ಶಂಖವನ್ನೂದಿದರೆಂದು ಪ್ರಮುಖರ ನಾಮವನ್ನೂ ಅವರ ಶಂಖದ ನಾಮವನ್ನೂ ಈ ಶ್ಲೋಕಗಳಲ್ಲಿ ವಿವರಿಸುವನು. ಕೃಷ್ಣಾರ್ಜುನರು ಏಕರಥಾರೂಢರಾಗಿ ಯುದ್ಧಸೂಚಕವಾದ ಶಂಖವನ್ನೂದಿದೊಡನೆಯೇ ಶಂಖವನ್ನು ಊದಿದ ಭೀಮನ ವ್ಯಾಪಾರದಿಂದ

ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।
ನಕುಲಸ್ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬ ॥
ಕಾಶ್ಯಶ್ಚ ಪರಮೇಷ್ವಾಸಶ್ಶಿಖಂಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭ ॥
ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಶ್ಶಂಖಂ ದಧ್ಮುಃ ಪೃಥಕ್ಪೃಥಕ್ ॥
ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥

---

ಯಾವಾಗ ಇಂತಹ ಸಮಯವು ಒದಗೀತೆಂದು ಆತನು ಸಮಯನಿರೀಕ್ಷಣೆಯಿಂದ ಉತ್ಸುಕನಾಗಿದ್ದಾನೆಂಬುದು ಸೂಚಿತವಾಯಿತು. ಅನಂತರ ಶಂಖವನ್ನು ಊದಿದ ಯುಧಿಷ್ಠಿರನ ವ್ಯಾಪಾರವು ದುಷ್ಟನಿಗ್ರಹರೂಪವಾದ ಯುದ್ಧಕ್ಕೆ ರಾಜನಾದ ತನ್ನ ಸಮ್ಮತಿಯನ್ನು ತೋರಿಸುತ್ತದೆ. ಆ ಮೇಲೆ ಅಗ್ರಜರನ್ನೇ ಛಾಯೆಯಂತೆ ಅನುಸರಿಸುತ್ತಿರುವ ನಕುಲ-ಸಹದೇವರ ವ್ಯಾಪಾರವನ್ನು ಸೂಚಿಸುವ ಅವರ ಶಂಖಧ್ವನಿಯನ್ನು ಹೇಳಿಯದೆ. ಹೀಗೆ ಪ್ರಮುಖರ ಹೆಸರುಗಳನ್ನು ಹೇಳಿ, ಪಾಂಡವರ ಪುತ್ರರಲ್ಲಿ ಇತರರಂತೆ ಸಾಮಾನ್ಯವಾಗಿ ಪರಿಗ್ರಹಿಸದೆ, ಮಹಾಬಾಹುವೆಂಬುದಾಗಿ-ವಿಶಿಷ್ಯವಾಗಿ ಅಭಿಮನ್ಯುವನ್ನು ಪರಿಗ್ರಹಿಸಿದುದರಿಂದ ವಯಸ್ಸಿನಿಂದ ಸಣ್ಣವನಾಗಿದ್ದರೂ ಪರಾಕ್ರಮದಲ್ಲಿ ಪಿತೃತುಲ್ಯನಾಗಿದ್ದಾನೆಂಬ ಅಭಿಪ್ರಾಯವು ವ್ಯಕ್ತವಾಗುತ್ತದೆ.
॥ ೧೫, ೧೬, ೧೭, ೧೮ ॥

ಈ ಪಾಂಡವಸೇನೆಯಲ್ಲಿ ಮೊಳಗಿದ ವ್ಯಾಪ್ತವಾದ ಧ್ವನಿಯು ಪೃಥಿವ್ಯಾಕಾಶಗಳನ್ನು ಪ್ರತಿಧ್ವನಿಸುತ್ತಾ ದುರ್ಯೋಧನಾದಿಗಳ ಹೃದಯವಿದಾರಕವಾಯಿತು, ಅಂದರೆ ಭಯವನ್ನು ಹುಟ್ಟಿಸಿತು. ಇಲ್ಲಿ ದುರ್ಯೋಧನಾದಿಗಳೆಂದು ಅವರವರ ಹೆಸರೆತ್ತದೆ 'ಧಾರ್ತರಾಷ್ಟ್ರಾಣಾಂ' ಎಂದು ಹೇಳಿದುದರಿಂದ ಕುರುಡನ ಬೆನ್ನು ಹಿಡಿದ ಕುರುಡರಂತೆ ಜ್ಞಾನಹೀನರಾದ ದುರ್ಯೋಧನಾದಿಗಳು ಧರ್ಮೈಕಪರಾಯಣರಾದ ಪಾಂಡವರನ್ನು ದ್ವೇಷಿಸುವುದು ನಿಷ್ಪ್ರಯೋಜನವೆಂದು ಸೂಚಿತವಾಗುತ್ತದೆ. ॥ ೧೯ ॥

ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦ ॥
ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।

॥ ಅರ್ಜುನ ಉವಾಚ ॥

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ॥೨೧॥
ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥೨೨॥
ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ॥೨೩

---

ಇಷ್ಟೆಲ್ಲ ಆರಂಭಸೂಚಕವಾದ ವಾದ್ಯವಿಶೇಷಗಳು ನಡೆದ ಮೇಲೆ ಶಸ್ತ್ರಗಳ ಹೊಡೆದಾಟ ಬೀಳುವ ಪ್ರಸಂಗ ಒದಗಿದಾಗಲೇ ಅರ್ಜುನನು ತನ್ನ ಧನುಸ್ಸನ್ನು ಎತ್ತಿಹಿಡಿದು ಕೃಷ್ಣನನ್ನು ಕುರಿತು ಮುಂದೆ ಹೇಳುವ ಮಾತನ್ನಾಡುವನು. ಇಲ್ಲಿ ಹೃಷೀಕವೆಂದರೆ ಇಂದ್ರಿಯಗಳು. ಅವುಗಳಿಗೆ ಈಶನೆಂದರೆ ನಿಯಾಮಕನು ಎಂದರ್ಥ. ಈ ಅರ್ಥವುಳ್ಳ 'ಹೃಷೀಕೇಶ' ಶಬ್ದವನ್ನು ಕೃಷ್ಣನಿಗೆ ಹೇಳಿದುದು ಕೃಷ್ಣನ ಅಭಿಪ್ರಾಯವನ್ನನುಸರಿಸಿ ಸಕಲ ಜನರ ಸಕಲೇಂದ್ರಿಯ ಪ್ರವೃತ್ತಿಯೂ ನಡೆಯತಕ್ಕುದೆಂದು ತೋರಿಸಲಿಕ್ಕಾಗಿದೆ. ॥ ೨೦ ॥

ದುರ್ಬುದ್ಧಿಯುಳ್ಳ ಅಂಧಾನುಗಾಮಿಯಾದ ಈ ದುರ್ಯೋಧನನಿಗೆ ಪ್ರೀತಿಯುಂಟುಮಾಡಲಿಚ್ಛೆಯಿಂದ ಇಲ್ಲಿ ಯಾರ್ಯಾರು ಕೂಡಿರುವರು? ಎರಡು ಸೇನೆಗಳ ಮಧ್ಯದಲ್ಲಿ ನನ್ನ ರಥವನ್ನು ಕೊಂಡೊಯ್ದು ನಿಲ್ಲಿಸು. ಯುದ್ಧೇಚ್ಛುಗಳಾಗಿ ಅಲ್ಲಿ ಕೂಡಿದವರನ್ನು ನೋಡುತ್ತೇನೆ, ಎಂದು ಅರ್ಜುನನು ಹೇಳಿದನು. ಇಲ್ಲಿ ರಥವನ್ನು ನಿಲ್ಲಿಸು, ಜನರನ್ನು ನೋಡುತ್ತೇನೆಂದು ಹೇಳಿದುದು ನನ್ನಿಂದ ಕೂಡಿ ಯುದ್ಧಮಾಡಲು ಯಾರು ಯೋಗ್ಯರು, ಯಾರು ಅಯೋಗ್ಯರೆಂದು ತಿಳಿಯುವ ಅಭಿಪ್ರಾಯದಿಂದ. ॥ ೨೧,೨೨,೨೩ ॥

ಈ ಪ್ರಕಾರ ಅರ್ಜುನನು ಹೇಳಿದೊಡನೆಯೇ ಶ್ರೀಕೃಷ್ಣನು ಉತ್ತಮವಾದ ಅರ್ಜುನನ ರಥವನ್ನು ಎರಡು ಸೇನೆಗಳ ಮಧ್ಯದಲ್ಲಿ ಭೀಷ್ಮ ದ್ರೋಣ

॥ ಸಂಜಯ ಉವಾಚ ॥

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ ೨೪
ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಂ ।
ಉವಾಚ ಪಾರ್ಥ ಪಶ್ಯೈತಾನ್ಸಮವೇತಾನ್ಕುರೂನಿತಿ ॥ ೨೫ ॥
ತತ್ರಾಪಶ್ಯತ್ಸ್ಥಿತಾನ್ಪಾರ್ಥಃ ಪಿತೄನಥ ಪಿತಾಮಹಾನ್ ।
ಆಚಾರ್ಯಾನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್ಸಖೀಂಸ್ತಥಾ ॥
ಶ್ವಶುರಾನ್ಸುಹೃದಶ್ಚೈವ ಸೇನಯೋರುಭಯೋರಪಿ ।
ತಾನ್ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ಬಂಧೂನವಸ್ಥಿತಾನ್॥೨೭)
ಕೃಪಯಾ ಪರಯಾಽಽವಿಷ್ಟೋ ವಿಷೀದನ್ನಿದಮಬ್ರವೀತ್ ।

---

ರಿಗಿದಿರಾಗಿ ಸರ್ವ ರಾಜರ ಮುಂದೆಯೇ ನಿಲ್ಲಿಸಿ ಇಲ್ಲಿ ನೆರೆದ ಕೌರವಾನು ಯಾಯಿಗಳನ್ನು ನೋಡೆಂದು ಹೇಳಿದನು. (ಹೀಗೆ ಸಂಜಯನು ಧೃತ ರಾಷ್ಟ್ರನನ್ನು ಕುರಿತು ಹೇಳಿದನು.) ॥ ೨೪, ೨೫ ॥

ಎರಡು ಸೇನೆಗಳ ಮಧ್ಯದಲ್ಲಿ ಸರ್ವ ಬಂಧುಗಳನ್ನು ಎಂದರೆ ಕೆಲವರು ತಂದೆಗೆ ಸಮಾನನಾದವರು, ಕೆಲವರು ಪಿತಾಮಹರಿಗೆ ಸಮರು, ಕೆಲವರು ವಿದ್ಯೋಪದೇಷ್ಟೃಗಳು, ಕೆಲವರು ಮಾತುಲಸಮಾನರು. ಹೆಚ್ಚೇನು? ವಿಚಾರಮಾಡಿದರೆ ಲೋಕದಲ್ಲಿ ಎಷ್ಟು ವಿಧದ ಬಂಧುಗಳು-ಮಿತ್ರರು ಇರು ವರೋ, ಅಷ್ಟು ಬಂಧುಮಿತ್ರರೂ ಯುದ್ಧದಲ್ಲಿ ಪ್ರಾಣಕೊಡಲು ಸಿದ್ಧರಿದ್ದಾರೆ. ಈ ಬಂಧುಮಿತ್ರರಲ್ಲಿ ಸ್ತ್ರೀಯರ ಹೊರತು ಮಿಕ್ಕವರೆಲ್ಲರೂ ಸಿದ್ಧರಾಗಿ ನಿಂತಿ ದ್ದಾರೆ. ಈ ಸಮಸ್ತ ಬಂಧುಗಳನ್ನು ನೋಡಿ ಕರುಣೆಯಿಂದ ದುಃಖಪಡು ವವನಾಗಿ ಅರ್ಜುನನು ಮುಂದಿನ ಮಾತನ್ನಾಡಿದನು. ॥ ೨೬. ೨೭. ॥

ಹೇ ಶ್ರೀಕೃಷ್ಣ! ಈ ಪ್ರಕಾರ ಯುದ್ಧೇಚ್ಛುಗಳಾಗಿ ಕೂಡಿದ ಸ್ವಕೀಯ ರನ್ನು ನೋಡಿ ನನ್ನ ಅಂಗಗಳು ಸೀಳಲ್ಪಟ್ಟವುಗಳಂತೆ ತೋರುತ್ತವೆ. ಮುಖವು ಒಣಗುತ್ತದೆ, ಶರೀರದಲ್ಲಿ ಕಂಪವೂ ರೋಮಾಂಚವೂ ಆಗುತ್ತದೆ. ಕೈಯಿಂದ ಗಾಂಡೀವಧನುಸ್ಸು ತಾನಾಗಿ ಬಿದ್ದುಹೋಗುವಂತೆ ತೋರುತ್ತದೆ. ಚರ್ಮವು ಉರಿಯುವಂತಾಗುತ್ತದೆ. ನಿಲ್ಲಲು ಶಕ್ತನಾಗುವುದಿಲ್ಲ. ನನ್ನ

॥ ಅರ್ಜುನ ಉವಾಚ ॥

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ॥೨೮॥
ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥ ೨೯ ॥
ಗಾಂಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥೩೦॥
ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ ೩೧ ॥
ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।
ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ॥೩೨
ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಸ್ಸುಖಾನಿ ಚ ।
ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥೩೩॥
ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।
ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥೩೪॥
ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।
ಅಪಿ ತ್ರೈಲೋಕ್ಯರಾಜಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫ ॥

---

ಮನಸ್ಸು ಭ್ರಮಿಸಿದಂತೆ ತೋರುತ್ತದೆ. ಕೆಟ್ಟ ಕೆಟ್ಟ ಶಕುನಗಳು ಕಾಣುತ್ತವೆ. ಈ ಯುದ್ಧದಲ್ಲಿ ಬಂಧುಗಳನ್ನು ಕೊಂದು ಶ್ರೇಯಸ್ಸಾದೀತೆಂದು ತಿಳಿಯುವುದಿಲ್ಲ. ಆದಕಾರಣ ಜಯವನ್ನಾಗಲಿ, ರಾಜಸಂಪತ್ತನ್ನಾಗಲಿ, ಅದರಿಂದಾಗುವ ಸುಖವನ್ನಾಗಲಿ ನಾನು ಅಪೇಕ್ಷಿಸುವುದಿಲ್ಲ. ॥ ೨೮, ೨೯, ೩೦, ೩೧, ೩೨ ॥

ಯಾವ ಬಂಧುಗಳ ಉದ್ದಿಶ್ಯವಾಗಿ ನಮಗೆ ಸುಖಗಳೂ ರಾಜ್ಯವೂ ಭೋಗಗಳೂ ಅಪೇಕ್ಷಿತಗಳೋ, ಅಂತಹ ಬಂಧುಗಳೇ ಧನ-ಪ್ರಾಣಗಳ ಆಶೆಯನ್ನು ತೊರೆದು ಯುದ್ಧದಲ್ಲಿ ಸನ್ನದ್ಧರಾಗಿದ್ದಾರೆ. ॥ ೩೩, ೩೪ ॥

ಈ ಬಂಧುಗಳು ನನ್ನನ್ನು ಕೊಲ್ಲುವುದಾದರೂ ನಾನು ಅವರನ್ನು ಕೊಲ್ಲಲು ಇಚ್ಛಿಸುವುದಿಲ್ಲ. ಇಲ್ಲಿ ನೀನೂ ಕೂಡಾ ದೈತ್ಯಸಂಹಾರಕನೇ

ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬ ॥
ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್
ಸ್ವಬಾಂಧವಾನ್ ।
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭ ॥

---

ಹೊರತು ಬಂಧುಗಳನ್ನು ಹಿಂಸಿಸಿದವನಲ್ಲ. ಆದುದರಿಂದ ನನಗೂ ಅಂತಹ ಕಾರ್ಯದಲ್ಲಿ ಪ್ರೇರಣೆಮಾಡಲಿಕ್ಕಿಲ್ಲವೆಂಬ ಅಭಿಪ್ರಾಯದಿಂದ ಶ್ರೀಕೃಷ್ಣನಿಗೆ 'ಮಧುಸೂದನ' (ಮಧುನಾಮಕ ದೈತ್ಯನಾಶಕ) ಎಂದು ಸಂಬೋಧನ ಮಾಡಿದುದು, ಮತ್ತು ತ್ರಿಲೋಕಾಧಿಪತ್ಯವು ನನಗೆ ಸಿಗುವುದಾದರೂ, ಅದರ ಉದ್ದಿಶ್ಯದಿಂದ ನಾನು ಈ ಬಂಧುಗಳನ್ನು ಸಂಹರಿಸಲಿಕ್ಕಿಲ್ಲ. ಹೀಗಿರುವಾಗ ಈ ಅಲ್ಪವಾದ ಪೃಥಿವೀಮಾತ್ರದ ಉದ್ದಿಶ್ಯವಾಗಿ ಬಂಧುಗಳನ್ನು ಸಂಹರಿಸಲಿಕ್ಕಿಲ್ಲವೆಂದು ಏನು ಹೇಳಬೇಕು? ॥ ೩೫ ॥

ಅಂಧರಂತಿರುವ ನಮ್ಮವರಾದ ಈ ದುರ್ಯೋಧನಾದಿಗಳನ್ನು ಕೊಂದು ನಮಗೇನು ಸುಖವಾದೀತು? ಇಲ್ಲಿ 'ಧಾರ್ತರಾಷ್ಟ್ರಾನ್' ಎಂಬ ಪದಸೂಚಿತವಾದ ಅರ್ಥ ಅಂಧರಂತಿರುವ ದುರ್ಯೋಧನಾದಿಗಳೆಂದು. ಈ ವರೆಗೆ ಐಹಿಕ ಸುಖವು ಯುದ್ಧದಿಂದಿಲ್ಲವೆಂದು ಸಮರ್ಥಿಸಿ, ಪಾರತ್ರಿಕ ಸುಖವೂ ಕೂಡ ಯುದ್ಧದಿಂದಿಲ್ಲವೆಂದು ಅರ್ಜುನನು ಸಮರ್ಥಿಸುವನು. ಲಾಕ್ಷಾಗೃಹದಾಹಾದಿಗಳಿಂದ ಆತತಾಯಿಗಳಾದ ಇವರನ್ನು ಕೊಂದರೂ ನಮಗೆ ಪಾಪವೇ ಸಂಭವಿಸೀತು. ಆದಕಾರಣ ಸ್ವಬಂಧುಗಳಾದ ಇವರನ್ನು ಕೊಲ್ಲಲು ನಾವು ಯೋಗ್ಯರಲ್ಲ. 'ಆತತಾಯಿನಮಾಯಾಂತಂ ಹನ್ಯಾ-ದೇವಾವಿಚಾರಯನ್' ಎಂದು ಶಾಸ್ತ್ರವಿರುವಕಾರಣ ದಾರಧರ್ಷಣ ವಿಷಾದಿದಾನ ಪ್ರಯುಕ್ತ ದುರ್ಯೋಧನಾದಿಗಳು ಆತತಾಯಿಗಳೇ ಆದರೂ ಬಂಧುಗಳಾಗಿದ್ದ ಪ್ರಯುಕ್ತ 'ಯೇಷಾಮರ್ಥೇ' ಎಂಬ ಯುಕ್ತಿಯಿದ್ದ ಪ್ರಯುಕ್ತ, ಕೊಲ್ಲಲು ಯೋಗ್ಯರಲ್ಲವೆಂದು ಅರ್ಜುನನ ಅಭಿಪ್ರಾಯವು.॥೩೬॥

ಈ ವರೆಗೆ ಅರ್ಜುನನು ತನ್ನ ಅವಸ್ಥೆಯನ್ನು ಹೇಳಿ ತಾನು ಯುದ್ಧ ಮಾಡುವುದಿಲ್ಲವೆಂದು ತನ್ನೊಬ್ಬನನ್ನು ವಿಷಯೀಕರಿಸಿ ಹೇಳಿದ್ದರೂ, ದಾರ

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥೩೮॥**
**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**
**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ॥ ೪೦ ॥**

---

ಘರ್ಷಣ ಅಗ್ನಿದಾನಾದಿಗಳು ಸರ್ವಸಾಧಾರಣವಾಗಿದ್ದುದರಿಂದ ನಮಗೆಲ್ಲರಿಗೂ, ವಿಶೇಷವಾಗಿ ವಿಷದಾನದಿಂದ ಭೀಮನಿಗೂ, ಆತತಾಯಿಗಳಾಗಿರುವ ದುರ್ಯೋಧನಾದಿಗಳು ನಮ್ಮೆಲ್ಲರಿಗೂ ವಧ್ಯರೇ ಆಗಿದ್ದರೂ ಬಂಧುಗಳಾದ ಪ್ರಯುಕ್ತ ನಾವು ಯಾರೂ ಅವರನ್ನು ಕೊಲ್ಲಲರ್ಹರಲ್ಲವೆಂಬ ಅಭಿಪ್ರಾಯದಿಂದ 'ವಯಂ ನಾರ್ಹಾಃ' ಎಂದು ಬಹುವಚನವನ್ನು ಕೊಟ್ಟಿದುದಾಗಿದೆ. ಆದುದರಿಂದ ಹೇ ಕೃಷ್ಣ! ನಮ್ಮ ಬಂಧುಜನರನ್ನು ಕೊಂದು ನಾವು ಹೇಗೆ ಸುಖಿಗಳಾದೇವು? ॥ ೩೭ ॥

ರಾಜ್ಯಲೋಭದಿಂದ ಕಲುಷಿತ ಮನಸ್ಸುಳ್ಳ ದುರ್ಯೋಧನಾದಿಗಳು ವಂಶನಾಶದಿಂದುಂಟಾಗುವ ದೋಷವನ್ನೂ ಮಿತ್ರದ್ರೋಹದಿಂದೊದಗುವ ಪಾತಕವನ್ನೂ ತಿಳಿಯದೆ ಯುದ್ಧೋದ್ಯುಕ್ತರಾದರೂ ಆ ದೋಷಗಳನ್ನೆಲ್ಲ ತಿಳಿದಿರುವ ನಾವು ಈ ಪಾತಕವು ಸಂಭವಿಸದಂತೆ ಏಕೆ ಜಾಗರೂಕರಾಗಿರಬಾರದು? ॥ ೩೮, ೩೯ ॥

ತಮ್ಮ ಕುಲವನ್ನು ನಾಶಪಡಿಸಿದರೆ ಕುಲದಲ್ಲಿ ಪರಂಪರಾಪ್ರಾಪ್ತವಾದ ಧರ್ಮಗಳು ಕರ್ತೃಗಳಿಲ್ಲದ ಪ್ರಯುಕ್ತ ನಾಶವನ್ನು ಹೊಂದುತ್ತವೆ ಧರ್ಮವು ಲುಪ್ತಗಳಾದ ಕೂಡಲೇ ಆ ಸ್ಥಾನದಲ್ಲಿ ಅಧರ್ಮಗಳು ತಮ್ಮ ಅಧಿಕಾರವನ್ನು ತೋರಿಸುತ್ತವೆ. ॥ ೪೦ ॥

ಅಧರ್ಮಗಳು ವ್ಯಾಪಿಸಿದ ಪ್ರಯುಕ್ತ ಸ್ತ್ರೀಯರು ದುಷ್ಟರಾಗುತ್ತಾರೆ. ಸ್ತ್ರೀಯರು ದುಷ್ಟರಾದರೆ ಜಾತಿಸಾಂಕರ್ಯವು ಪ್ರಾಪ್ತವಾಗುತ್ತದೆ. ಆ ಜಾತಿಸಾಂಕರ್ಯವು ಕುಲವನ್ನು ನಾಶಮಾಡಿದವರಿಗೂ ಕುಲಕ್ಕೂ ನರಕಾದಿ ಪ್ರಾಪ್ತಿಗೆ ಕಾರಣವಾಗುತ್ತದೆ. ಇಷ್ಟು ಮಾತ್ರವಲ್ಲದೆ ಈ ಕುಲದ ಪಿತೃಗಳೂ

ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ।
ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ॥೪೧॥
ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ।
ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥೪೨॥
ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ।
ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥೪೩॥
ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ।
ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪ ॥
ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್।
ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ ೪೫ ॥

---

ಕೂಡಾ ಕರ್ತೃಗಳಿಲ್ಲದ ಪ್ರಯುಕ್ತ ಪಿಂಡಕ್ರಿಯಾದಿರೂಪ ಕ್ರಿಯಾಲೋಪ ವನ್ನು ಹೊಂದಿದವರಾಗಿ ಅಧಃಪಾತವನ್ನು ಹೊಂದುತ್ತಾರೆ. ॥ ೪೧, ೪೨ ॥

ಹೀಗೆ ಕುಲನಾಶಕರಾದವರ ಹಿಂದೆ ಹೇಳಿದ ವರ್ಣಸಾಂಕರ್ಯ ಮೊದಲಾದ ದೋಷಗಳಿಂದ ಪುನಃಪುನಃ ಕುಲಪರಂಪರಾಪ್ರಾಪ್ತಗಳಾದ ಧರ್ಮಗಳೂ ಜಾತಿಧರ್ಮಗಳೂ ಕೆಡಿಸಲ್ಪಡುತ್ತವೆ. ಎಲೈ ಜನಾರ್ದನ! ಕುಲಧರ್ಮಭ್ರಷ್ಟರಾದ ಮನುಷ್ಯರಿಗೆ ನರಕವಾಸವು ನಿಶ್ಚಿತವೆಂದು ನಾನು ಕೇಳಿದ್ದೇನೆ. ಇಲ್ಲಿ 'ಜನಾರ್ದನ' ಎಂದೂ ಹಿಂದೆ 'ಮಾಧವ' ಎಂದೂ ಸಂಬೋಧನೆ ಮಾಡಿದ ಕಾರಣ ನೀನು ಸಕಲ ಜನಸಂಹಾರ ಮಾಡಿದರೂ, ದೋಷದೂರನಾದ ನಿನಗೆ ಯಾವ ವಿಚಾರವೂ ಅನಾವಶ್ಯಕವು. ಏನು ಮಾಡಿದರೂ ನೀನು ಲಕ್ಷ್ಮೀಪತಿಯೇ ಆಗಿರುವೆ. ವಿಧಿಬದ್ಧರಾದ ನಾವು ಮಾತ್ರ ಪುಣ್ಯಪಾಪಕ್ಕೆ ಭಾಗಿಗಳಾಗುವೆವಾದ ಪ್ರಯುಕ್ತ ಇಂತಹ ಪಾಪಸಾಧನವಾದ ಕಾರ್ಯಮಾಡಲಂಜುವೆವೆಂದು ಅರ್ಜುನನ ಹಾರ್ದವು ಸೂಚಿತವಾಯಿತು. ॥ ೪೩, ೪೪ ॥

ಇಂತಹ ದೊಡ್ಡ ಪಾಪವನ್ನು ಮಾಡಲಿಕ್ಕೆ ನಾವು ಉದ್ಯುಕ್ತರಾಗಿದ್ದೇವೆ. ಬಹಳ ಕಷ್ಟ! ಏನೆಂದರೆ ಈ ರಾಜ್ಯಪ್ರಾಪ್ತಿಯಿಂದ ಸುಖವುಂಟಾಗುವುದೆಂಬ ದುರಾಶೆಯಿಂದ ಸ್ವಜನರನ್ನು ಕೊಲ್ಲಲುದ್ಯುಕ್ತರಾಗಿದ್ದೇವೆ. ಈ

ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥

॥ ಸಂಜಯ ಉವಾಚ ॥

ಏವಮುಕ್ತ್ವಾಽರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭ ॥

॥ ಇತಿ ಪ್ರಥಮೋಽಧ್ಯಾಯಃ ॥

---

ದುಃಖವನ್ನನುಭವಿಸುವುದಕ್ಕಿಂತ ಧೃತರಾಷ್ಟ್ರಪುತ್ರರಾದ ದುರ್ಯೋಧನಾದಿಗಳು ಶಸ್ತ್ರಧರಿಸದೆ ಪ್ರತೀಕಾರಮಾಡದೆ ಸುಮ್ಮನಿರುವ ನನ್ನನ್ನು ಶಸ್ತ್ರಪಾಣಿಗಳಾಗಿ ಬಂದು ಕೊಂದರೆ ನನಗದು ಹಿತಕರವಾದೀತು. ॥ ೪೫, ೪೬ ॥

ಈ ಪ್ರಕಾರ ಹೇಳಿ ದುಃಖದಿಂದ ಕಳವಳಗೊಂಡ ಮನಸ್ಸಿನವನಾದ ಅರ್ಜುನನು ಬಿಲ್ಲುಬಾಣಗಳನ್ನು ಬಿಟ್ಟುಬಿಟ್ಟು, ರಥಮಧ್ಯದಲ್ಲಿಯೇ ಕುಳಿತುಕೊಂಡನೆಂಬರ್ಥವನ್ನು ಸಂಜಯನು ಧೃತರಾಷ್ಟ್ರನಿಗೆ ಬೋಧಿಸಿದನೆಂದು ಪ್ರಥಮಾಧ್ಯಾಯಾರ್ಥವು. ॥ ೪೭ ॥

# ದ್ವಿತೀಯೋಽಧ್ಯಾಯಃ

॥ ಸಂಜಯ ಉವಾಚ ॥

ತಂ ತಥಾ ಕೃಪಯಾಽಽವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।
ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ ೧ ॥

॥ ಶ್ರೀಭಗವಾನುವಾಚ ॥

ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।
ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥
ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ ನೈತತ್ ತ್ವಯ್ಯುಪಪದ್ಯತೇ ।
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩ ॥

---

ಅರ್ಜುನನು ಶರಸನ್ಯಾಸ ಮಾಡಿದ ಪ್ರಯುಕ್ತ ಇನ್ನು ನನ್ನ ಮಕ್ಕಳಿಗೆ ನಿರ್ವಿಘ್ನ ವಾಗಿ ರಾಜ್ಯಪ್ರಾಪ್ತಿಯಾದೀತೆಂಬೀ ಧೃತರಾಷ್ಟ್ರನ ಆಶೆಯನ್ನು ನಿರಾಕರಿಸುವ ಉದ್ದಿಶ್ಯ ಸಂಜಯನು ಹೇಳುವನು—

ಹಿಂದೆ ಹೇಳಿದಂತೆ ಕರುಣಾವಶದಿಂದ ಕಣ್ಣೀರನ್ನು ಸುರಿಸಿ, ದುಃಖಿಸುವ ಅರ್ಜುನನನ್ನು ಕುರಿತು ಶ್ರೀಕೃಷ್ಣನು ಮುಂದೆ ಹೇಳುವ ಮಾತನ್ನು ಹೇಳುವನು. ॥ ೧ ॥

ಎಲೈ ಅರ್ಜುನನೇ! ಈ ಸಂಕಟಪ್ರಾಯವಾದ ಯುದ್ಧಸಮಯದಲ್ಲಿ ಅಯಶಸ್ಕರವಾದ ಪ್ರಯುಕ್ತ ಐಹಿಕಸುಖಕ್ಕೂ ಸ್ವರ್ಗಸಾಧನವಾಗದಿರುವ ಕಾರಣ ಆಮುಷ್ಮಿಕಸುಖಕ್ಕೂ ವಿರೋಧಿಯಾದ ಈ ಅಜ್ಞಾನವು ನಿನಗೆ ಎಲ್ಲಿಂದ ಬಂದಿತು? ಎಲೈ ಪಾರ್ಥ! ಈ ಷಂಡತನವನ್ನು ಹೊಂದಬೇಡ. ಯುದ್ಧದಲ್ಲಿ ಕಿರಾತರೂಪಿಯಾದ ರುದ್ರನನ್ನು ಸಂತೋಷಪಡಿಸಿದ ನಿನ್ನಲ್ಲಿ ಇದು ಯುಕ್ತವಲ್ಲ. ಆದಕಾರಣ ಹೃದಯಕ್ಕೆ ದೌರ್ಬಲ್ಯಸಂಪಾದಕವಾದ ಈ ಅಲ್ಪ ಹೇಡಿತನವನ್ನು ಬಿಟ್ಟು ಯುದ್ಧಸನ್ನದ್ಧನಾಗು. ಇಲ್ಲಿ 'ಅರ್ಜುನ' ಎಂದರೆ 'ಧವಲ' ಸ್ವಚ್ಛನು-ಎಂದರ್ಥ. ಈ ಶಬ್ದವು ಸ್ವಚ್ಛನಾದ ನಿನಗೆ ಮೋಹವು ಯುಕ್ತವಲ್ಲವೆಂದು ಸೂಚಿಸುತ್ತದೆ. ಹೀಗೆ 'ಪಾರ್ಥ' ಎಂಬುದು 'ಪೃಥೋಃ ಸಂಭೂತ'ವೆಂಬ ಅರ್ಥವುಳ್ಳದ್ದಾಗಿ ಕ್ಷತ್ರಿಯೋತ್ತಮಕುಲದಲ್ಲಿ

॥ ಅರ್ಜುನ ಉವಾಚ ॥

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**
**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷಮಪೀಹ ಲೋಕೇ ।**
**ಹತ್ವಾಽರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ರುಧಿರಪ್ರದಿಗ್ಧಾನ್ ॥ ೫ ॥**

---

ಸಂಭೂತನಾದ ನಿನಗೆ ಈ ನಿರ್ವೀರ್ಯತ್ವವು ಉಚಿತವಲ್ಲವೆಂದು ಸೂಚಿಸುತ್ತದೆ. ಹೀಗೆ 'ಪರಂತಪ' ಎಂದರೆ ಶತ್ರುಗಳಿಗೆ ತಾಪವನ್ನು ಕೊಡುವ ನಿನಗೆ ಈ ಶತ್ರುಸಂತೋಷಕರವಾದ ದುರ್ದಶೆಯೂ ಅನುಚಿತವು. ಇಂತಹ ಅಭಿಪ್ರಾಯವನ್ನು ಈ ಸಂಬೋಧನಗಳಿಂದ ಸಖನಾದ ಅರ್ಜುನನಿಗೆ ಶ್ರೀಕೃಷ್ಣನು ಬೋಧಿಸುತ್ತಾನೆ. ॥ ೨, ೩ ॥

ಎಲೈ ಶತ್ರುನಾಶಕನಾದ ಶ್ರೀಕೃಷ್ಣನೆ! ಪರಮಬಂಧುಗಳಾದ ಭೀಷ್ಮರನ್ನೂ ಗುರುಗಳಾದ ದ್ರೋಣಾಚಾರ್ಯರನ್ನೂ ಯುದ್ಧದಲ್ಲಿ ಬಾಣಗಳಿಂದ ಹೇಗೆ ಪ್ರತಿಯಾಗಿ ಹೊಡೆಯಲಿ? ಅವರು ಪೂಜಾಯೋಗ್ಯರಷ್ಟೆ! ನಿನಗೂ ಕೂಡಾ ಭೀಷ್ಮ-ದ್ರೋಣರು ಭಕ್ತರು. ಆದಕಾರಣ ಅವರನ್ನು ಸಂಹರಿಸೆಂದು ನೀನು ಪ್ರೇರಿಸಲಿಕ್ಕಿಲ್ಲ ನೀನು ಕೂಡಾ ದುಷ್ಟಸಂಹಾರಕನೇ ಅಲ್ಲದೆ ಭಕ್ತಸಂಹಾರಿಯಲ್ಲ. ಈ ಅಭಿಪ್ರಾಯದಿಂದ ಭೀಷ್ಮ-ದ್ರೋಣರ ಹೆಸರನ್ನೇ ಮೊದಲು ಉಲ್ಲೇಖಿಸಿ, ಶ್ರೀಕೃಷ್ಣನನ್ನು 'ಮಧುಸೂದನ' ಎಂದು ಸಂಬೋಧಿಸಿದುದು. ॥ ೪ ॥

ರಾಜ್ಯವು ಸಿಗುವುದೆಂಬ ದುರಾಶೆಯಿಂದಾದರೂ ಯುದ್ಧವು ಉಚಿತವಲ್ಲವೆಂದು ಅರ್ಜುನನು ಹೇಳಲು ಉಪಕ್ರಮಿಸುವನು. ಪೂಜ್ಯರಾದ ಗುರುಗಳನ್ನು ಸಂಹರಿಸದೆ ಈ ಭೂಮಿಯಲ್ಲಿ ಭಿಕ್ಷಾವೃತ್ತಿಯಿಂದ ಇರುವುದಾದರೂ ಶ್ರೇಯಸ್ಕರ. ಈ ಸಂಪತ್ಕಾಮುಕರಾದ ಗುರುಗಳನ್ನು ಕೊಂದು ರಾಜ್ಯಪ್ರಾಪ್ತಿಯಾದರೂ, ಅವರ ರಕ್ತದಿಂದ ತೊಯ್ದ ಭೋಗಗಳನ್ನು ಭೋಗಿಸಬೇಕಾದೀತು,ಎಂದರೆ ಅವರ ಆಸನಾದಿಗಳಲ್ಲಿ ಕುಳಿತು ಅವರಿಂದ ಪರಿಗೃಹೀತ

ನ ಚೈತದ್ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।
ಯಾನೇವ ಹತ್ವಾ ನ ಜಿಜೀವಿಷಾಮ-
ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ ೬ ॥
ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥ ೭ ॥
ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ-
ದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।
ಅವಾಪ್ಯ ಭೂಮಾವಸಪತ್ನಮೃದ್ಧಂ
ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥ ೮ ॥

---

ತವಾದ ಅರ್ಥಗಳನ್ನು ಸ್ವೀಕರಿಸಿ ಅವರ ಭೋಗ್ಯವಿಷಯ ವಸ್ತುಗಳ ಭೋಗವೇ 'ರುಧಿರಪ್ರದಿಗ್ಧ ಭೋಗ'ವು. ॥ ೫ ॥

ಪಾಪ ಬರಲೆಂದು ಅಂಗೀಕರಿಸಿದರೂ ಫಲವು ನಿಶ್ಚಿತವಲ್ಲ. ಈ ಮುಂದಿನ ಎರಡು ಕಲ್ಪಗಳಲ್ಲಿ ಯಾವುದು ಉತ್ತಮ ಎಂದರೆ ಅಧಿಕವಾದು ದೆಂದು ನಾನು ನಿಶ್ಚೈಸಲಾರೆನು. ಅವುಗಳು ಯಾವುವೆಂದರೆ— ಯುದ್ಧದಲ್ಲಿ ನಮ್ಮನ್ನವರು ಜಯಿಸುವರೊ, ಅವರನ್ನು ನಾವು ಜಯಿಸುವೆವೊ? ಒಂದು ವೇಳೆ ನಮಗೆ ಜಯವು ಲಭಿಸಿದರೂ ಅದು ಪರಾಜಯವೆಂದೇ ತಿಳಿಯಬೇಕಾ ಗುತ್ತದೆ. ಏಕೆಂದರೆ, ನಾವು ಯಾರನ್ನು ಸಂಹರಿಸಿ ಬದುಕಲಿಚ್ಛಿಸುವು ದಿಲ್ಲವೋ, ಅಂತಹ ಧಾರ್ತರಾಷ್ಟ್ರರು ಯುದ್ಧಾರ್ಥವಾಗಿ ಸಮ್ಮುಖದಲ್ಲಿ ನಿಂತಿ ದ್ದಾರೆ. ಬಂಧುತ್ವಲೋಭದೋಷದಿಂದ ಕ್ಷತ್ರಿಯ ಸ್ವಭಾವೋಚಿತ ಶೌರ್ಯಾ ದಿಗಳನ್ನು ತಡೆದುಕೊಂಡ ನಾನು ಧರ್ಮದಲ್ಲಿ ಸಂದಿಗ್ಧವಾದ ಮನಸ್ಸುಳ್ಳವ ನಾಗಿ ನಿನ್ನನ್ನು ಕೇಳುತ್ತೇನೆ. ಭಿಕ್ಷಾಟನವು ಶ್ರೇಯಸ್ಕರವೊ, ಯುದ್ಧವು ಶ್ರೇಯಸ್ಕರವೊ? ಎಂದು ನಿಶ್ಚಯವಾಗಿ ನೀನೇ ಹೇಳು. ನಾನು ನಿನ್ನ ಶಿಷ್ಯನು, ನಿನ್ನನ್ನು ಮರೆಹೊಂದಿರುವೆನು. ಆದಕಾರಣ ನನಗೆ ಉಪದೇಶಿಸು.

॥ ಸಂಜಯ ಉವಾಚ ॥

ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।
ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥
ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।
ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦ ॥

---

ಇಂದ್ರಿಯಗಳ ಶಕ್ತಿಯನ್ನು ಕುಗ್ಗಿಸುವ ನನ್ನ ಶೋಕದ ಉಪಶಮನವನ್ನು ಯಾವುದು ಮಾಡೀತೋ, ಅದನ್ನು ನಾನು ತಿಳಿಯುವುದಿಲ್ಲ. ಯುದ್ಧದಿಂದ ಜಯ ಲಾಭವಾದರೂ ನನ್ನ ದುಃಖ ನಿವೃತ್ತಿಯಾದೀತೆಂದು ನಾನು ತಿಳಿಯಲಾರೆನು. ವೈರಿಗಳಿಲ್ಲದ ಸಂಪನ್ನವಾದ ರಾಜ್ಯಪ್ರಾಪ್ತಿಯು ಸಾಕ್ಷಾತ್ ದೇವೇಂದ್ರನ ಪದವಿಯು ದೊರೆತರೂ ನಿವೃತ್ತಿಹೊಂದದ ಶೋಕದ ನಿವೃತ್ತಿಗೆ ಹೇಗೆ ಕಾರಣವಾದೀತು? ಹೀಗೆ ಅರ್ಜುನನ ಮಾತನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ. ॥ ೬, ೭, ೮ ॥

ಅರ್ಜುನನು ಸರ್ವೇಂದ್ರಿಯಪ್ರೇರಕನಾದ ಶ್ರೀಕೃಷ್ಣನನ್ನು ಕುರಿತು ಈ ಪ್ರಕಾರ ಹೇಳುತ್ತಾ ಯುದ್ಧಮಾಡಲಾರೆನೆಂದು ಹೇಳಿ ಸುಮ್ಮನಾದನು. ಇಲ್ಲಿ 'ಹ'ಎಂಬ ಅವ್ಯಯ ಶಬ್ದವು ಅರ್ಜುನನಿಗೂ ಸಹ ಇಂತಹ ಬುದ್ಧಿಯು ಹುಟ್ಟಿತಲ್ಲ ಎಂದು ಆಶ್ಚರ್ಯವನ್ನು ಸೂಚಿಸುತ್ತದೆ. ಏಕೆಂದರೆ ಅವನು 'ಗುಡಾಕೇಶ'=ನಿದ್ರಾಶೂನ್ಯ ಮತ್ತು 'ಪರಂತಪ'=ಶತ್ರುತಾಪಕ ಇಂತಹವನಿಗೂ ಈ ಬುದ್ಧಿಯು ಬಂದಿತಲ್ಲ! ಎಂದು ಆಶ್ಚರ್ಯವು. ಇಂತಹ ನನ್ನನ್ನು ಒಳ್ಳೆಯ ದಾರಿಯಲ್ಲಿ ಪ್ರೇರಣೆಮಾಡಬೇಕಾಗಿದ್ದರೆ ಸಕಲೇಂದ್ರಿಯ ಪ್ರೇರಕನೆಂದು ನಿಖಿಲಾಗಮವೇದ್ಯನಾದ ನೀನೇ ಸಮರ್ಥನೆಂಬ ಅಭಿಪ್ರಾಯದಿಂದ ಶ್ರೀಕೃಷ್ಣನಿಗೆ 'ಹೃಷೀಕೇಶ', 'ಗೋವಿಂದ' ಎಂಬೀ ಪದದ್ವಯವನ್ನು ಕೊಟ್ಟದು. ಮುಂದೇನು ನಡೆದೀತೆಂದು ಧೃತರಾಷ್ಟ್ರನ ಶಂಕೆಯನ್ನು ಸಂಜಯನು ಮೇಲಿನ ಶ್ಲೋಕದಿಂದ ಪರಿಹರಿಸುವನು. ॥ ೯ ॥

ಹೀಗೆ ಎರಡು ಸೇನೆಗಳ ಮಧ್ಯದಲ್ಲಿ ದುಃಖಿಸುವ ಅರ್ಜುನನನ್ನು ಕುರಿತು ಸರ್ವೇಂದ್ರಿಯಪ್ರೇರಕನಾದ ಶ್ರೀಕೃಷ್ಣನು ನಗುತ್ತಾ ಮುಂದಿನ

॥ ಶ್ರೀಭಗವಾನುವಾಚ ॥

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥**

---

ಮಾತನ್ನಾಡಿದನು. ಇಲ್ಲಿ ಉಪಹಾಸಸೂಚಕವಾದುದು ಶ್ರೀಕೃಷ್ಣನ ಉಕ್ತಿಯೆಂದು ತೋರಿಸಲಿಕ್ಕೆ 'ಇವ' ಎಂಬ ಶಬ್ದವನ್ನು ಕೊಟ್ಟಿದ್ದು. ॥ ೧೦ ॥

ನೀನು ಶೋಕಿಸುವುದು ಅವಿವೇಕದಿಂದ. ನೀನು ಶೋಕಾನರ್ಹರನ್ನು ಕುರಿತು ಶೋಕವನ್ನು ಮಾಡುತ್ತಿ. ಸ್ವಬುದ್ಧಿಕಲ್ಪಿತವಾದ ವಾದಗಳನ್ನು ಆಡುತ್ತಿ. ನೀನಾಡುವ ಮಾತು ವೃದ್ಧಸಮ್ಮತವಲ್ಲ, ಸ್ವಕಪೋಲ ಕಲ್ಪಿತವಾದುದು. ಏಕೆಂದರೆ ಪಂಡಿತರು (ಜ್ಞಾನಿಗಳು) ವಿನಾಶಹೊಂದದಿದ್ದವರನ್ನು ಕುರಿತು ಹೇಗೆ ಶೋಕಿಸುವುದಿಲ್ಲವೋ, ಹಾಗೆಯೇ ಸಾಯಲಿಕ್ಕೆ ಸಿದ್ಧರಾದವ (ಆಸನ್ನವಿನಾಶ)ರನ್ನು ಕುರಿತು ಶೋಕಿಸುವುದಿಲ್ಲ. ಇಲ್ಲಿ 'ಚ' ಶಬ್ದವು ಇವಾರ್ಥಕವಾದ್ದರಿಂದ 'ಅಗತಾಸೂನ್' ಎಂಬುದನ್ನು ದೃಷ್ಟಾಂತವನ್ನಾಗಿ ತೋರಿಸುತ್ತದೆ. ಇಲ್ಲಿ ಶಂಕರಾಚಾರ್ಯರು 'ಪ್ರಜ್ಞಾವಾದಾನ್' ಎಂಬುದಕ್ಕೆ ಜ್ಞಾನಿಗಳ ವಾದವನ್ನು ಎಂದರ್ಥ ಬರೆದಿದ್ದಾರೆ. ಜ್ಞಾನಿಗಳ ಮಾತನ್ನು ಆಡುತ್ತಿ, ಅಶೋಚ್ಯರನ್ನು ಕುರಿತು ಶೋಕಿಸುತ್ತಿ, ಇದು ಪರಸ್ಪರ ವಿರುದ್ಧವೆಂದರ್ಥ ಬರೆದಿರುತ್ತಾರೆ. ರಾಮಾನುಜಾಚಾರ್ಯರೂ ಕೂಡಾ 'ಪ್ರಜ್ಞಾವಾದಾನ್' ಎಂಬುದಕ್ಕೆ ಜ್ಞಾನಿಗಳ ವಾದವೆಂತಲೇ ಅರ್ಥವನ್ನಿಟ್ಟು ಕೊಂಡು ದೇಹಾತಿರಿಕ್ತ ಆತ್ಮ ಇವುಗಳ ಸ್ವಭಾವ ತಿಳಿದವರೇ ಜ್ಞಾನಿಗಳು. ಅವರಿಗೆ ಸಮ್ಮತವಾದ ವಾದವೇ ಪ್ರಜ್ಞಾವಾದ. ದೇಹದ ಸ್ವಭಾವವು ಯಾವಾಗಲೂ ನಶ್ವರವಾದುದು, ಆದಕಾರಣ ದೇಹಕ್ಕೆ ನಾಶವು ನಿಯತವೆ. ಆತ್ಮಸ್ವಭಾವವು ನಿತ್ಯವಾದ ಪ್ರಯುಕ್ತ ಯುದ್ಧ ಮಾಡಿದರೂ ಆತ್ಮನಿಗೆ ನಾಶವಿಲ್ಲ. ಇದೇ ಅಭಿಪ್ರಾಯವನ್ನು 'ಗತಾಸೂನಗತಾಸೂಂಶ್ಚ' ಎಂದು ಉತ್ತರಾರ್ಧದಲ್ಲಿ ತಿಳಿಸಿಯದೆ, ಎಂದು ಬರೆದಿದ್ದಾರೆ. ಇಲ್ಲಿ ಅರ್ಜುನನು ಹೇಳಿದ ಮಾತು ಪ್ರಾಜ್ಞಸಮ್ಮತವಾಗಿದ್ದರೆ ಕೃಷ್ಣನು ಪ್ರಶಂಸೆಮಾಡದೆ ಬುದ್ಧಿವಾದ ಹೇಳಲು ಹೊರಡಬಾರದಾಗಿತ್ತು. ಪ್ರಾಜ್ಞರು ಎಷ್ಟಕ್ಕೂ ಶ್ರೀ ಕೃಷ್ಣನ ದ್ವೇಷಿ ಮತ್ತು ತದನುಬಂಧಿಗಳ ನಿಗ್ರಹವನ್ನು ಅಧರ್ಮವೆಂದು

ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।
ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨ ॥
ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।
ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥

---

ಹೇಳಲಿಕ್ಕಿಲ್ಲ. ಆದುದರಿಂದಲೇ ನಮ್ಮ ಶ್ರೀಮದಾಚಾರ್ಯರು 'ಪ್ರಜ್ಞಾವಾದ' ಎಂಬುದಕ್ಕೆ ಸ್ವಬುದ್ಧಿಪರಿಕಲ್ಪಿತವಾದ ಎಂದರೆ ನಿರ್ಮೂಲವಾದ ಎಂದರ್ಥ ಬರೆದಿದ್ದಾರೆ. ॥ ೧೧ ॥

ನನ್ನ ಮತವು ಪ್ರಾಜ್ಞಸಮ್ಮತವಾದುದಲ್ಲವೇಕೆ? 'ದೃಷ್ಟ್ವೇಮಂ ಸ್ವಜನಂ ಕೃಷ್ಣ! ಎಂದು ಕಾರಣವನ್ನು ಹೇಳಿರುವೆನಷ್ಟೆ! ಎಂಬ ಅರ್ಜುನನ ಆಕ್ಷೇಪವನ್ನು ನಿರಾಕರಿಸುವ ಉದ್ದೇಶದಿಂದ ಪ್ರಮೇಯವನ್ನು ತಿಳಿಸುವನು. ನಿನಗೆ ಜೀವನಾಶವಾಗುತ್ತದೆಂದು ಶೋಕವೋ, ಬಂಧುಗಳ ದೇಹನಾಶವಾಗುವುದೆಂದು ಶೋಕವೊ? ಅಥವಾ ದೇಹಾತಿರಿಕ್ತನಾದ ಆತ್ಮನಿಲ್ಲದ ಕಾರಣ ದೇಹನಾಶವೇ ಜೀವನಾಶವೆಂದರಿತುಕೊಂಡು ಶೋಕವೋ? ಅದರಲ್ಲಿ ಪ್ರಥಮಕಲ್ಪವು ಯುಕ್ತವಲ್ಲ. ಏಕೆಂದರೆ, ನಾನೀ ವರೆಗೆ ಇದ್ದಿಲ್ಲವೆಂದಲ್ಲ; ನೀನೂ ಇರಲಿಲ್ಲವೆಂದಲ್ಲ; ಈ ರಾಜರೂ ಈ ವರೆಗಾಗಲಿಲ್ಲವೆಂದಲ್ಲ; ಅನಾದಿಕಾಲದಿಂದ ನಾವಿದ್ದೇ ಇದ್ದೆವು. ಇನ್ನು ಮುಂದೆ ನಾವೆಲ್ಲರೂ ಆಗುವುದಿಲ್ಲವೆಂದಲ್ಲ; ಆಗಿಯೇ ಆಗುವೆವು. ಈಗ ಇರುವುದು ಪ್ರತ್ಯಕ್ಷಸಿದ್ಧವಾದುದರಿಂದ ಹೇಳಲಿಲ್ಲ. ಆದಕಾರಣ ಕಾಲತ್ರಯದಲ್ಲಿಯೂ ಇರುವ ಈ ಜೀವರಿಗೆ ನಾಶವಿಲ್ಲವೆಂದಾದ ಮೇಲೆ ಜೀವನಾಶದ ಭೀತಿಯಿಂದ ಯುದ್ಧಮಾಡುವುದಿಲ್ಲವೆಂಬ ನಿನ್ನ ವಾದವು ಹೇಗೆ ಪ್ರಾಜ್ಞರಿಗೆ ಅಸಮ್ಮತವಾಗದಿದ್ದೀತು. ಇನ್ನು ದೇಹನಾಶಪ್ರಯುಕ್ತ ನನಗೆ ದುಃಖವೆಂಬ ದ್ವಿತೀಯ ಪಕ್ಷವನ್ನು ಮುಂದಿನ ಶ್ಲೋಕದಿಂದ ನಿರಾಕರಿಸುವನು ಶ್ರೀಕೃಷ್ಣನು. ಹೇಗೆ ನಮಗೀಗ ತೋರುವ ದೇಹದಲ್ಲಿ ಈ ದೇಹನಿಯಾಮಕ ಜೀವನಿಗೆ ಕೌಮಾರ ಯೌವನ-ಮುಪ್ಪು ಎಂಬ ಅವಸ್ಥಾವಿಶೇಷಗಳು ಒಂದರ ಅನಂತರ ಮತ್ತೊಂದು ಬರುವುವೊ—ಎಂದರೆ ಕೌಮಾರಾವಸ್ಥೆಯ ದೇಹನಾಶವಾಗಿ ಬೇರೆ ಅವಸ್ಥೆಯ ದೇಹ ಬರುವುದು; ಆಗ ಶೋಕವಿಲ್ಲದೆ ಇರುವುದು ಪ್ರಸಿದ್ಧ

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

---

ವಷ್ಟೆ. ಅದು ಏತರಿಂದ? ಲೋಕದಲ್ಲಿ ಒಂದು ಹಾನಿಯನ್ನು ತತ್ಸದೃಶ ಲಾಭದಿಂದ ಸಮಾಧಾನಮಾಡಿಕೊಳ್ಳುವುದು ಸರ್ವಸಮ್ಮತವಷ್ಟೆ. ಹೀಗೆ ಜೀರ್ಣದೇಹ ಪ್ರಾಪ್ತಿಯಾದರೂ ಸಮಾಧಾನಮಾಡಿಕೊಳ್ಳುವುದಾದರೆ ಹೊಸ ದೇಹ ಸಿಗುವ ಧೈರ್ಯಶಾಲಿಯಾದವನು ಎಂದರೆ ವಿವೇಕಿಯು ದುಃಖಪಡಬಾರದೆಂಬುದು ನಿರ್ವಿವಾದ. ಲೋಕದಲ್ಲಿಯೂ ಕೂಡ ಕ್ರಯ ಕೊಟ್ಟು ವಸ್ತ್ರವನ್ನು ಪಡೆದರೆ ಯಾರಾದರೂ ದುಃಖಿಸುವರೊ?॥ ೧೨, ೧೩ ॥

ನೀನು ಹೇಳಿದುದೆಲ್ಲ ಸತ್ಯ. ಬಾಂಧವರ ಜೀವನಾಶವಾಗುತ್ತದೆಂದಾಗಲೀ, ದೇಹನಾಶ ಪ್ರಯುಕ್ತವಾಗಲೀ ಶೋಕವು ಯುಕ್ತವಲ್ಲವೆಂಬುದು ಸರಿಯೇ. ಆದರೂ ಅವರ ಮರಣದಿಂದ ನನಗೆ ಸುಖಹಾನಿಯೂ ದುಃಖ ಪ್ರಾಪ್ತಿಯೂ ಆಗುತ್ತದೆ. ಅವರ ದೇಹಸ್ಪರ್ಶ–ಸಂಭಾಷಣಾದಿಗಳಿಲ್ಲದ ಪ್ರಯುಕ್ತ ಸುಖಹಾನಿಯೂ, ಛೇದ-ಭೇದಾದಿಗಳಿಂದ ವಿಕಾರಹೊಂದಿದ ದೇಹದರ್ಶನಪ್ರಯುಕ್ತ ದುಃಖವೂ ಅನಿವಾರ್ಯವೆಂಬ ಅರ್ಜುನನ ಆಶಂಕೆಯನ್ನು ಮುಂದಿನ ಶ್ಲೋಕದಲ್ಲಿ ನಿರಾಕರಿಸುತ್ತಾನೆ. ಶಬ್ದಾದಿವಿಷಯಗಳ ಸಂಬಂಧವೆಂಬುದು ಇಂದ್ರಿಯಗಳಿಗಾದಾಗ ಅವುಗಳು ಶೀತೋಷ್ಣ ಸುಖ ದುಃಖಗಳನ್ನು ಕೊಡುತ್ತವೆ, ಎಂದರೆ ಸುಗಂಧ-ಮಧುರರಸ-ಸುಂದರರೂಪ-ಮೃದುಸ್ಪರ್ಶ-ಇಂಪಾದ ಶಬ್ದ ಇವುಗಳ ಅನುಭವದಿಂದ ಸುಖವನ್ನೂ ನಮಗೆ ಅನಿಷ್ಟವಾದ ದುರ್ಗಂಧಾದಿಗಳ ಅನುಭವದಿಂದ ಆ ವಿಷಯ ಸಂಬಂಧಗಳು ದುಃಖವನ್ನೂ ಕೊಡುತ್ತವೆ ಎಂದು ತಾತ್ಪರ್ಯವು. ಅಂತಹ ವಿಷಯಸಂಬಂಧಗಳು ಅವರ ಮೃತಿಯಿಂದ ನಷ್ಟವಾಗುವ ಕಾರಣ, ಸುಖ ಹಾನಿಯೂ ದುಃಖಪ್ರಾಪ್ತಿಯೂ ಆಗುತ್ತದೆಂದು ನಿನ್ನ ಅಭಿಪ್ರಾಯವಷ್ಟೆ! ಆದರೆ ಈ ವಿಷಯಸಂಬಂಧಗಳು ಮಾತ್ರವೇ ಸುಖದುಃಖಪ್ರದಗಳಲ್ಲ. ಮತ್ತು ವಿಷಯಗಳಲ್ಲಿ ಇದು ಶೋಭನವೆಂಬ ಭ್ರಾಂತಿ. ಶತ್ರುತ್ವಾದಿ ಭ್ರಾಂತಿನಿಮಿತ್ತಕವಾದ ಸ್ನೇಹ–ದ್ವೇಷಗಳಿಂದ ಉಂಟಾದ ಅಭಿಮಾನದಿಂದ ಕೂಡಿದರೆ ಸುಖದುಃಖಪ್ರದಗಳಾಗುವುವು. ಏಕೆಂದರೆ, ನಿದ್ರಾಕಾಲದಲ್ಲಿ

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

---

ಚಂದನಾದಿ ವಿಷಯಸಂಬಂಧವಿದ್ದರೂ ಸುಖಾದಿಗಳು ನಮಗಾಗುವುದಿಲ್ಲ. ಆದಕಾರಣ ಕೇವಲ ವಿಷಯಸಂಬಂಧವು ಅಪ್ರಯೋಜಕವು. ಆದುದರಿಂದ ಈ ಸುಖದುಃಖಾದಿಗಳು ಯಾವಾಗಲೂ ಆಗುವುದಿಲ್ಲ. ಬಂದುಹೋಗುವುವುಗಳು ಎಂದರೆ ಅನಿತ್ಯಗಳು. ಯಾವುದಾದರೊಂದು ವಸ್ತುವಿನಲ್ಲಿ ನಮಗೆ ಸುಂದರವೆಂದಾಗಲಿ, ಪ್ರಿಯವೆಂದಾಗಲಿ ಅಭಿಮಾನವಿರುವ ತನಕ ಆ ವಸ್ತುಸಂಪರ್ಕವು ಸುಖದಾಯಕವು. ಎಂದಿಗೆ ಅದು ಅಪ್ರಿಯವಾಗಿ ತೋರುತ್ತದೋ ಆಗ ಅದರ ಸಂಪರ್ಕವು ದುಃಖದಾಯಕವು ಎಂಬುದು ಸರ್ವಾನುಭವಸಿದ್ಧವು. ಅದುಕಾರಣ ಅಭಿಮಾನವನ್ನು ಬಿಟ್ಟು, ಆ ವಿಷಯ ಸಂಬಂಧವನ್ನು ಬಿಟ್ಟು, ಆ ವಿಷಯಸಂಬಂಧವನ್ನು ಸಹಿಸಿಕೊ. ಸುಖ ದುಃಖಾದಿಗಳನ್ನು ಕೊಡಲಾರದಂತೆ ಮಾಡಿಕೊ ಎಂದು ಅಭಿಪ್ರಾಯವು. ॥ ೧೪ ॥

ಈ ದುಃಖಾಭಾವವು ಯುದ್ಧಮಾಡದಿದ್ದರೂ ಬರುವುದು. ಹೀಗಿರುವಲ್ಲಿ ಯುದ್ಧಮಾಡಿ ಕಷ್ಟಪಟ್ಟು ಅಭಿಮಾನವನ್ನು ತೊರೆದೇ ಏಕೆ ಅದನ್ನು ಸಂಪಾದಿಸಬೇಕೆಂಬ ಶಂಕೆಯನ್ನು ಈ ಶ್ಲೋಕದಲ್ಲಿ ಪರಿಹರಿಸುವನು— ಪುರುಷಶ್ರೇಷ್ಠನಾದ ಅರ್ಜುನನೆ! ಯಾವ ಧೈರ್ಯಶಾಲಿಯಾದ ಪುರುಷನನ್ನು ಮುಕ್ತಿಗೆ ವಿರೋಧಿಯಾದ ಪ್ರಯುಕ್ತ ದುಃಖದಂತೆ ಹೇಯವಾಗಿರುವ ವಿಷಯಸುಖವೂ ಕೂಡ ವಿಕಾರವಶನನ್ನಾಗಿ ಮಾಡುವುದಿಲ್ಲವೋ, ಮತ್ತು ಸಮದುಃಖಸುಖನಾದ ಯಾವ ಮಹಾನುಭಾವನನ್ನು ವಿಷಯಸಂಬಂಧವು ಎಳೆಯುವುದಿಲ್ಲವೋ, ಅಂದರೆ ವಿಕಾರವನ್ನು ತಂದೊಡ್ಡಲಾರದೋ ಅಂತಹ ಅಧಿಕಾರಿಯೇ ಮುಕ್ತಿಯೋಗ್ಯನು. ಹೀಗಿರಲು ದುಃಖವಿಲ್ಲದಿರುವಿಕೆಯು ಎರಡು ರೀತಿಯಿಂದ ಸಂಭವಿಸುವುದಾದರೂ ಮೋಕ್ಷರೂಪ ಪುರುಷಾರ್ಥ ಹೇತುವಾದ ಕಾರಣ, ಅಭಿಮಾನ ತ್ಯಾಗದಿಂದ ಬರುವ ನಿರ್ದುಃಖತನವನ್ನೇ ಸಂಪಾದಿಸಬೇಕೆಂದು ಶ್ರೀಕೃಷ್ಣನ ಅಭಿಪ್ರಾಯವು. ॥ ೧೫ ॥

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥**
**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭ ॥**

---

'ಪಾಪಮೇವಾಶ್ರಯೇದಸ್ಮಾನ್' ಎಂದು ಹಿಂದೆ ಹೇಳಿದಂತೆ ಬಂಧು ಹತ್ಯಾದಿರೂಪವಾದ ಯುದ್ಧವು ನರಕಾದ್ಯನರ್ಥಕರವಾದ ಪ್ರಯುಕ್ತ ನನಗೆ ಶೋಕವೆಂಬ ಪಾರ್ಥನ ಆಕ್ಷೇಪವನ್ನು ಶ್ರೀಕೃಷ್ಣನು ಮೇಲಿನ ಶ್ಲೋಕದಲ್ಲಿ ಪರಿಹರಿಸುತ್ತಾನೆ. ಇದೇ ಗೀತೆಯಲ್ಲಿ "ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ । ಪ್ರಶಸ್ತೇ ಕರ್ಮಣಿ ತಥಾ" ಎಂದು ಸಪ್ತದಶಾಧ್ಯಾಯದಲ್ಲಿ ಹೇಳುವಂತೆ ಸದಸಚ್ಛಬ್ದಗಳಿಗೆ ಸತ್ಕರ್ಮ-ದುಷ್ಕರ್ಮಗಳೆಂದರ್ಥವು. ಹೀಗೆ ಭಾವವೆಂದರೆ ಸುಖ, ಅಭಾವವೆಂದರೆ ದುಃಖವೆಂಬರ್ಥವು ಶಾಸ್ತ್ರಕಾರರಿಗೆ ಸಮ್ಮತ. ಆದುಕಾರಣ ದುಷ್ಕರ್ಮದಿಂದ ಸುಖವಿಲ್ಲದಂತೆ ಸತ್ಕರ್ಮದಿಂದ ದುಃಖವು ಎಷ್ಟು ಮಾತ್ರಕ್ಕೂ ಬರಲಾರದು. ಈ ಯುದ್ಧವೆಂಬುದು ಪರಮಾತ್ಮನ ವೈರಿಗಳ ಮತ್ತು ಆ ವೈರಿ ಸಂಬಂಧಿಗಳ ಶಿಕ್ಷೆಯು. ಆದ ಪ್ರಯುಕ್ತ ಯುದ್ಧವು ಸತ್ಕರ್ಮವಾದುದರಿಂದ ಪರಲೋಕದಲ್ಲಿ ದುಃಖಹೇತುವಲ್ಲ. ಇದು ನಾನು ನಿನ್ನ ಮನಸ್ಸಮಾಧಾನಕ್ಕಾಗಿ ಕಲ್ಪಿಸಿ ಹೇಳುವುದಲ್ಲ. ಮತ್ತು ತತ್ತ್ವಜ್ಞಾನಿಗಳಿಗೆ ಪ್ರಾಮಾಣಿಕವೆಂದು ಸಮ್ಮತವಾದುದು. ಎಂದರೆ ಸದಸತ್ಕರ್ಮಗಳಿಂದ ದುಃಖ-ಸುಖಗಳಾಗುವುದಿಲ್ಲವೆಂಬ ವಿಷಯವನ್ನು ತತ್ತ್ವದರ್ಶಿಗಳು ಪರಂಪರೆಯಿಂದಲೂ ತಿಳಿದುಕೊಂಡಿದ್ದಾರೆ. ॥ ೧೬ ॥

ಹಿಂದೆ ಪೂರ್ವೋತ್ತರಕಾಲದಲ್ಲಿದ್ದ ಪ್ರಯುಕ್ತ ನಾವೆಲ್ಲರೂ ನಿತ್ಯರೆಂದು ಹೇಳಿದ್ದಾನೆ. ಇಷ್ಟುಮಾತ್ರವಲ್ಲ; ಲೋಕದಲ್ಲಿ ನಿತ್ಯವಾದ ಪದಾರ್ಥಗಳು ಬಹಳವಾಗಿವೆ. ಅವುಗಳನ್ನು ಪ್ರತ್ಯೇಕವಾಗಿ ಹೇಳುವುದು ಅನಾವಶ್ಯಕವಾದ ಕಾರಣ ಸಂಗ್ರಹಮಾಡಿ ಹೇಳಲಿಕ್ಕೆ ಹೊರಟಿದ್ದಾನೆ. ಜಗತ್ತಿನಲ್ಲಿ ಯಾವ ಯಾವ ವಸ್ತುಗಳು ವ್ಯಾಪಿಸಿಕೊಂಡಿವೆಯೋ ಅವೆಲ್ಲಾ ನಿತ್ಯವೆಂದು ತಿಳಿದುಕೊ. ನಮ್ಮ ಶಾಸ್ತ್ರದಲ್ಲಿ ಇಂತಹವು ನಿತ್ಯವೆನಿಸಿದವು ಪ್ರಕೃತಿ-ಕಾಲ-ಆಕಾಶಾದಿಗಳು ಬಹಳ ಇವೆ. ದಂಡಾದಿಗಳಿಂದ ಅನಿತ್ಯಗಳಾದ ಮಡಿಕೆ

ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।
ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥
ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।
ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥

---

ಮೊದಲಾದ ಪದಾರ್ಥಗಳನ್ನು ನಾಶವಾಡಲಿಕ್ಕೆ ಬರುವಂತೆ ಈ ಪದಾರ್ಥ ಗಳ ನಾಶವನ್ನು ಮಾತ್ರ ಮಾಡಲಿಕ್ಕೆ ಆಗುವುದಿಲ್ಲವೆಂದರ್ಥ. ॥ ೧೭ ॥

ನೀನು ಈಶ್ವರಪೂಜಾರ್ಥವಾಗಿಯಾದರೂ ಯುದ್ಧಮಾಡಬೇಕೆಂದು ಹೇಳುತ್ತಾನೆ. ಪ್ರತ್ಯಕ್ಷ ತೋರುವ ಜೀವನ ಈ ದೇಹಗಳು ನಾಶವುಳ್ಳವು. ಪರಮಾತ್ಮನು ಶರೀರ ಮತ್ತು ಸ್ವರೂಪ ಉಭಯ ರೀತಿಯಿಂದಲೂ ನಾಶ ಶೂನ್ಯನು; ಮಾತ್ರವಲ್ಲದೆ ಸಕಲಗುಣಗಳಿಂದ ಪೂರ್ಣನು. ನಮಗಿಂತ ಉತ್ತಮನಾದ ಪ್ರಯುಕ್ತ ನಾವು ಪೂಜಕರು. ಅವನು ಪೂಜಿಸಿಕೊಳ್ಳು ವವನು. ಆದುಕಾರಣ ನೀನು ಈಶ್ವರಪೂಜಾರ್ಥವಾಗಿಯಾದರೂ ಯುದ್ಧ ಮಾಡಬೇಕು. ॥ ೧೮ ॥

ನೀನು ಜೀವರನ್ನು ನಿತ್ಯರೆಂದು ಹೇಳುವೆ; ಇದು ಲೋಕಾನುಭವ ವಿರುದ್ಧವು. ಲೋಕದಲ್ಲಿ ಇವನು ಕೊಲ್ಲಲ್ಪಟ್ಟವನು, ಇವನು ಕೊಲ್ಲುವವನು ಎಂದು ಸರ್ವಾನುಭವಸಿದ್ಧವಾದ ಜ್ಞಾನವಿರುವ ಕಾರಣ ಜೀವನು ನಿತ್ಯ ನೆಂದುದು ಯುಕ್ತವಲ್ಲವೆಂಬ ಆಕ್ಷೇಪವನ್ನು ಶ್ರೀಕೃಷ್ಣನು ಪರಿಹರಿಸುವನು. ಯಾವನು "ಈ ಜೀವನು ಮತ್ತೊಬ್ಬ ಜೀವನನ್ನು ಕೊಲ್ಲುವವನೆ"ಂದು ತಿಳಿಯುತ್ತಾನೋ, ಮತ್ತು ಯಾವನು ಕೊಲ್ಲಲ್ಪಟ್ಟವನೆಂದು ತಿಳಿಯು ತ್ತಾನೋ, ಇವರಿಬ್ಬರೂ ಕೂಡ ಜ್ಞಾನಿಗಳಲ್ಲ. ಲೋಕದ ವ್ಯವಹಾರವು ಭ್ರಾಂತಿಮೂಲಕವಾದುದು. ಏಕೆಂದರೆ, ಈ ಜೀವನು ಯಾರಿಂದಲೂ ಕೊಲ್ಲಲ್ಪಡುವುದೂ ಇಲ್ಲ, ಯಾರನ್ನೂ ಕೊಲ್ಲತಕ್ಕವನೂ ಅಲ್ಲ; ಜೀವನು ನಿತ್ಯನು. ಈ ವಿಷಯದಲ್ಲಿ ಶ್ರುತಿಯಿದೆ—ಎಂದು ಮುಂದಕ್ಕೆ ಶ್ರುತಿಯನ್ನು ಉದಾಹರಿಸುತ್ತಾನೆ. ॥ ೧೯ ॥

ಈ ಜೀವನು ಉತ್ಪತ್ತಿ-ನಾಶವುಳ್ಳವನಲ್ಲ; ಎಂದರೆ ಸ್ವರೂಪತಃ ಏಕ ರೀತಿಯಿಂದಿದ್ದು, 'ಭೂತ್ವಾ ಭವಿತಾ' ಹುಟ್ಟಿ ಮರಳಿ ಹುಟ್ಟುವವನೆಂಬ

ನ ಜಾಯತೇ ಮ್ರಿಯತೇ ವಾ ಕದಾಚಿ-
ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।
ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ
ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥

ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।
ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥ ೨೧ ॥

ವಾಸಾಂಸಿ ಜೀರ್ಣಾನಿ ಯಥಾ ವಿಹಾಯ
ನವಾನಿ ಗೃಹ್ಣಾತಿ ನರೋಽಪರಾಣಿ ।

---

ವ್ಯವಹಾರಕ್ಕೆ ವಿಷಯನೂ ಅಲ್ಲ. ಪರಂತು, ಆ ವ್ಯವಹಾರಕ್ಕೆ ಈಶ್ವರನ ಅಘಟಿತಘಟಕಶಕ್ತಿಯಿಂದ ದೇಹಯೋಗ–ವಿಯೋಗಗಳೇ ಕಾರಣಗಳು. ಈ ಉತ್ಪತ್ತಿನಾಶಶೂನ್ಯನಾದ ಜೀವನು ಶಾಶ್ವತನು, ಎಂದರೆ ನಿತ್ಯನು. ಹಾಗಾದರೂ ಪುರಾಣನು. ಅನೇಕ 'ಪುರ'ಗಳನ್ನು ಎಂದರೆ ದೇಹಗಳನ್ನು ಅಣಃ=ಹೊಂದುವವನು. ಆದುದರಿಂದ ಅನೇಕ ವಸ್ತ್ರಗಳನ್ನು ಉಟ್ಟು ಬಿಟ್ಟರೂ ಉತ್ಪತ್ತಿ–ನಾಶಗಳು ಹಿಂದೆ ಹೇಳಿದಂತೆ ಹೇಗೆ ನಮಗಿಲ್ಲವೋ, ಹಾಗೆ ಶರೀರಗಳು ನಷ್ಟಗಳಾಗಲೀ, ಉತ್ಪನ್ನಗಳಾಗಲೀ ಜೀವನಿಗೆ ಉತ್ಪತ್ತಿ-ನಾಶಗಳಿಲ್ಲವೆಂದು ಅಭಿಪ್ರಾಯವು. ಇಲ್ಲಿ 'ಪುರಾಣ' ಎಂಬ ಪದಕೊಟ್ಟ ಪ್ರಯುಕ್ತ ಜನನ–ಮರಣಾದಿ ವ್ಯವಹಾರವು ಶರೀರಪ್ರಾಪ್ತಿವಿಯೋಗ ಮೂಲಕವೆಂದು ಸೂಚಿತವಾಗುತ್ತದೆ. ॥ ೨೦ ॥

ಪಾರ್ಥ! ಯಾವ ವಿಚಾರವುಳ್ಳ ಪುರುಷನು ಜೀವನನ್ನು ಹುಟ್ಟು-ಸಾವಿಲ್ಲದವನು, ವಿಕಾರಶೂನ್ಯನು ಎಂದು ತಿಳಿದುಕೊಳ್ಳುವನೋ, ಆ ವಿವೇಕಿಯು ಯಾವ ಪುರುಷನನ್ನು ಕೊಂದಾನು? ಅಥವಾ ಕೊಲ್ಲಿಸ್ಯಾನು? ಎಂದರೆ ಕೊಂದನು-ಕೊಲ್ಲಿಸಿದನೆಂದು ತಿಳಿದುಕೊಂಡಾನು? ಯಾರೂ ತಿಳಿದು ಕೊಳ್ಳಲಿಕ್ಕೇ ಇಲ್ಲ. ಈ ದೇಹಾತ್ಮಭೇದವೆನ್ನುವುದು ಅತಿಸೂಕ್ಷ್ಮವಾದ ಪ್ರಯುಕ್ತ ಪುನಃಪುನಃ ದೇಹನಾಶವಾದರೂ ಜೀವನಾಶವಾಗುವುದಿಲ್ಲವೆಂಬು ದನ್ನು ದೃಷ್ಟಾಂತಪೂರ್ವಕವಾಗಿ ವಿವರಿಸುವನು. ॥ ೨೧ ॥

ತಥಾ ಶರೀರಾಣಿ ವಿಹಾಯ ಜೀರ್ಣಾ-
ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥
ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ॥ ೨೩ ॥
ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥

---

ಮನುಷ್ಯನು ಹೇಗೆ ಜೀರ್ಣವಸ್ತ್ರಗಳನ್ನು ಬಿಟ್ಟುಬಿಟ್ಟು ನೂತನವಾದ ಬೇರೆ ವಸ್ತ್ರವನ್ನು ಧರಿಸುವನೋ, ಹಾಗೆಯೇ ಜೀರ್ಣವಾದ ಶರೀರವನ್ನು ತೊರೆದು ಹೊಸ ಶರೀರವನ್ನು ಹೊಂದುವನು. ಅಷ್ಟೇ ಅಲ್ಲದೆ, ಜೀವನಿಗೆ ಉತ್ಪತ್ತಿ-ನಾಶವಿಲ್ಲ. ಶರೀರದ ಪ್ರಾಪ್ತಿ-ವಿಯೋಗವೇ ಉತ್ಪತ್ತಿ-ನಾಶವೆಂದು ಇದರಿಂದ ಸ್ಪಷ್ಟವಾಗುತ್ತದೆ. ॥ ೨೨ ॥

ಜೀವನಿಗೆ ಸ್ವಾಭಾವಿಕ ನಾಶವಿಲ್ಲದಿದ್ದರೂ, ದಕ್ಷಪ್ರಜಾಪತಿಯ ಶಿರಶ್ಛೇದದಂತೆ ವಿಶೇಷ ಕಾರಣದಿಂದ ನಾಶವೇಕೆ ಆಗಬಾರದು? ಎಂಬ ಆಕ್ಷೇಪವನ್ನು ಈ ಶ್ಲೋಕದಲ್ಲಿ ಪರಿಹರಿಸುವನು. ಈ ಜೀವನನ್ನು ಶಸ್ತ್ರಗಳೂ ಕತ್ತರಿಸುವುದಿಲ್ಲ, ಅಗ್ನಿಯು ದಹಿಸುವುದಿಲ್ಲ, ನೀರು ಅಂಗಗಳಲ್ಲಿ ಹೊಕ್ಕು ತೋಯಿಸಿ ಸಂದುಬಂಧಗಳನ್ನು ಸಡಿಲಿಸುವುದಿಲ್ಲ, ಗಾಳಿಯು ಒಣಗಿಸುವುದಿಲ್ಲ. ॥ ೨೩ ॥

ಈಗ ಶೋಷಣಚ್ಛೇದನಾದಿಗಳು ಇಲ್ಲದಿದ್ದರೂ, ಮುಂದೇಕೆ ಬರಬಾರದೆಂಬ (ಅರ್ಜುನನ) ಸಂದೇಹನಿವೃತ್ತಿಗಾಗಿ ಬೇರೆ ಪದಾರ್ಥಗಳಿಗೆ ಯಾವಾಗಲೂ ಹಾಗೆ ಬರುವುದೆಂಬುದು ಆ ಪದಾರ್ಥಕ್ಕೆ ನಾಶವಾಗುವ ಯೋಗ್ಯತೆ ಇದ್ದರೆ ಮಾತ್ರ. ಪ್ರಕೃತದಲ್ಲಿ ಜೀವನಿಗೆ ಛೇದಾದಿಯೋಗ್ಯತೆಯೇ ಇಲ್ಲದಿರುವ ಕಾರಣ ಮುಂದೆಯೂ ನಾಶಸಂಭಾವನಾ ಮಾಡಬಾರದೆಂದು ಹೇಳುತ್ತಾನೆ. 'ಅಚ್ಛೇದ್ಯಃ' ಇತ್ಯಾದಿ ಶಬ್ದಗಳಿಗೆ ಛೇದಾದಿ ಯೋಗ್ಯನಲ್ಲವೆಂದರ್ಥ. ಈ ಜೀವನು, ನಿತ್ಯನೂ, ಅಚಲನೂ ಎಂದರೆ ಪ್ರಾಕೃತವಿಕಾರರಹಿತನೂ ಆದುದರಿಂದಲೇ ಸನಾತನನೂ, ಎಂದರೆ ಕಾಲತ್ರಯದಲ್ಲಿಯೂ ಇರುವವನೂ ಆಗಿರುವನು. ಈ ಮಾಹಾತ್ಮ್ಯವು ಜೀವ

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥
ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।
ತಥಾಽಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥ ೨೬ ॥**

---

ನಿಗೆ ಬಿಂಬರೂಪನಾದ ಪರಮಾತ್ಮನ ಆಶ್ರಯದಿಂದ ಬಂದುದು. ಅಂತಹ ಮಹಾಮಹಿಮನೆಂದು 'ಸರ್ವಗತಸ್ಥಾಣು' ಎಂಬ ಪದವು ಹೇಳುತ್ತದೆ. ಸರ್ವಗತ=ದೇಶಕಾಲದಲ್ಲಿ ವ್ಯಾಪ್ತನಾದ ಪರಮಾತ್ಮನಲ್ಲಿ, ಸ್ಥ=ಇರುವವನು, ಅಣು=ಸೂಕ್ಷ್ಮನು ಎಂದು. ॥ ೨೪ ॥

ಹಿಂದಿನ ಶ್ಲೋಕದಲ್ಲಿ ಹೇಳಿದ ರೀತಿಯಲ್ಲಿ ಅಣುವಾದ ಜೀವನಿಗೆ ಆಶ್ರಯನಾದ ಪರಮಾತ್ಮನು ವ್ಯಾಪ್ತ್ಯಾದಿ ಮಹಾಮಹಿಮೆಯುಳ್ಳವನಾದರೆ ನಮಗೇಕೆ ತೋರುವುದಿಲ್ಲ? ಎಂಬ ಶಂಕೆಯನ್ನು ಈ ಶ್ಲೋಕದಲ್ಲಿ ಪರಿಹರಿಸುತ್ತಾನೆ. ಈಶ್ವರನು ಅವ್ಯಕ್ತನು, ಪ್ರತ್ಯಕ್ಷನಾಗತಕ್ಕವನಲ್ಲ. ಹಾಗಾದರೆ ಈಶ್ವರದರ್ಶನಾರ್ಥವಾಗಿ ನಮ್ಮ ತಪಸ್ಸು ವ್ಯರ್ಥವೆಂದಾಶಂಕಿಸಬಾರದು. ಏಕೆಂದರೆ, 'ಅಚಿಂತ್ಯಃ'=ನಮ್ಮ ಪ್ರಯತ್ನದಿಂದ ಕಾಣಿಸಿಕೊಳ್ಳಲಿಕ್ಕೆ ಅಶಕ್ಯನಾಗಿದ್ದರೂ, ತನ್ನ ಅಘಟಿತಘಟಕಶಕ್ತಿಯಿಂದ ತನ್ನ ಸ್ವರೂಪವನ್ನು ತಾನಾಗಿ ತೋರಿಸಬಹುದು. ಹಾಗಾದರೆ ಈಶ್ವರನ ಅಂತಹ ಶಕ್ತಿನಾಶವಾದ ಮೇಲೆ ಅವನ ಆ ಮಹಿಮೆಯು ಇಲ್ಲದಾಗುವುದೆಂದರೆ, ಅವಿಕಾರ್ಯನು, ವಿಕಾರರಹಿತನು, ಶಕ್ತಿಹ್ರಾಸಶೂನ್ಯನು. ಇದೆಲ್ಲಾ ನಮ್ಮ ಕಲ್ಪನೆಯಲ್ಲ. ವೇದಾದಿಗಳಿಂದ ಉಕ್ತವಾಗಿದೆ, ಎಂದು 'ಉಚ್ಯತೇ' ಎಂಬ ಪದವು ಬೋಧಿಸುತ್ತದೆ. ಹೀಗಿರುವಕಾರಣ ಜೀವನ ಸ್ವರೂಪವು ನಿತ್ಯವೆಂದು ತಿಳಿದುಕೊಂಡ ಮೇಲೆ ಇವರು ಮೃತರಾಗುತ್ತಾರೆ, ನಾನು ಮಾರಕನಾಗುವೆನೆಂದು ಶೋಕವು ಯುಕ್ತವಲ್ಲ. ॥ ೨೫ ॥

ಹೀಗೆ ಜೀವನು ನಿತ್ಯನಾಗಿದ್ದರೂ, ದೇಹಯೋಗವಿಯೋಗರೂಪ ಉತ್ಪತ್ತಿನಾಶಗಳು ಜೀವನಿಗಿರುವ ಕಾರಣ ಯುದ್ಧದಿಂದ ದೇಹಯೋಗವಿಯೋಗರೂಪವಾದ ನಾಶವು ಉಂಟಾಗುವುದೆಂದು ದುಃಖಿಸುವುದಾದರೆ, ನೀನು ಇಂತಹ ನಾಶವುಂಟೆಂದು ತಿಳಿದುಕೊಂಡರೂ ಶೋಕಿಸುವುದು ಯುಕ್ತ

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥**
**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**
**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನ-**
**ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।**

---

ವಲ್ಲ. ಏಕೆಂದರೆ, ದೇಹಯೋಗವುಳ್ಳವನಿಗೆ ದೇಹವಿಯೋಗರೂಪವಾದ ಮರಣವೂ, ಮೃತನಿಗೆ ದೇಹಯೋಗರೂಪವಾದ ಜನ್ಮವೂ ನಿಯತವು; ನಿಯತವಾದ ವಿಷಯದಲ್ಲಿ ನೀನು ದುಃಖಿಸುವುದು ನ್ಯಾಯವಲ್ಲ. ನೀನು ತಿಳಿದಿರುವ ರೀತಿಯಲ್ಲಿ ಜೀವರಿಗೆ ಉಂಟಾಗುವ ಜನನ–ಮರಣಗಳು ಯುದ್ಧಮಾಡದಿದ್ದರೂ ಅನಿವಾರ್ಯಗಳು. ಹೀಗಿರಲು ನೀನು ವಿಹಿತಧರ್ಮವನ್ನು ಮಾತ್ರ ಬಿಟ್ಟಂತಾಗುವುದು. ಅದು ಯುಕ್ತವಲ್ಲ. ॥ ೨೬, ೨೭ ॥

ದೇಹನಾಶವು ನಿಯತವೆಂದು ಹಿಂದೆ ಹೇಳಿದ ಪ್ರಮೇಯವನ್ನು ವಿಶದ ಮಾಡುತ್ತಾನೆ—ಸಕಲ ಜೀವ-ಶರೀರಗಳೂ ಮೂಲಪ್ರಕೃತಿಯೇ ಕಾರಣವಾಗಿ ಉಳ್ಳವುಗಳು, ಕಾರ್ಯಾವಸ್ಥಾರೂಪ, ವ್ಯಕ್ತವಾದ ಅಂತರಾಲ. ಮಧ್ಯವುಳ್ಳವುಗಳು; ಎಂದರೆ ಜನ್ಮ-ನಿಧನ ಇವೆರಡರ ಮಧ್ಯದಶೆಯಲ್ಲಿ (ಸ್ಥಿತಿಕಾಲದಲ್ಲಿ) ಭೂತಗಳಿಗೆ ವ್ಯಕ್ತಿಯಿರುವುದರಿಂದ ವ್ಯಕ್ತಮಧ್ಯವೆಂದೆನ್ನಿಸಿಕೊಳ್ಳುವುವು. ಹೀಗೆ ಮೂಲಪ್ರಕೃತಿಯಲ್ಲಿಯೇ ಲಯವುಳ್ಳವುಗಳು. ಈ ರೀತಿಯಲ್ಲಿ ಭೂತಗಳಿಗೆ ಸ್ವಕಾರಣದಲ್ಲಿ ಲಯವೆಂಬುದು ಯುದ್ಧಮಾಡದಿದ್ದರೂ ನಿಯತವಾಗಿರುವಾಗ ದೇಹನಾಶ ಪ್ರಯುಕ್ತವಾಗಿಯಾದರೂ, ಅವುಗಳ ವಿಷಯದಲ್ಲಿ ಶೋಕಮಾಡಲು ಏನು ಕಾರಣ? ಹೀಗೆ ದೇಹಕ್ಕೆ ನಾಶವೂ ಜೀವಸ್ವರೂಪಕ್ಕೆ ಅನಾಶವೂ ನಿಯತವಾಗಿರುವುದಾದರೆ ಹೀಗೆಯೇ ಎಲ್ಲರಿಗೇಕೆ ತಿಳುವಳಿಕೆ ಬರಬಾರದು? ಎಂಬ ಶಂಕೆಗೆ ಉತ್ತರವಾಗಿ ಮೇಲಿನ ಶ್ಲೋಕವು ಹೊರಟಿದೆ. ॥ ೨೮ ॥

ಈ ಜೀವನನ್ನು ಯಾರಾದರೂ ಸಾವಿರದಲ್ಲಿ ಒಬ್ಬನು ಈ ಪ್ರಕಾರ ಪಶ್ಯತಿ=ತಿಳಿಯುತ್ತಾನೆ. ಹೇಳುತ್ತಾನೆ ಮತ್ತು ಕೇಳುತ್ತಾನೆ. ಅಂತಹ

ಆಶ್ಚರ್ಯವಚ್ಚೈನಮನ್ಯಃ ಶೃಣೋತಿ
ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯ ॥
ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।
ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥
ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।
ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥

---

ಮಹಾಜ್ಞಾನಿಯು ಆಶ್ಚರ್ಯವತ್=ಆಶ್ಚರ್ಯಸದೃಶ, ಅತಿದುರ್ಲಭನು ಎಂದು ತಾತ್ಪರ್ಯವು. ನಾವೆಲ್ಲರೂ ನಮ್ಮ ಸ್ವರೂಪವನ್ನು ತಿಳಿದುಕೊಂಡಿರುವೆನೆಂದು ತಿಳಿಯಬಾರದು. ಯಾರಾದರೂ ಈ ಜೀವನನ್ನು ಸಾಮಾನ್ಯವಾಗಿ ತಿಳಿದಿದ್ದರೂ ಕೇಳಿದ್ದರೂ ನಾನು ಹೇಳಿದ ರೀತಿಯಲ್ಲಿ ತಿಳಿಯಲಿಲ್ಲ. ॥ ೨೯ ॥

ಹಾಗಾದರೆ ಜೀವನಿಗೆ ನಿತ್ಯತ್ವವು ಸ್ವಾಭಾವಿಕವಾಗಿದ್ದ ಪ್ರಯುಕ್ತ ಸ್ವಾಭಾವಿಕವಾದುದಕ್ಕೆ ಪರಾಪೇಕ್ಷೆಯಿಲ್ಲದ ಕಾರಣ ಜೀವನು ನಿತ್ಯತ್ವ ವಿಷಯದಲ್ಲಿ ಸ್ವತಂತ್ರನು; ಈಶ್ವರಾಧೀನನಲ್ಲವೆಂದು ತಿಳಿಯಬಾರದಾಗಿ ಕರುಣೆಯಿಂದ ಶ್ರೀಕೃಷ್ಣನು ಅರ್ಜುನನಿಗೆ ಬೋಧಿಸುವನು—ಎಲೈ ಭರತ ಕುಲೋತ್ಪನ್ನನಾದ ಕ್ಷತ್ರಿಯೋತ್ತಮನೆ! ಸರ್ವರ ದೇಹದಲ್ಲಿಯೂ 'ಅವ್ಯಕ್ತೋಽಯಂ' ಎಂಬ ಶ್ಲೋಕದಲ್ಲಿ ಪ್ರಕೃತನಾದ ಈಶ್ವರನು ರಕ್ಷಕನಾಗಿದ್ದಾನೆ. ಆದಕಾರಣವೇ ದೇಹಾಭಿಮಾನಿಯಾದ ಜೀವನು ನಿತ್ಯ ಅವಧ್ಯನು. ಹೀಗೆ ಸರ್ವರಿಗೂ ರಕ್ಷಕನಾಗಿ ಈಶ್ವರನಿರುವ ಕಾರಣ ಜೀವರು ಅವಧ್ಯರಾಗಿರುವರು. ಆದಪ್ರಯುಕ್ತ ಸರ್ವ ಪ್ರಾಣಿಗಳನ್ನು ಕುರಿತು ಶೋಕಿಸುವುದು ಯುಕ್ತವಲ್ಲ. ॥ ೩೦ ॥

'ವೇಪಥುಶ್ಚ ಶರೀರೇ ಮೇ' ಎಂದು ಅರ್ಜುನನು ಹಿಂದೆ ಹೇಳಿದ್ದಾನೆ. ಆದಕ್ಕೆ ಉತ್ತರವಾಗಿ ಶ್ರೀಕೃಷ್ಣನು ಬೋಧಿಸುವನು—ನೀನು ಕ್ಷತ್ರಿಯೋಚಿತ ಧರ್ಮವೆಂದು ತಿಳಿದಾದರೂ ಅಂಗಕಂಪಾದಿ (ನಡುಗುವುದು)ಗಳನ್ನು ಹೊಂದುವುದು ಯುಕ್ತವಲ್ಲ. ಕ್ಷತ್ರಿಯನಾದವನಿಗೆ ಈ ಧರ್ಮಸಾಧನವಾದ

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್॥ ೩೨॥**
**ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ ೩೩ ॥**
**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪ ॥**
**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್**

---

ಯುದ್ಧಕ್ಕಿಂತ ಬೇರೆ ಶ್ರೇಯಸ್ಕರವು ಯಾವುದೂ ಇಲ್ಲ. ಇದು "ನ ಚ ಶ್ರೇಯೋಽನುಪಶ್ಯಾಮಿ' ಎಂಬುದಕ್ಕೆ ಉತ್ತರರೂಪವಾಗಿದೆ. ॥ ೩೧ ॥

ಪ್ರಯತ್ನ ಮಾಡಿದರೂ ಸಿಗದಿರುವ ಇಂತಹ ಯುದ್ಧವು ಈಶ್ವರೇಚ್ಛೆಯಿಂದ ಪ್ರಾಪ್ತವಾಯಿತು. ಇದು ಆವರಣರಹಿತವಾದ ಪಾರತ್ರಿಕ ಸುಖಸಾಧನವು ಇಂತಹ ಯುದ್ಧವನ್ನು ಕ್ಷತಿಯರು ಹೊಂದಬೇಕಾದರೆ ಅವರು ಭಾಗ್ಯಶಾಲಿಗಳಾಗಿರಬೇಕು. ಹೀಗೆ ಅಯತ್ನಲಬ್ಧವಾದ ಯುದ್ಧವನ್ನು ಬಿಟ್ಟುಬಿಟ್ಟರೆ ಅನರ್ಥಪ್ರಾಪ್ತಿಯೂ ಕೂಡ ಇದೆ. ಆದುದರಿಂದಲೂ ಯುದ್ಧವು ಕರ್ತವ್ಯವೆಂಬುದನ್ನು ಮೇಲಿನ ಶ್ಲೋಕಗಳಿಂದ ಹೇಳುವನು.॥೩೨॥

ಇಂತಹ ಧರ್ಮಸಾಧನವಾದ ಯುದ್ಧವನ್ನು ನೀನು ಮಾಡದಿದ್ದರೆ ಅದರಿಂದಲೇ ಸ್ವಧರ್ಮವನ್ನೂ, ಮಹೇಶ್ವರನ ಜಯಾದಿಗಳಿಂದ ಲಬ್ಧವಾದ ಕೀರ್ತಿಯನ್ನೂ ಕಳೆದುಕೊಳ್ಳುವೆ; ಮಾತ್ರವಲ್ಲ. ಸ್ವಧರ್ಮಪರಿತ್ಯಾಗದಿಂದ ಪಾಪವನ್ನು ಹೊಂದುವೆ. ॥ ೩೩ ॥

ಸಕಲ ಪ್ರಾಣಿಗಳೂ ಎಂದರೆ ಉತ್ತಮರು ಮಾತ್ರವಲ್ಲ, ಅಧಮರೂ ಕೂಡ ನಾಶಶೂನ್ಯವಾದ ನಿನ್ನ ಅಪಯಶಸ್ಸನ್ನು ಹೇಳುವರು. ಧೀರ ಮಹಾಶೂರನೆಂದು ಪ್ರಸಿದ್ಧನಾದವನಿಗೆ ಅಕೀರ್ತಿಯು ಮರಣಕ್ಕಿಂತಲೂ ಹೆಚ್ಚು ದುಃಖದಾಯಕವು. ॥ ೩೪ ॥

ಯಾವ ಕರ್ಣ ದುರ್ಯೋಧನಾದಿ ಮಹಾರಥಿಕರಿಗೆ ನೀನು ವೀರನೆಂದು ಸಮ್ಮತನಾಗಿದ್ದೆಯೋ, ಅಂತಹರೆ ನಿನ್ನನ್ನು ಭಯದಿಂದ ಪಲಾಯನ ಮಾಡಿ

ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯಂತಿ ತವಾಹಿತಾಃ ।
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥೩೬॥

ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ ।
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥

ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥೩೮॥

---

ದವನೆಂದು ತಿಳಿಯುವರು. ಇದರಿಂದ ಲಾಘವವನ್ನು ಹೊಂದುವೆ. ಅವರು ಹಾಗೆ ತಿಳಿಯಲೆಂದೆನ್ನಬೇಡ. ನಿನಗಹಿತರಾದ ಕರ್ಣ-ದುರ್ಯೋಧನಾದಿಗಳು ಹೇಳಲರ್ಹಗಳಲ್ಲದ ಬಹಳ ನಿಂದಿತ ಶಬ್ದಗಳನ್ನು ಆಡುವರು. ನಿನ್ನ ಶಕ್ತಿಯನ್ನು ನಿಂದಿಸುವರು. ಇದಕ್ಕಿಂತ ಹೆಚ್ಚಿನ ದುಃಖದಾಯಕವಾದುದೇನಿದೆ? ॥ ೩೫, ೩೬ ॥

'ನ ಚೈತದ್ವಿದ್ಮಃ ಕತರನ್ನೋ ಗರೀಯೋ' ಎಂದು ಹೇಳಿದುದಕ್ಕೆ ಉತ್ತರವಾಗಿ ಹೇಳುತ್ತಾನೆ. ನೀನು ಯುದ್ಧದಲ್ಲಿ ಜಯಿಸಲಿಕ್ಕೂ ಸಾಕು; ಒಂದುವೇಳೆ ಹತನಾದರೆ ಸ್ವರ್ಗವನ್ನು ಹೊಂದುವೆ. ಜಯಿಸಿದರೆ ಪೃಥ್ವಿಯನ್ನು ಭೋಗಿಸುವೆ. ಹೀಗೆ ಎರಡು ಕಲ್ಪದಲ್ಲಿಯೂ ಫಲವತ್ತಾದ ಯುದ್ಧಾರ್ಥವಾಗಿ ನಿಶ್ಚಯಿಸಿಕೊಂಡು ಸನ್ನದ್ಧನಾಗು ॥ ೩೭ ॥

'ಪಾಪಮೇವಾಶ್ರಯೇದಸ್ಮಾನ್ ಎಂಬ ಅರ್ಜುನನ ಶಂಕೆಗೆ ಉತ್ತರ ಹೇಳುತ್ತಾನೆ. ದುಃಖವು ಹೇಗೆ ಉಪಾದೇಯವಲ್ಲವೋ, ಹಾಗೆಯೇ ವಿಷಯಜನ್ಯ ಸುಖವೂ ಕೂಡಾ ಹೇಯವೇ. ಹೀಗೆ ಅಲಾಭದಂತೆ ಲಾಭವೂ, ಪರಾಜಯದಂತೆ ಜಯವೂ, ಹೇಯವಾದ ಪ್ರಯುಕ್ತ ಸಮಾನಗಳು. ಹೀಗೆ ವೈಷಯಿಕ ಸುಖಾದಿಗಳನ್ನು ಹೇಯವಾಗಿ ದುಃಖಾದಿಸಮವೆಂದು ತಿಳಿದುಕೊಂಡಮೇಲೆ ಸ್ವಧರ್ಮಾನುಷ್ಠಾನವೆನ್ನುವುದು ಪರಮಾತ್ಮನ ಆಜ್ಞಾಪರಿಪಾಲನರೂಪವಾದುದರಿಂದ ಆತನ ಪೂಜಾರೂಪವೆಂದು ತಿಳಿದು ಸ್ವಧರ್ಮವಾದ ಯುದ್ಧಕ್ಕೆ ಮನಸ್ಸಿಡು. ಹೀಗೆ ಸುಖಾದ್ಯಭಿಲಾಷೆಯನ್ನು ಬಿಟ್ಟು ಧರ್ಮಬುದ್ಧಿಯಿಂದ ಯುದ್ಧಮಾಡುವ ನಿನಗೆ ಪಾಪವು ಪ್ರಾಪ್ತವಾಗಲಾರದು. ೩೮

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ॥**
**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥೪೦॥**

---

ಈ ವರೆಗೆ 'ನ ತ್ವೇವಾಹಮ್'ತ್ಯಾದಿ ಶ್ಲೋಕಗಳಿಂದ ಹೇಳಿದ ಪ್ರಮೇಯವನ್ನು ಉಪಸಂಹರಿಸಿ ಆರನೇ ಅಧ್ಯಾಯಾಂತ್ಯದ ವರೆಗೆ ಹೇಳುವ ಪ್ರಮೇಯವನ್ನು ಬುದ್ಧ್ಯಾರೋಹಣಾರ್ಥವಾಗಿ ಪ್ರತಿಜ್ಞಾಮಾಡುತ್ತಾನೆ. ಅನೇಕ ಅಧ್ಯಾಯಗಳಲ್ಲಿ ಹೇಳುವ ವಿಷಯವಾದುದರಿಂದ ಪ್ರತಿಜ್ಞಾಮಾಡಿದುದು ನ್ಯಾಯವಾದುದು. ಜೀವೇಶ್ವರಸ್ವರೂಪಜ್ಞಾನಾರ್ಥವಾಗಿ ಈ ವರೆಗೆ ನಾನು ವಾಕ್ಯಗಳನ್ನು ಹೇಳಿದೆ. ಇಲ್ಲಿ 'ಬುದ್ಧಿ' ಎಂಬ ಪದಕ್ಕೆ ಜ್ಞಾನವನ್ನುಂಟುಮಾಡುವ ವಾಕ್ಯವೆಂದರ್ಥ. ಯೋಗವೆಂದರೆ ಜ್ಞಾನೋಪಾಯ. ಮುಂದೆ ಜ್ಞಾನೋಪಾಯದ ವಿಷಯದಲ್ಲಿ, ಎಂದರೆ ಉಪಾಯಜ್ಞಾನಾರ್ಥವಾಗಿ ನಾನು ಮುಂದೆ ಹೇಳುವ ವಾಕ್ಯಗಳನ್ನು ಕೇಳು. ನಾನು ಉಪದೇಶಿಸಿದ ವಾಕ್ಯಗಳಿಂದ ನಿಷ್ಕಾಮಕರ್ಮರೂಪವಾದ ಜ್ಞಾನೋಪಾಯದ ಜ್ಞಾನವನ್ನು ಸಂಪಾದಿಸಿಕೊಂಡು ಕರ್ಮಾನುಷ್ಠಾನಮಾಡಿದರೆ ದುಃಖದಿಂದ ಮುಕ್ತನಾಗುವೆ. ॥ ೩೯ ॥

ನಾನು ಮೇಲೆ ಹೇಳುವ ನಿಷ್ಕಾಮಕರ್ಮರೂಪ ಜ್ಞಾನಸಾಧನ ವಿಷಯದಲ್ಲಿ ಅಭಿಕ್ರಮಕ್ಕೆ ಎಂದರೆ ಪ್ರಾರಂಭಮಾತ್ರಕ್ಕಾದರೂ ನಾಶವಿಲ್ಲ ಎಂದರೆ ನಿಷ್ಫಲತೆಯಿಲ್ಲ. ಮಧ್ಯದಲ್ಲಿ ವಿಚ್ಛೇದ ಬಂದರೆ ಪ್ರತ್ಯವಾಯವೂ ಇಲ್ಲ. (ಪಾಪವೂ ಇಲ್ಲ) ಈ ನಿಷ್ಕಾಮಕರ್ಮರೂಪವಾದ ಧರ್ಮದ ಅಲ್ಪವಾದ ಅಂಶವೂ ಕೂಡ ಮಹತ್ತಾದ ಸಂಸಾರ ಭಯದಿಂದ ರಕ್ಷಿಸುತ್ತದೆ. ಕೃಷ್ಯಾದಿಗಳನ್ನು ಆರಂಭಮಾತ್ರ ಮಾಡಿ ಕೊನೆಗೊಂದಿಸದಿದ್ದರೆ ಹೇಗೆ ಫಲವಿಲ್ಲವೋ, ಮತ್ತು ಯಾಗಾದಿ ವಿಹಿತಕರ್ಮಗಳಲ್ಲಿ ಮಧ್ಯೇ ವಿಚ್ಛೇದ ಬಂದರೆ ಪಾಪವೂ ತತ್ಪರಿಹಾರಾರ್ಥವಾಗಿ ಪ್ರಾಯಶ್ಚಿತ್ತವೂ ಉಕ್ತವಾಗಿಯದೋ, ಹಾಗೆ ವಿಷ್ಣುಧರ್ಮದಲ್ಲಿ ಪ್ರಾರಂಭಮಾತ್ರ ಮಾಡಿದರೂ ನಿಷ್ಫಲತ್ವ ಇಲ್ಲವೆಂದು ಮಾತ್ರವಲ್ಲ, ಫಲವೂ ಇದೆ ಲೋಕದಲ್ಲಿಯೂ ಕೂಡ ಗಂಗೆಗೆ ಹೋಗಲು ಸಾವು

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್॥೪೧॥**
**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨ ॥**

---

ರ್ಥ್ಯವಿಲ್ಲದಿದ್ದರೂ 'ಅಹಂ ಕಾಶೀಂ ಗಮಿಷ್ಯಾಮಿ'—ನಾನು ಕಾಶಿಗೆ ಹೋಗುವೆನೆಂದು ಸಂಕಲ್ಪಮಾಡಿಕೊಂಡಾದರೂ ಇಂಬೇಕೆಂದು ಪ್ರತೀತಿ ಇದೆ. ಇದಲ್ಲದೆ ನಮ್ಮ ಅಶಕ್ತಿಯಿಂದಾಗಲೀ ಇನ್ನಿತರ ಕಾರಣದಿಂದಾಗಲೀ ಆರಂಭಿಸಿದ ಕಾರ್ಯವು ಅಪೂರ್ಣವಾದರೂ ಪಾಪವಿಲ್ಲವೆಂದು ಮಾತ್ರವಲ್ಲ; ಅಲ್ಪಾಂಶಕ್ಕೂ ಮಹಾಫಲವಿದೆ ಎಂದು ತಾತ್ಪರ್ಯವು. ॥ ೪೦ ॥

ಜ್ಞಾನಸಾಧನವನ್ನು ಹೇಳುವ ವಾಕ್ಯಗಳು ಮತಭೇದದಿಂದ ಬಹುಮುಖವಾಗಿ ಪರಸ್ಪರ ವಿರುದ್ಧಗಳಾಗಿರುವುದರಿಂದ ನೀನು ಹೇಳಿದ ಮಾತಿನಲ್ಲೇ ನಾನು ಹೇಗೆ ವಿಶ್ವಾಸವಿಡಬೇಕೆಂಬ ಶಂಕೆಯು ಈ ಶ್ಲೋಕದಿಂದ ಪರಿಹರಿಸಲ್ಪಡುತ್ತದೆ. ಎಲೈ ಕುರುವಂಶಕ್ಕೆ ಶೌರ್ಯಾದಿಗಳಿಂದ ಹರ್ಷವನ್ನು ಕೊಡತಕ್ಕ ಪಾರ್ಥನೇ! ಪ್ರಮಾಣದಿಂದ ನಿಶ್ಚಿತಾರ್ಥವುಳ್ಳ ಜ್ಞಾನಸಾಧನವನ್ನು ಬೋಧಿಸುವ ವಾಕ್ಯವು ಒಂದೇ ವಿಧವಾದುದು. ಅದು ಬಹುಮುಖವೂ ಅಲ್ಲ, ಪರಸ್ಪರ ವಿರುದ್ಧವೂ ಅಲ್ಲ. ಅವ್ಯವಸಾಯಿಗಳ ಎಂದರೆ ಪ್ರಮಾಣ (ಸತ್ಯಜ್ಞಾನ)ದಿಂದ ಅರ್ಥನಿಶ್ಚಯುವಿಲ್ಲದವರ ಉಪಾಯಬೋಧಕ ಮಾತುಗಳು ಬಹುವಿಧಗಳೂ ಪರಸ್ಪರವಿರುದ್ಧಗಳೂ ಅಪರಿಮಿತಗಳೂ ಆಗಿವೆ. ಅಂತಹ ಅಪ್ರಾಮಾಣಿಕ ಮತಗಳ ವಿವಾದದಿಂದ ಪ್ರಾಮಾಣಿಕವಾದ ನಾನು ಹೇಳುವ ಮತದಲ್ಲಿ ಅವಿಶ್ವಾಸವಿಡಲು ಕಾರಣವಿಲ್ಲ. ॥ ೪೧ ॥

ವೈದಿಕಮತಗಳಲ್ಲಿಯೇ ಪರಸ್ಪರ ವಿರೋಧಗಳು ತೋರುತ್ತವೆ. ಆದಕಾರಣ ಏಕತ್ರ ವಿಶ್ವಾಸವನ್ನು ಹೇಗೆ ಮಾಡಬೇಕೆಂಬ ಶಂಕೆಗೆ ಈ ಮೂರು ಶ್ಲೋಕಗಳಿಂದ ಉತ್ತರವನ್ನು ಹೇಳುತ್ತಾನೆ. ಯಾವ ಅಜ್ಞಾನಿಗಳು ನಿರರ್ಥಕ ವೇದಪಾಠಕರಾಗಿ, ಎಂದರೆ 'ಆಪಾತತಃ' ತೋರುವ ಅರ್ಥವನ್ನೇ ತಿಳಿದುಕೊಂಡು ತಾತ್ಪರ್ಯವನ್ನು ತಿಳಿಯದವರಾಗಿ, ಆದುದರಿಂದಲೇ 'ನಾನ್ಯದಸ್ತೀತಿವಾದಿನಃ' ಸ್ವರ್ಗಾತಿರಿಕ್ತ ಮೋಕ್ಷಾಖ್ಯ ಫಲವಿಲ್ಲವೆಂದು ಹೇಳು

ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ |
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ || ೪೩ ||
ಭೋಗೈಶ್ವರ್ಯಪ್ರಸಕ್ತಾನಾಂ ತಯಾಽಪಹೃತಚೇತಸಾಮ್ |
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ || ೪೪ ||
ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ |
ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ||

---

ವುದು ಮಾತ್ರವಲ್ಲದೆ, ಕಾಮ್ಯಫಲದಲ್ಲಿಯೇ ಮನಸ್ಸುಳ್ಳವರಾಗಿ ಯಾವ ವೇದವಾಕ್ಯವನ್ನು (ಜನ್ಮಾದಿಗಳನ್ನು ಕೊಡುವ ಅನೇಕ ಕರ್ಮಪ್ರತಿಪಾದಕವಾದುದನ್ನಾಗಿಯೂ ಭೋಗೈಶ್ವರ್ಯಪ್ರಾಪ್ತಿಸಾಧನವಾದ) ಭೋಗೈಶ್ವರ್ಯಪ್ರಾಪ್ತಿಗಾಗಿ ಜನ್ಮಾದಿಗಳನ್ನು ಕೊಡುವ ಅನೇಕ ಕರ್ಮಪ್ರತಿಪಾದಕವನ್ನಾಗಿ ಹೇಳುತ್ತಾರೋ, ಅಂತಹ ಭೋಗೈಶ್ವರ್ಯಗಳಲ್ಲಿಯೇ ಆಸಕ್ತರಾದ ಅಂತಹ ಆಪಾತಾರ್ಥಪ್ರತಿಪಾದಕ ವೇದವಾಕ್ಯಗಳಿಂದ ಅಪಹೃತಮನಸ್ಸುಳ್ಳ ಪುರುಷರಿಗೆ ಶ್ರೀಪರಮಾತ್ಮನಲ್ಲಿ ಮನಸ್ಸಮಾಧಾನಾರ್ಥವಾಗಿ ವಿಹಿತವಾದ ಪ್ರಮಾಣನಿರ್ಣೀತಾರ್ಥವನ್ನು ತೋರಿಸುವ ಬುದ್ಧಿಯು ಹುಟ್ಟುವುದಿಲ್ಲ.
|| ೪೨, ೪೩, ೪೪, ||

ಎಲೈ ಪಾರ್ಥನೆ! ಸಕಲ ವೇದಗಳೂ ವಿಚಾರಮಾಡದಿದ್ದರೆ 'ಆಪಾತತಃ ಸತ್ತ್ವರಜಸ್ತಮೋರೂಪ ತ್ರಿಗುಣಸಂಬಂಧಿ ಸ್ವರ್ಗಾದಿಫಲವನ್ನು ಕೊಡುವ ಕರ್ಮಾದಿವಿಷಯಕಗಳಾಗಿ ತೋರುತ್ತವೆ. ನೀನಾದರೂ ಸಾಧುಗುಣೋಪೇತನಾದ ಪರಮಾತ್ಮನಲ್ಲಿ ಸ್ಥಿತಿ ಉಳ್ಳವನಾಗಿ ಸುಖದುಃಖರೂಪವಾದ ದ್ವಂದ್ವದಿಂದ ನೀಚೋಚ್ಚಭಾವವನ್ನು ಹೊಂದದೆ, ಶಾಸ್ತ್ರವಿರುದ್ಧವಿಷಯದಲ್ಲಿ ಯೋಗಕ್ಷೇಮವನ್ನು ಬಿಟ್ಟು, ಎಂದರೆ ಇಲ್ಲದಿದ್ದುದನ್ನು ಸಂಪಾದಿಸುವುದೂ, ಇದ್ದುದನ್ನು ರಕ್ಷಿಸುವುದೂ, ನಿಷಿದ್ಧವಿಷಯದಲ್ಲಿ ಇವೆರಡನ್ನು ಬಿಟ್ಟು ಆತ್ಮ ಉಳ್ಳವನಾಗಿ ಎಂದರೆ ಯಾವಾಗಲೂ ಪರಮಾತ್ಮನನ್ನು ತನ್ನ ಸ್ವಾಮಿಯೆಂದು ಸ್ಮರಿಸಿಕೊಂಡು ನಿಸ್ತ್ರೈಗುಣ್ಯನಾಗು—ಸ್ವರ್ಗಾದಿ ಕಾಮ್ಯಫಲದಲ್ಲಿ ಬುದ್ಧಿಯನ್ನು ಬಿಡು. || ೪೫ ||

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**
**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥**

---

ಜ್ಞಾನಫಲವಾದ ಮೋಕ್ಷವು ಕಾಮ್ಯಕರ್ಮಿಗಳಿಗೆ ಇಲ್ಲ. ಕರ್ಮಫಲವಾದ ಸ್ವರ್ಗವು ಜ್ಞಾನಿಗಳಿಗಿಲ್ಲ. ಹೀಗೆ ಇಬ್ಬರಿಗೂ ಸಾಮ್ಯವಿರುವಾಗ ಕಾಮ್ಯಕರ್ಮಿಗಳ ನಿಂದೆಮಾಡಿ ಜ್ಞಾನಮಾರ್ಗಕ್ಕೆ ಪ್ರಾಶಸ್ತ್ಯವನ್ನು ಹೇಳುವುದು ಅಯುಕ್ತವೆಂಬ ಶಂಕೆ ಬಂದರೆ ಉತ್ತರವನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ. ಜಲಪಾನಸಾಧಕವಾದ ಕೂಪದಲ್ಲಿ ಆಗುವ ಫಲವು ಸ್ನಾನ-ಪಾನಾದಿ ರೂಪವಾದುದು ಸಮುದ್ರದ ಜಲದಲ್ಲಿ ಆಗುತ್ತದೆ. ಅದರಂತೆ ಸರ್ವವೇದಗಳಲ್ಲಿ ಹೇಳಿದ ರೀತಿಯಲ್ಲಿ ಕಾಮ್ಯಕರ್ಮವನ್ನು ಮಾಡುವವರಿಗೆ ಸ್ವರ್ಗಾದಿ ರೂಪವಾದ ಎಷ್ಟು ಫಲವು ಹೊಂದಲಿದೆಯೋ ಆ ಸರ್ವಫಲವೂ ಪರಮಾತ್ಮನನ್ನು ತಿಳಿದುಕೊಂಡ ಬ್ರಹ್ಮಜ್ಞಾನಿಗೆ ಆಗಿಯೇ ಆಗುತ್ತದೆ. ಎಂದರೆ ಜ್ಞಾನಿಗಳಿಗೂ ಕರ್ಮಿಗಳಿಗೂ ಬೇರೆಬೇರೆ ಫಲವಿಲ್ಲದಿದ್ದರೂ, ಕರ್ಮಿಗಳ ಫಲವೆನ್ನುವುದು ಕೂಪಜಲದಂತೆ ಅತ್ಯಲ್ಪವಾದುದು. ಬ್ರಹ್ಮಾಪರೋಕ್ಷ ಜ್ಞಾನಿಗಳ ಫಲವು ಮಹಾಸಮುದ್ರೋದಕದಂತೆ ಅತ್ಯಧಿಕವಾದದು. ಆದುದರಿಂದ ಅತ್ಯಲ್ಪಫಲ ಕೊಡುವ ಕಾಮ್ಯಕರ್ಮವನ್ನು ನಿಂದಿಸಿ ಮಹಾಫಲವುಳ್ಳ ಜ್ಞಾನದ ಸಾಧನವಾದ ಯೋಗದಲ್ಲಿ ನಿನ್ನನ್ನು ಪ್ರೇರಣೆಮಾಡಿದುದು ಯುಕ್ತವೇ. ॥ ೪೬ ॥

'ಸ್ವರ್ಗಕಾಮೋ ಯಜೇತ' ಎಂಬ ಶ್ರುತಿಯಲ್ಲಿ ಕಾಮ್ಯಕರ್ಮವು ವಿಹಿತವಾದ ಪ್ರಯುಕ್ತ ವಿಹಿತಕರ್ಮಾನುಷ್ಠಾನ ಮಾಡುವವರಿಗೆ ನಿಂದೆಯು ಯುಕ್ತವಲ್ಲವೆಂದು ಶಂಕಿಸಬಾರದಾಗಿ ಇಲ್ಲಿ ಹೇಳಲ್ಪಡುತ್ತದೆ. ಎಲೈ ಅರ್ಜುನನೆ! ನಿನಗೆ ಕರ್ಮದಲ್ಲಿಯೇ ಅಧಿಕಾರವು, ಯೋಗ್ಯತೆಯು. ಫಲಕಾಮನೆಯಲ್ಲಿ ಯೋಗ್ಯತೆ ಇಲ್ಲ. ಆದಕಾರಣ ಕರ್ಮಮಾಡುವುದರಲ್ಲಿ ಕಾಮ್ಯಫಲವನ್ನೇ ಹೇತುವನ್ನಾಗಿಟ್ಟುಕೊಳ್ಳಬೇಡ. ಫಲಕಾಮನೆ ಬಿಡಬೇಕೆಂದು ಹೇಳಿದುದರಿಂದ ಕರ್ಮಮಾಡದಿರುವುದರಲ್ಲಿ ಮನಸ್ಸು ಮಾಡ

ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।
ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥
ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥

---

ಬೇಡ. ಎಂದರೆ ನಮಗೆ ಕರ್ಮಮಾಡುವುದಕ್ಕೆ ಅಧಿಕಾರವಲ್ಲದೆ ಫಲವನ್ನು ನೆನಸಿಕೊಂಡು ಕರ್ಮಮಾಡಲು ಅಧಿಕಾರವಿಲ್ಲ. ಆದುದರಿಂದ ಫಲಾಪೇಕ್ಷೆಯಿಂದ ಕರ್ಮವನ್ನು ಮಾಡಲೂ ಬಾರದು; ಸರ್ವಾತ್ಮನಾ ಕರ್ಮವನ್ನು ಬಿಡಲೂ ಬಾರದು. ಮತ್ತು ನಿಷ್ಕಾಮನೆಯಿಂದ ಭಗವತ್ಪ್ರೀತಿಗೋಸ್ಕರ ವಿಹಿತಕರ್ಮಗಳನ್ನು ಮಾಡಬೇಕು. ॥ ೪೭ ॥

ಜ್ಞಾನಸಾಧನದಲ್ಲಿಯೇ ಸ್ಥಿತಿಯುಳ್ಳವನಾಗಿ, ಎಂದರೆ ಜ್ಞಾನಸಾಧನಗಳನ್ನು ಮಾಡಿಕೊಳ್ಳುತ್ತಲೇ ಫಲದಲ್ಲಿ ರಾಗವ (ಪ್ರೀತಿಯ)ನ್ನು ಬಿಟ್ಟು ಅಂತಹ ಫಲರಾಗತ್ಯಾಗದಿಂದಲೇ ಕಾರ್ಯಸಿದ್ಧಿ ಮತ್ತು ಅಸಿದ್ಧಿಗಳಲ್ಲಿ ಸಮಾನನಾಗಿದ್ದು, ಎಂದರೆ ನಿರ್ವಿಕಾರನಾಗಿದ್ದು, ವಿಹಿತಕರ್ಮಗಳನ್ನು ಮಾಡು. ಹೀಗೆ ಸಿದ್ಧ್ಯಸಿದ್ಧಿಗಳಲ್ಲಿ ಸಮನಾಗಿ ಇರುವುದೇ ಯೋಗವು. ಎಂದರೆ ಜ್ಞಾನೋಪಾಯವೆಂದೆನ್ನಿಸಿಕೊಳ್ಳುವುದು. ॥ ೪೮ ॥

ಜ್ಞಾನಕರ್ಮರೂಪವಾದ ಪುರುಷಾರ್ಥಸಾಧನಗಳಲ್ಲಿ ಜ್ಞಾನರೂಪ ಪುರುಷಾರ್ಥೋಪಾಯವು ಅತಿಶ್ರೇಷ್ಠವಾದುದು, ಎಂದು ಹೇಳುವ ಉದ್ದಿಶ್ಯ ಕರ್ಮರೂಪ ಪುರುಷಾರ್ಥಸಾಧನವು ಅತ್ಯಲ್ಪವೆಂದು ಹೇಳುತ್ತಾನೆ. ಎಲೈ ಧನಂಜಯನೆ! ಬುದ್ಧಿರೂಪ ಉಪಾಯದಿಂದ ಕರ್ಮವು ದೂರೇಣ ಅವರವಾದುದು. ಅದು ಏಕೆಂದರೆ 'ಫಲಹೇತವಃ' ಯಾರು ಕರ್ಮವನ್ನು ಮಾಡುವ ವಿಷಯದಲ್ಲಿ ಫಲವನ್ನೇ ನಿಮಿತ್ತವಾಗಿಟ್ಟುಕೊಳ್ಳುವರೋ ಅವರು ದೀನರು, ಎಂದರೆ ಕೇವಲ ಫಲಾಪೇಕ್ಷೆಯಿಂದ ಕರ್ಮಮಾಡತಕ್ಕವರು. ಕರ್ಮವು ದುಃಖಕರವಾದ ಪರ್ಯವಸಾನ ಉಳ್ಳದ್ದಾದ ಕಾರಣ ಜ್ಞಾನರೂಪ ಉಪಾಯದಲ್ಲಿಯೇ ಸ್ಥಿತಿಯನ್ನು ಹೊಂದು, ಎಂದರೆ ಜ್ಞಾನಸಾಧನಾನುಷ್ಠಾನವನ್ನೇ ಮಾಡು. ॥ ೪೯ ॥

ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥

ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।
ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥೫೧॥

ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।
ತದಾ ಗಂತಾಽಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥

---

ಭಗವಜ್ಜ್ಞಾನಯುಕ್ತನಾದ ಪುರುಷನು ಪುಣ್ಯ-ಪಾಪರೂಪವಾದ ಸುಕೃತ-ದುಷ್ಕೃತಗಳೆಂಬ ಇವೆರಡನ್ನೂ ಪರಿತ್ಯಾಗಮಾಡುವನು. ಅನಿಷ್ಟ ಫಲಜನಕವಾದ ಪುಣ್ಯವನ್ನೂ ಹೇಯವಾದ ಪಾಪದೊಂದಿಗೆ ಸೇರಿಸಿ ಪರಿತ್ಯಾಗ ಮಾಡುವನು. ಹೀಗೆ ಸರ್ವಾನಿಷ್ಟನಿವೃತ್ತಿ, ಇಷ್ಟಪ್ರಾಪ್ತಿರೂಪವಾದ ಎರಡುವಿಧ ಫಲಕ್ಕೂ ಜ್ಞಾನವು ನಿಮಿತ್ತವಾದುದರಿಂದ ಜ್ಞಾನೋಪಾಯದಲ್ಲಿಯೇ ಪ್ರಯತ್ನಮಾಡು. ಏಕೆಂದರೆ 'ಯೋಗಃ' ಎಂದರೆ ಜ್ಞಾನೋಪಾಯವು ಕರ್ಮಗಳಲ್ಲಿ 'ಕೌಶಲಂ' ಶ್ರೇಷ್ಠವಾದುದು. ॥ ೫೦ ॥

ಹೀಗೆ ಸ್ತುತಿಸಲ್ಪಟ್ಟ ಜ್ಞಾನಫಲವನ್ನು ಶ್ರೀಕೃಷ್ಣನು ತಿಳಿಸುವನು. ಭಗವಜ್ಜ್ಞಾನಿಗಳು ಕರ್ಮದ ಫಲವನ್ನು ಬಿಟ್ಟು, ಎಂದರೆ ಫಲಾಭಿಲಾಷೆಯನ್ನು ತೊರೆದು ನಿಷ್ಕಾಮಕರ್ಮಾನುಷ್ಠಾನದಿಂದ ಪ್ರಶಸ್ತಜ್ಞಾನವುಳ್ಳವರಾಗಿ ಜನನ-ಮರಣರೂಪವಾದ ಸಂಸಾರಬಂಧವಿಮೋಚನೆಯನ್ನು ಹೊಂದಿ ದುಃಖರಹಿತವಾದ ಮೋಕ್ಷರೂಪ ಸ್ಥಾನವನ್ನು ಹೊಂದುವರು .॥ ೫೧ ॥

ಹೀಗೆ ನಿಷ್ಕಾಮಕರ್ಮವನ್ನು ಎಷ್ಟರ ವರೆಗೆ ಮಾಡಬೇಕೆಂದರೆ— ನಿನ್ನ ಅಂತಃಕರಣವು ಯಾವಾಗ ಅಜ್ಞಾನರೂಪವಾದ ದೋಷವನ್ನು ಬಿಡುವುದೋ ಆಗ ಗುರುಗಳ ಸಕಾಶದಿಂದ ಈ ವರೆಗೆ ಕೇಳಿದುದಕ್ಕೂ ಈಗ ಕೇಳತಕ್ಕುದಕ್ಕೂ ಮುಖ್ಯವಾಗಿ ನೀನು ತಿಳಿದು ಮಾಡುವ ಸರ್ವಕರ್ಮಗಳ ಲಾಭವನ್ನೂ ಹೊಂದಿದವನಾಗುವೆ. ಮನಸ್ಸಿನ ಅಜ್ಞಾನನಿವೃತ್ತಿ ಪರ್ಯಂತ ನಿಷ್ಕಾಮಕರ್ಮವನ್ನು ಮಾಡಬೇಕೆಂದು ಅಭಿಪ್ರಾಯ. ॥ ೫೨ ॥

ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।
ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥
ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।
ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥ ೫೪ ॥

---

ಹಿಂದೆ ಹೇಳಿದ ಮಾನಸಿಕ ಅಜ್ಞಾನಪರಿತ್ಯಾಗದ ರೀತಿಯನ್ನೇ ಈ ಶ್ಲೋಕದಲ್ಲಿ ವಿವರಿಸುವರು. ತತ್ತ್ವನಿಶ್ಚಯದ ಪೂರ್ವದಲ್ಲಿ ನಿನಗೆ ಯಾವಾಗ ವೇದಾರ್ಥದಲ್ಲಿ ಇದೋ ಅದೋ? ಎಂದು ಸಂಶಯಗ್ರಸ್ತವಾದ ಬುದ್ಧಿಯು, ತತ್ತ್ವನಿರ್ಣಯವು ಹುಟ್ಟಿದ ಮೇಲೆ ನಿಶ್ಚಲವಾಗುತ್ತದೋ, ಎಂದರೆ ಸಂಶಯಶೂನ್ಯವಾಗುತ್ತದೋ ಆಗ ಸಮಾಧಿಯು ಪ್ರಾಪ್ತವಾಗುತ್ತದೆ; ಧ್ಯಾನಾಧಿಕಾರವು ಬರುವುದು. ಆದರಲ್ಲಿಯೇ ಭಗವಂತನ ಅಪರೋಕ್ಷಜ್ಞಾನವೂ ಕೂಡ ಆಗುತ್ತದೆ. ಅಂತಹ ಶ್ರೀಪರಮಾತ್ಮನ ಸಾಕ್ಷಾತ್ಕಾರದಿಂದ ಪರಮಾನಂದಮಗ್ನನಾದ ಪ್ರಯುಕ್ತ ಭೇರಿ ಬಾರಿಸಿದರೂ ಕೂಡ ಅವನ ಬುದ್ಧಿಯು ಚಲಿಸುವುದಿಲ್ಲ. ಆಗ ಜ್ಞಾನಸಾಧನಾನುಷ್ಠಾನಫಲವು ಪ್ರಾಪ್ತವಾಗುತ್ತದೆ. ಜ್ಞಾನೋಪಾಯದ ಅನುಷ್ಠಾನವನ್ನು ಭಗವತ್ಸಾಕ್ಷಾತ್ಕಾರವಾಗುವ ತನಕ ಮಾಡಬೇಕೆಂದರ್ಥವು. ॥ ೫೩ ॥

ಜ್ಞಾನಿಗಳ ಪ್ರಸಕ್ತಿಯು ಬಂದುದರಿಂದ ಸಮಾಧಿಯಲ್ಲಿರುವ ಜ್ಞಾನಿಗೇನು ಲಕ್ಷಣವೆಂದು ಅರ್ಜುನನು ಕೇಳುವನು. ಎಲೈ ಕೇಶವನೆ! ಸ್ಥಿತಪ್ರಜ್ಞನಾದ ಜ್ಞಾನಿಗೆ ಹಿಂದೆ ಹೇಳಿದಂತೆ ಸಮಾಧಿಯಲ್ಲಿರುವವನಿಗೆ ಎಂದರೆ ಧ್ಯಾನಮಗ್ನನಾದವನಿಗೆ ಭಾಷೆಯು ಎಂದರೆ ವ್ಯವಹಾರೋಪಯೋಗಿ ಲಕ್ಷಣವು ಯಾವುದು? ಅಂತಹನನ್ನು ಯಾವ ಲಕ್ಷಣದಿಂದ ನಾವು ಜ್ಞಾನಿಯೆಂದು ವ್ಯವಹರಿಸಬೇಕು? ಅಲ್ಲದೆ ಅಂತಹ ಭೇರಿತಾಡನಾದಿಗಳಿಂದಲೂ ಅಚಲವಾದ ಮನಸ್ಸುಳ್ಳ ಜ್ಞಾನಿಯು ಯಾವ ಉದ್ದೇಶದಿಂದ ವಚನ ಸ್ಥಿತಿ ಗಮನಾದಿ ವ್ಯಾಪಾರವನ್ನು ಮಾಡುವನು? ನೀನು ಹಿಂದೆ ಹೇಳಿದ ರೀತಿಯಿಂದ ಮಹಾನಂದಸಾಗರದಲ್ಲಿ ಮುಳುಗಿದ ಪ್ರಯುಕ್ತ ಇತರ ವಿಷಯಗಳ ಜ್ಞಾನವೇ ಇಲ್ಲದಿರುವ ಕಾರಣ ಜ್ಞಾನಿಗಳು ಯಾವ ವ್ಯವಹಾರವನ್ನೂ ಮಾಡಲಿಕ್ಕಿಲ್ಲ. ಜ್ಞಾನಿಗಳೆಂದು ಪ್ರಸಿದ್ಧರಾದ ಶುಕಾದಿಗಳಲ್ಲಿಯೂ ಭಾಷ

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್**
**ಆತ್ಮನ್ಯೇವಾಽಽತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥**
**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥**

---

ಣಾದಿರೂಪ ಪ್ರವೃತ್ತಿಯು ದೃಷ್ಟವಾಗಿದೆ. ಆದುದರಿಂದ ನೀನು ಹೇಳಿದುದು ಹೇಗೆ ಯುಕ್ತವಾಗುವುದೆಂದು ಅರ್ಜುನನ ಪ್ರಶ್ನೆಯ ಅಭಿಪ್ರಾಯವು. ॥೫೪॥

ಇದರಲ್ಲಿ 'ಕಾ ಭಾಷಾ' ಎಂದು ಕೇಳಿದ ಭಾಷಾಲಕ್ಷಣದ ಪ್ರಥಮ ಪ್ರಶ್ನೆಗೆ ಉತ್ತರ ಕೊಡುವನು. ಎಲೈ ಕುಂತೀತನಯನೆ! ಮನೋಗತವಾದ ಸಮಸ್ತ ವೈಷಯಿಕ ಕಾಮನೆಗಳನ್ನು ಯಾವಾಗ ಪರಿತ್ಯಾಗಮಾಡುವನೋ ಮತ್ತು ಶ್ರೀಪರಮಾತ್ಮನಲ್ಲಿಯೇ ಏಕಾಗ್ರಮನಸ್ಸುಳ್ಳವನಾಗಿ ಅವನ ಅನುಗ್ರಹದಿಂದಲೇ ವಿಷಯಾಲಂಬುದ್ಧಿರೂಪ ತುಷ್ಟಿಯುಳ್ಳವನಾಗುವನೋ, ಆವಾಗ 'ಸ್ಥಿತಪ್ರಜ್ಞ' ಜ್ಞಾನಿಯೆಂದೆನ್ನಿಸಿಕೊಳ್ಳುವನು. ಎಂದರೆ ಯಾರು ಸರ್ವಕಾಮಪರಿತ್ಯಾಗವನ್ನು ಮಾಡಿ, ಭಗವದೇಕಮನಸ್ಕರಾಗಿ ವಿಷಯದಲ್ಲಿ ಅಲಂಬುದ್ಧಿಯುಳ್ಳವರೋ ಅವರು ಜ್ಞಾನಿಗಳೆಂದು ತಾತ್ಪರ್ಯವು. ॥ ೫೫ ॥

ಇದೇ ಅಭಿಪ್ರಾಯವನ್ನು ಮೇಲಿನ ಶ್ಲೋಕಗಳಲ್ಲಿ ವಿವರಿಸುವನು. ಯಾವಾತನು ದುಃಖಗಳು ಬಂದರೂ ಮನಸ್ಸಿನಲ್ಲಿ ವಿಕಾರಹೊಂದದವನೋ, ಸುಖಾಪೇಕ್ಷೆಯಿಲ್ಲದವನೋ, ಅಸುಂದರ ಪದಾರ್ಥದಲ್ಲಿ ಸುಂದರವೆಂಬ ಭ್ರಾಂತಿರೂಪವಾದ ರಾಗವೂ ಭಯವೂ ಕ್ರೋಧವೂ ಇಲ್ಲದವನೋ, ಅವನು ಜ್ಞಾನಿಯೆಂದೆನ್ನಿಸಿಕೊಳ್ಳುತ್ತಾನೆ. ಹೀಗೆ ವಿಷಯಗಳಲ್ಲಿ ಸ್ನೇಹಶೂನ್ಯನಾಗಿದ್ದ ಪ್ರಯುಕ್ತ ಶುಭವು ಪ್ರಾಪ್ತವಾದರೆ ಅದನ್ನು ಅಭಿನಂದಿಸುವುದಿಲ್ಲ. ಅಶುಭವು ಪ್ರಾಪ್ತವಾದರೆ ದ್ವೇಷಿಸುದಿಲ್ಲ. ಹೀಗೆ ಏನಾದರೂ ಯಾರು ತಾನು ನಿರ್ವಿಕಾರನೇ ಆಗಿರುವನೋ, ಅಂತಹನಿಗೆ ರಾಗಾದಿದೋಷರಾಹಿತ್ಯವು ಬಂದು ಬುದ್ಧಿಯು ದೃಢವಾಗುವುದು. ಮತ್ತು ಆವೆಯು ತನ್ನ ಅಂಗಗಳನ್ನು ಅನಾಯಾಸದಿಂದ ಒಳಗೆಳೆದುಕೊಳ್ಳುವಂತೆ ಯಾವನು ತನ್ನ ಇಂದ್ರಿಯಗಳನ್ನು ಶಬ್ದಾದಿವಿಷಯಗಳಿಂದ ಬಿಡಿಸಿಕೊಳ್ಳುವನೋ ಅವನೇ ಜ್ಞಾನಿಯು. ಇಂತಹ ಇಂದ್ರಿಯಗಳ ವಿಷಯೋಪಸಂಹಾರವು ಅಪ್ರಯತ್ನಸಾಧ್ಯವಾಗಿ

ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥
ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।
ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೮॥
ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥
ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦ ॥

---

ದ್ದರೆ ಅವನ ಬುದ್ಧಿಯು ಸ್ಥಿರವೆಂದು ಹೇಳಬಹುದು. ಕಾಮಾದ್ಯುಪದ್ರವ ಪರಿಹಾರವೆಂಬುದು ಹಿಂದೆ ಹೇಳಿದಂತೆ ಜ್ಞಾನಸಾಧ್ಯವಾಗಿದ್ದರೆ ಅಂತಹ ಜ್ಞಾನಸಂಪಾದನಾರ್ಥವಾಗಿ ಎಲ್ಲರೂ ಪ್ರಯತ್ನಮಾಡುವುದನ್ನು ಬಿಟ್ಟು ಏಕೆ ಕಾಮಾದಿಪೀಡಿತರಾಗುವರು? ಎಂಬ ಆಶಂಕೆಯನ್ನು ಇನ್ನು ಮೇಲಿನ ಶ್ಲೋಕಗಳಿಂದ ಜ್ಞಾನದ ಸಂಪಾದನೆಯು ಕಷ್ಟಸಾಧ್ಯವೆಂದು ತೋರಿಸಿ ಪರಿಹರಿಸುವನು. ॥ ೫೬, ೫೭, ೫೮ ॥

ನಿರಾಹಾರನಾಗಿದ್ದವನಿಗೆ ವಿಷಯಗಳು ನಿವೃತ್ತಗಳಾಗುತ್ತವೆ. ಇಂದ್ರಿಯಗಳಿಗೆ ವಿಷಯಭೋಗಶಕ್ತಿಯು ಆಹಾರತ್ಯಾಗದಿಂದ ಹೋಗುವುದು. ಆದೂ ಕೂಡ 'ರಸವರ್ಜಂ' ರಸನೇಂದ್ರಿಯಕ್ಕೆ ರಸಭೋಗ ಶಕ್ತಿಯು ಮನಸ್ಸಿಗೆ ರಸೇಚ್ಛೆಯೂ ಆಹಾರಪರಿತ್ಯಾಗದಿಂದ ಹೋಗುವುದಿಲ್ಲ. ಅದು ಪರಮಾತ್ಮಸಾಕ್ಷಾತ್ಕಾರದಿಂದ ಹೋಗುತ್ತದೆ. ॥ ೫೯ ॥

ಇಂದ್ರಿಯಜಯಾರ್ಥವಾಗಿ ಆಹಾರಪರಿತ್ಯಾಗವೇಕೆ? ಧ್ಯಾನಾದಿ ಸಾಧಾರಣ ಪ್ರಯತ್ನದಿಂದ ಸಾಕಷ್ಟೆ! ಹಾಗೆ ರಾಗನಿವೃತ್ತಿಗೆ ಬ್ರಹ್ಮಸಾಕ್ಷಾತ್ಕಾರವೇಕೆ? ಪದಾರ್ಥಗಳ ಸಾರಾಸಾರ ವಿವೇಚನೆಯು ಸಾಕಷ್ಟೆ! ಎಂದು ಶಂಕಿಸಕೂಡದು. ಪರೋಕ್ಷಜ್ಞಾನಿಯಾದ ದೇಹಾಭಿಮಾನಿಯು ಧ್ಯಾನಧಾರಣಾದಿ ಪ್ರಯತ್ನವನ್ನು ಮಾಡಿದರೂ ಇಂದ್ರಿಯಗಳು ಬಲಾತ್ಕಾರದಿಂದ ಪುರುಷನಿಗೆ ಕ್ಷೋಭೆಯನ್ನು ತಂದೆಸಗಿ, ಮನಸ್ಸನ್ನು ಸೆಳೆಯುತ್ತವೆ. ಲೋಕದಲ್ಲಿ ಯಾವುವು ಯಾರ ಮನಃಕ್ಷೋಭೆಯನ್ನುಂಟುಮಾಡುವುವೋ ಅವು

ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।
ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥
ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।
ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ
ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ ಸ್ಮೃತಿವಿಭ್ರಮಃ ।
ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥ ೬೩ ॥

---

ಗಳಿಗೆ ಅವರು ಸೋತವರು. ಅದುಕಾರಣ ಹಿಂದೆ ಹೇಳಿದುದು ಹೊರತು ಸಾಧಾರಣ ಪ್ರಯತ್ನವು ಸಾಲದು. ॥ ೬೦ ॥

ಆದುದರಿಂದ ಎಲ್ಲಾ ಇಂದ್ರಿಯಗಳನ್ನೂ ವಿಷಯಗಳ ದೆಶೆಯಿಂದ ಉಪಸಂಹರಿಸಿಕೊಂಡು ಶ್ರೀಕೃಷ್ಣನೇ ಸರ್ವೋತ್ತಮನೆಂದು ತಿಳಿದು ಸಮಾಹಿತನಾಗಿರಬೇಕು-ಪರಮಾತ್ಮನಲ್ಲಿಯೇ ಮನಸ್ಸನ್ನಿಡಬೇಕು ಹೀಗೆ ಪರಮಾತ್ಮನಲ್ಲಿ ಮನೋಯೋಜನೆಯಿಂದ ಯಾರು ತನ್ನ ಇಂದ್ರಿಯಗಳನ್ನು ವಶವರ್ತಿಗಳನ್ನಾಗಿ ಮಾಡಿಕೊಂಡಿದ್ದಾನೋ, ಆತನಿಗೆ ಜ್ಞಾನವು ಸ್ಥಿರವಾಗಿರುತ್ತದೆ.॥೬೧॥

ಹೀಗೆ ಪರಮಾತ್ಮನಲ್ಲಿ ಮನೋಯೋಜನೆಯು ಇಂದ್ರಿಯಜಯಕ್ಕೆ ಮುಖ್ಯ ಸಾಧನವು. ರಾಗದ್ವೇಷಪರಿಹಾರವು ಎರಡನೇ ಸಾಧನವು. ಆದುದರಿಂದ ರಾಗದ್ವೇಷ ಪರಿಹಾರಕ್ಕಾಗಿ ಅದರ ಕಾರಣ ಮತ್ತು ಫಲವನ್ನು ಎರಡು ಶ್ಲೋಕಗಳಿಂದ ತಿಳಿಸುವನು. ವಿಷಯವನ್ನೇ ಧ್ಯಾನಮಾಡುವ ಪುರುಷನಿಗೆ ವಿಷಯಾಸಕ್ತಿಯೂ, ವಿಷಯಾಸಕ್ತಿಯಿಂದ ಕಾಮವೂ, ಆ ಕಾಮವು ಪೂರ್ತಿಯಾಗದಿದ್ದಲ್ಲಿ ಕ್ರೋಧವೂ, ಕ್ರೋಧದಿಂದ ಸಮ್ಮೋಹವೂ ಎಂದರೆ ಅಕಾರ್ಯದಲ್ಲಿ ಇಚ್ಛೆಯೂ, ಮತ್ತು ಅಧರ್ಮದಲ್ಲಿ ಧರ್ಮವೆಂಬ ಭ್ರಮವೂ, ಹೀಗೆ ಎರಡು ವಿಧವಾದ ಸಮ್ಮೋಹದಿಂದ ಧರ್ಮಶಾಸ್ತ್ರನಿಷಿದ್ಧವೆಂಬ ಸ್ಮೃತಿನಾಶವೂ, ಆ ಸ್ಮೃತಿನಾಶದಿಂದ ದೋಷಾದಿ ಬುದ್ಧಿನಾಶವೂ, ಅದರಿಂದ ನರಕಾದ್ಯನರ್ಥರೂಪನಾಶವೂ ಆಗುತ್ತವೆ. ಆದುರಿಂದ ರಾಗದ್ವೇಷಾದಿಗಳಿಗೆ ಪರಂಪರೆಯಾಗಿ ನರಕಾದ್ಯನರ್ಥ ಫಲವೆಂತಲೂ, ವಿಷಯಾಸಕ್ತಿಯು ಕಾರಣವೆಂತಲೂ ಅದರ ಪರಿಹಾರಾರ್ಥವಾಗಿ ತಿಳಿದು ವಿಷಯಾಸಕ್ತಿಯನ್ನು ಬಿಡಬೇಕು ಎಂದು ಸೂಚಿತವಾಯಿತು. ॥ ೬೨, ೬೩ ॥

ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।
ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ ೬೪ ॥

ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತಿ ॥ ೬೫ ॥

ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।
ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥ ೬೬ ॥

ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।
ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭ ॥

---

ಹೀಗೆ ರಾಗದ್ವೇಷಾದಿಗಳಿಂದ ಕೂಡದಿರುವ, ಆದುದರಿಂದಲೇ ಸ್ವಾಧೀನಗಳಾದ ಇಂದ್ರಿಯಗಳಿಗೆ ಅಧೀನವಾದ, ಮನಸ್ಸುಳ್ಳವನಾಗಿ ಶರೀರಧಾರಣಾರ್ಥವಾಗಿ ಮಾತ್ರ ವಿಷಯಾನುಭವ ಮಾಡತಕ್ಕವನ ಮನಸ್ಸು ಪ್ರಸನ್ನವಾಗಿರುತ್ತದೆ. ॥ ೬೪ ॥

ಹೀಗೆ ಇಂದ್ರಿಯಜಯದಿಂದ ಪ್ರಸನ್ನಚಿತ್ತನಿಗೆ ಬ್ರಹ್ಮಸಾಕ್ಷಾತ್ಕಾರವೆಂಬುದು ಬೇಗನೇ ಚೆನ್ನಾಗಿ ಆಗುತ್ತದೆ. ಮಾತ್ರವಲ್ಲದೆ ದುಃಖನಿವೃತ್ತಿರೂಪ ಫಲಪ್ರಾಪ್ತಿಯೂ ಆಗುತ್ತದೆ. ॥ ೬೫ ॥

ಬ್ರಹ್ಮಸಾಕ್ಷಾತ್ಕಾರಕ್ಕೆ ಶ್ರವಣಮನನಾದಿಗಳು ಮಾತ್ರ ಸಾಲದು; ಪ್ರಸಾದವೂ ಬೇಕೆಂಬ ಉದ್ದೇಶದಿಂದ ಪ್ರಸಾದವಿಲ್ಲದಿದ್ದರೆ ದೋಷವನ್ನು ಹೇಳುವನು. ಮನಃಪ್ರಸಾದವಿಲ್ಲದಿದ್ದರೆ ಅಪರೋಕ್ಷಜ್ಞಾನವಿಲ್ಲ. ಹೇಗೆಂದರೆ ಅಪ್ರಸನ್ನ ಮನಸ್ಕನಿಗೆ ಚಿತ್ತೈಕಾಗ್ರ್ಯರೂಪವಾದ ಯುಕ್ತಿ (ಯೋಗ)ಯಿಲ್ಲ. ಅಯುಕ್ತ(ಯೋಗವಿಲ್ಲದವ)ನಿಗೆ ಧ್ಯಾನವಿಲ್ಲ. ಧ್ಯಾನವಿಲ್ಲದವನಿಗೆ ಅಪರೋಕ್ಷಜ್ಞಾನವೂ ಇಲ್ಲ. ಹೀಗೆ ಬ್ರಹ್ಮಾಪರೋಕ್ಷವಿಲ್ಲದವನಿಗೆ ಶಾಂತಿಯಿಲ್ಲ. ಅಶಾಂತನಿಗೆ ಮೋಕ್ಷರೂಪ ಸುಖವಿಲ್ಲ. ॥ ೬೬ ॥

ಇಂದ್ರಿಯಗಳು ವಿಷಯಗಳ ಕಡೆಗೆ ಓಡುವಾಗ ಮನಸ್ಸು ಇಂದ್ರಿಯಗಳನ್ನು ಅನುಸರಿಸಿ ಹೋಗುತ್ತದೆ. ಆದುದರಿಂದ ಪರೋಕ್ಷಜ್ಞಾನವು

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೮॥**

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥೬೯॥**

---

ಹುಟ್ಟುವುದಿಲ್ಲ. ಹುಟ್ಟಿದರೂ ಧ್ಯಾನೋಪಯುಕ್ತವಾಗುವುದಿಲ್ಲ. ಗಾಳಿಯು ನೀರಿನಲ್ಲಿ ನಾವೆಯನ್ನು ಹೇಗೆ ತಡೆಯುತ್ತದೋ, ಹಾಗೆ ಮನಸ್ಸು ಇಂದ್ರಿಯ ಪರವಶವಾಗುವುದು. ಆದುದರಿಂದ ಅಯುಕ್ತನಿಗೆ ಭಾವನೆಯಿಲ್ಲವೆಂದು ಹೇಳಿದುದು. ॥ ೬೭ ॥

ಹೀಗೆ ಹಿಂದೆ ಹೇಳಿದ ರೀತಿಯಿಂದ ಇಂದ್ರಿಯಜಯವು ಅವಶ್ಯವಾದ ಪ್ರಯುಕ್ತ ಮಹಾಬಾಹುವಾದ ಕುಂತೀತನಯನೆ! ಯಾವನ ಇಂದ್ರಿಯಗಳು ತತ್ತದ್ವಿಷಯಗಳಾದ ಶಬ್ದಸ್ಪರ್ಶರೂಪಾದಿಗಳ ವಶವಾಗುವುದಿಲ್ಲವೋ, ಎಂದರೆ ತತ್ತದ್ವಿಷಯಾಸಕ್ತಗಳಾಗಿಲ್ಲವೋ, ಆ ಮಹಾನುಭಾವನಿಗೆ ಜ್ಞಾನವು ಸ್ಥಿರವಾಗುತ್ತದೆ. ಪರಮಾನಂದಮಗ್ನನಾದ ಜ್ಞಾನಿಯು ಭಾಷಣಾದಿ ಪ್ರವೃತ್ತಿಯನ್ನು ಏಕೆ ಮಾಡುವನೆಂದು 'ಕಿಂ ಪ್ರಭಾಷೇತ'ತ್ಯಾದಿಗಳಿಂದ ಮಾಡಿದ ಪ್ರಶ್ನೆಗೆ ಉತ್ತರವನ್ನು ಮೇಲಿನ ಗ್ರಂಥದಿಂದ ಹೇಳುವನು. ॥೬೮॥

ಸರ್ವ ಪ್ರಾಣಿಗಳಿಗೆ ಯಾವ ಪರಮಾತ್ಮನ ಸ್ವರೂಪವು ರಾತ್ರಿತುಲ್ಯವೋ, ಅಂತಹ ಪರಮಾತ್ಮನ ಸ್ವರೂಪದ ವಿಷಯದಲ್ಲಿ ಇಂದ್ರಿಯನಿಗ್ರಹವುಳ್ಳ ಜ್ಞಾನಿಯು ಜಾಗರೂಕನಾಗಿದ್ದಾನೆ. ಎಂದರೆ ವಿಷಯಾಸಕ್ತರಾದ ಪ್ರಾಣಿಗಳಿಗೆ ನಿದ್ರಿಸುವವನಿಗೆಂಬಂತೆ ಯಾವ ಪದಾರ್ಥದ ಜ್ಞಾನವೂ ಇರುವುದಿಲ್ಲವೋ, ಹಾಗೆ ಪರಮಾತ್ಮನ ಸ್ವರೂಪಜ್ಞಾನವಿಲ್ಲ. ಆದರೆ ವಿಷಯಾಸಕ್ತನಾಗದಿರುವ ಜಿತೇಂದ್ರಿಯನು ಪ್ರಾಣಿಗಳಿಗೆ ತಿಳಿಯದ ಪರಮಾತ್ಮನ ಸ್ವರೂಪವನ್ನು ಸರ್ವದಾ ತಿಳಿದುಕೊಂಡಿರುತ್ತಾನೆ. ಭೂತಗಳೆಲ್ಲಾ ಯಾವುದರಲ್ಲಿ ಜಾಗರೂಕರಾಗಿರುವರೋ, ಧ್ಯಾನಾಸಕ್ತನಾದ ಜ್ಞಾನಿಗೆ ಅದು ರಾತ್ರಿತುಲ್ಯ ಎಂದರೆ ಪ್ರಾಣಿಗಳೆಲ್ಲ ಯಾವ ವಿಷಯಸುಖವನ್ನು ಅನುಭವಿಸಿಕೊಂಡಿರುವರೋ, ಜ್ಞಾನಿಗೆ ಆದರ ಅಭಿಜ್ಞಾನವಿಲ್ಲ. ಇದರಿಂದ ಭಗವ

ಆಪೂರ್ಯಮಾಣಮಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।
ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ
ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥ ೭೦ ॥
ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧ ॥

---

ದೇಕಾಸಕ್ತನಾಗಿರುವ ಪ್ರಯುಕ್ತ ಜ್ಞಾನಿಗೆ ನಮ್ಮಂತೆ ಸಂಭಾಷಣಾದಿಗಳಿಲ್ಲ. ಅತ್ಯಲ್ಪಪ್ರವೃತ್ತಿಯು ಮತ್ತನು ಮಾಡುವ ನೃತ್ಯಾದಿಗಳಂತೆ ಉದ್ದೇಶಪೂರ್ವಕವಲ್ಲದೆನಡೆಯುತ್ತದೆಂದು ಹಿಂದಿನ ಪ್ರಶ್ನೆಗೆ ಉತ್ತರವನ್ನು ಕೊಟ್ಟದ್ದಾಯಿತು. ॥ ೬೯ ॥

ಜ್ಞಾನಿಯು ಉದ್ದೇಶವಿಲ್ಲದೆ ವಿಷಯವನ್ನು ಭೋಗಿಸುವ ರೀತಿಯನ್ನು ಈ ಶ್ಲೋಕದಲ್ಲಿ ತಿಳಿಸುವನು. ನಾನಾ ನದೀಜಲಗಳು ಸಮುದ್ರವನ್ನು ಹೇಗೆ ಪ್ರವೇಶಿಸುವುವೋ, ಹಾಗೆ ಪ್ರವೇಶಿಸಿದರೂ ಸಮುದ್ರಕ್ಕೆ ತತ್ಪ್ರಯುಕ್ತ ವೃದ್ಧಿಯು ಹೇಗಿಲ್ಲವೋ ಆ ನದೀಜಲಾದಿಗಳ ಪ್ರವೇಶಕ್ಕಾಗಿ ಸಮುದ್ರವು ಹೇಗೆ ಏನೊಂದು ಪ್ರಯತ್ನವನ್ನೂ ಮಾಡುವುದಿಲ್ಲವೋ, ಹಾಗೆಯೇ ಸರ್ವ ವಿಷಯಗಳು ಯಾವ ಜ್ಞಾನಿಯನ್ನು ಪ್ರವೇಶಿಸುವುವೋ, ವಿಷಯಪ್ರವೇಶದಿಂದ ವೃದ್ಧಿಯಾಗಲೀ ಅದಕ್ಕೆ ಪ್ರಯತ್ನವಾಗಲೀ ಯಾರಲ್ಲಿಲ್ಲವೋ, ಅವನೇ ಮೋಕ್ಷಯೋಗ್ಯನು. ಅಲ್ಲದೆ ನಿಂದಿತವಾದ ಈ ವಿಷಯಕಾಮನೆಯುಳ್ಳವನಲ್ಲ. ಇದನ್ನೇ ಮೇಲಿನ ಶ್ಲೋಕದಲ್ಲಿ ಶ್ರೀಕೃಷ್ಣನು ವಿವರಿಸುವನು. ॥೭೦॥

ಯಾವ ಜ್ಞಾನಿಯು ಇಚ್ಛೆಯಿಲ್ಲದವನಾಗಿಯೂ ನಾನು ಇದಕ್ಕೆ ನಿಯಾಮಕನೆಂಬ ಸ್ವಾಮಿತ್ವಾಭಿಮಾನ ಮತ್ತು ಕರ್ತೃತ್ವಾಭಿಮಾನಗಳಿಂದ ರಹಿತನಾಗಿಯೂ ವಿಷಯವನ್ನನುಭವಿಸುವನೋ, ಅವನೇ ಪುರುಷನೆಂದೆನ್ನಿಸಿಕೊಳ್ಳುವನು. ಇತರರು ಪಶುತುಲ್ಯರು. ಅವನೇ ಮೋಕ್ಷಭಾಗಿಯು. ಇತರರು ಅಲ್ಲವು. ॥ ೭೧ ॥

ಈ ವರೆಗಿನ ವಿಷಯವನ್ನು ಉಪಸಂಹರಿಸುವನು. ಎಲೈ ಪಾರ್ಥನೇ! ಈ ವರೆಗೆ ಹೇಳಿದುದು ಬ್ರಹ್ಮವಿಷಯಕವಾದ ಸ್ಥಿತಿಯು. ಎಂದರೆ ಜ್ಞಾನಿ

ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ।
ಸ್ಥಿತ್ವಾಽಸ್ಯಾಮಂತಕಾಲೇಽಪಿ ಬ್ರಹ್ಮ ನಿರ್ವಾಣಮೃಚ್ಛತಿ ॥ ೭೨ ॥

॥ ಇತಿ ದ್ವಿತೀಯೋಧ್ಯಾಯಃ ॥

---

ಲಕ್ಷಣವು. ಸರ್ವಾಭಿಲಾಷೆಯನ್ನು ಪರಿತ್ಯಾಗಮಾಡಿ ಪರಮಾತ್ಮನ ಧ್ಯಾನಮಾತ್ರಾಸಕ್ತನಾಗಿರುವಿಕೆಯು. ಇಂತಹ ಸ್ಥಿತಿಯನ್ನು ಹೊಂದಿದವನು ದುಃಖಭಾಗಿಯಲ್ಲ. ಮರಣಕಾಲದಲ್ಲಿಯೂ ಶ್ರೀಪರಮಾತ್ಮನ ಸ್ಮೃತ್ಯಾದಿಗಳುಳ್ಳವನು, ನಿರ್ವಾಣಪದದಿಂದ ಹೇಳಿದ, ನಮ್ಮ ಹಾಗೆ ಕುತ್ಸಿತವಾದ ಪ್ರಾಕೃತದೇಹವಿಲ್ಲದ ಪರಬ್ರಹ್ಮನನ್ನು ಹೊಂದುವನು. ॥ ೭೨ ॥

# ತೃತೀಯೋಽಧ್ಯಾಯಃ

॥ ಅರ್ಜುನ ಉವಾಚ ॥

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧ ॥**
**ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ ೨ ॥**

॥ ಶ್ರೀಭಗವಾನುವಾಚ ॥

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ॥**

---

**ನಿಷ್ಕಾಮಕರ್ಮವನ್ನು ಮಾಡಬೇಕೆಂಬ ಉದ್ದೇಶದಿಂದ ಅದರ ವಿಸ್ತಾರವು ಈ ಅಧ್ಯಾಯದಲ್ಲಿ ನಿರೂಪಿಸಲ್ಪಡುತ್ತದೆ. ಅದಕ್ಕೆ ಅನುಕೂಲವಾದ ಅರ್ಜುನನ ಪ್ರಶ್ನೆಯನ್ನು ಪ್ರಥಮದಲ್ಲಿ ತಿಳಿಸುವರು.**

ಎಲೈ ಶ್ರೀಕೃಷ್ಣನೆ! 'ದೂರೇಣ ಹ್ಯವರಂ ಕರ್ಮ' ಎಂದು ನೀನು ಹೇಳಿದಂತೆ ಕರ್ಮದಿಂದ ಜ್ಞಾನವು ಶ್ರೇಷ್ಠವೆಂದು ನಿನಗೆ ಸಮ್ಮತವಾಗಿದ್ದರೆ ಈ ನೀಚವಾದ ಕರ್ಮದಲ್ಲಿ ಏಕೆ ನನ್ನನ್ನು ಪ್ರೇರಿಸುತ್ತೀ? ಅದರಲ್ಲಿ ರಾಗ ದ್ವೇಷಾದಿಗಳಿಗೆ ಅವಕಾಶವಿರುವ ಪ್ರಯುಕ್ತ ಘೋರವಾದ ಯುದ್ಧದಲ್ಲಿ ಹೀಗೆ ಅಕಾಮ್ಯಕರ್ಮ ಮಾಡಬೇಕೆಂದು ಹೇಳುವುದು. ಒಂದು ಕಡೆಯಲ್ಲಿ 'ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ' ಎಂದು ಕಾಮ್ಯವಾದ ಯುದ್ಧದಲ್ಲಿ ನಿಯೋಗಿಸುವುದು, ಹೀಗೆ ಸಮ್ಮಿಶ್ರವಾದ ವಾಕ್ಯದಿಂದ ನನ್ನ ಬುದ್ಧಿಯನ್ನು ಮೋಹಪಡಿಸುವವನಂತೆ ಏಕೆ ನಟಿಸುವೆ? ನಾನು ಯಾವುದರಿಂದ ಶ್ರೇಯಸ್ಸನ್ನು ಪಡೆದೇನೋ ಅದೊಂದು ಮಾರ್ಗವನ್ನೇ ನಿರ್ಣಯಮಾಡಿ ಹೇಳು, ಎಂದು ಅರ್ಜುನನು ಪ್ರಶ್ನೆಮಾಡಿದುದಕ್ಕೆ ಶ್ರೀಕೃಷ್ಣನು ಮುಂದಿನ ಗ್ರಂಥದಿಂದ ಉತ್ತರವನ್ನು ಹೇಳುವನು. ॥ ೧, ೨ ॥

ಎಲೈ ಪಾರ್ಥನೆ! ಈ ಮುಕ್ತಿಯೋಗ್ಯರಲ್ಲಿ ಮೋಕ್ಷವು ಎರಡು ಪ್ರಕಾರವಾಗಿರುತ್ತದೆಂದು ಹೇಳಿದ್ದೇನೆ. ಹೇಗೆಂದರೆ, ಸನಕಾದಿಗಳಿಗೆ ಜ್ಞಾನೋಪಾ

ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।
ನ ಚ ಸನ್ನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪ ॥

ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।
ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥

ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ

---

ಯಿಂದ ಮೋಕ್ಷವು. ಪ್ರಿಯವ್ರತಾದಿಗಳಿಗೆ ಕರ್ಮೋಪಾಯದಿಂದ ಮೋಕ್ಷ ವಾಗುತ್ತದೆ ಎಂದು. ॥ ೩ ॥

ಜ್ಞಾನಿಗಳೆಂದು ಹೇಳಿದ ಮಾತ್ರದಿಂದ ಕರ್ಮಶೂನ್ಯರೆಂತಲೂ ಕರ್ಮಿಗಳೆಂದು ಹೇಳಿದ ಮಾತ್ರದಿಂದ ಜ್ಞಾನಶೂನ್ಯರೆಂತಲೂ ನನ್ನ ಅಭಿಪ್ರಾಯ ವಲ್ಲ. ಇಬ್ಬರಲ್ಲಿಯೂ ಎರಡೂ ಇವೆ. ಜ್ಞಾನಿ ಮತ್ತು ಕರ್ಮಿ ಎಂಬ ವ್ಯವಹಾರವು ಪ್ರಾಧಾನ್ಯಾಭಿಪ್ರಾಯದಿಂದ; ಎಂದರೆ ಜ್ಞಾನವು ಅಲ್ಪವಾಗಿ ಕರ್ಮವು ಅಧಿಕವಾಗಿರುವವರಿಗೆ ಕರ್ಮಿಗಳೆಂದೂ, ಕರ್ಮವು ಅಲ್ಪವಾಗಿ ಜ್ಞಾನವು ಅಧಿಕವಾಗಿರುವವರಿಗೆ ಜ್ಞಾನಿಗಳೆಂದೂ ವ್ಯವಹಾರವು. ಹೀಗಿರಲು ಸರ್ವಾತ್ಮನಾ ಕರ್ಮವನ್ನು ಬಿಟ್ಟವನು ನೈಷ್ಕರ್ಮ್ಯಶಬ್ದವಾಚ್ಯವಾದ ಮೋಕ್ಷವನ್ನು ಹೊಂದುವಂತಿಲ್ಲ. ಹೀಗೆ ಕೇವಲ ಯತ್ಯಾಶ್ರಮದಿಂದಲೂ ಮನಃಶಾಂತಿಯಿಲ್ಲದೆ ಮುಕ್ತಿಯನ್ನು ಹೊಂದಲು ಸಾಧ್ಯವಿಲ್ಲ. ॥ ೪ ॥

ಯಾವ ಮನುಷ್ಯನಾದರೂ ಯಾವಾಗಲೂ ಒಂದು ಕ್ಷಣದಲ್ಲಿಯೂ ಕೂಡ ಕರ್ಮ ಮಾಡದೆ ಇರುವುದಿಲ್ಲ. ಸರ್ವ ಪ್ರಾಣಿಗಳೂ ಪ್ರಕೃತಿಕಾರ್ಯವಾದ ಸತ್ತ್ವರಜಸ್ತಮೋಗುಣಗಳಿಂದ ಕರ್ಮವನ್ನು ಮಾಡಿಸಿಕೊಳ್ಳುತ್ತವೆ. ಇಲ್ಲಿ ಅವಶವೆಂಬ ಶಬ್ದದಿಂದ ಅಕಾರವಾಚ್ಯನಾದ ವಿಷ್ಣುವಿನ ವಶನಾಗಿ ಕರ್ಮಮಾಡುವನೆಂಬ ಪ್ರಾಮಾಣಿಕವಾದ ಅರ್ಥವು. ನಾವು ಕರ್ಮವನ್ನು ಮಾಡಬಾರದೆಂದು ಎಂದುಕೊಂಡರೂ ನಮ್ಮ ಸತ್ತ್ವಾದಿ ಗುಣಾನುಸಾರವಾಗಿ ಈಶ್ವರನು ಕರ್ಮವನ್ನು ಮಾಡಿಸುವನು. ಆದುದರಿಂದ ಸರ್ವಾತ್ಮನಾ ಕರ್ಮವನ್ನು ಬಿಟ್ಟಿರಲು ಶಕ್ಯವಿಲ್ಲ. ॥ ೫ ॥

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾಽಽರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥
ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।
ಶರೀರಯಾತ್ರಾಽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥

---

ಸರ್ವಕರ್ಮಪರಿತ್ಯಾಗವೆಂದರೆ ಚಲನಾದಿ ಕರ್ಮಪರಿತ್ಯಾಗವೆಂದು ನನ್ನ ಅಭಿಪ್ರಾಯವಲ್ಲ. ಅದು ಬಿಡಲಿಕ್ಕೆ ಸಾಧ್ಯವೂ ಅಲ್ಲ ಯಜ್ಞಾದಿ ಕರ್ಮಗಳು ಜ್ಞಾನಕ್ಕಿಂತ ಅವರವಾ(ಕಡಿಮೆಯಾ)ದುದರಿಂದ ಬಿಡಬಹು ದೆಂದು ನನ್ನ ಅಭಿಪ್ರಾಯವು. ಆದುದರಿಂದ 'ನ ಹಿ ಕಶ್ಚಿತ್ ಕ್ಷಣಮಪಿ' ಎಂದು ಹೇಳಿದುದು ಯುಕ್ತವಲ್ಲವೆಂಬ ಅರ್ಜುನನ ಮನಸ್ಸಿನ ಶಂಕೆಯನ್ನು ಮನಸ್ಸೇ ಬಂಧಮೋಕ್ಷಗಳಲ್ಲಿ ಮುಖ್ಯಕಾರಣ; ಕರ್ಮಮಾಡುವುದು ಮತ್ತು ಬಿಡುವುದು ಕಾರಣವಲ್ಲವೆಂಬುದನ್ನು ಮುಂದಿನ ಶ್ಲೋಕಗಳಿಂದ ತಿಳಿಸಿ ಪರಿಹರಿಸುವನು. ಯಾವಾತನು ಹಸ್ತಪಾದಾದಿ ಕರ್ಮೇಂದ್ರಿಯಗಳನ್ನೂ ಚಕ್ಷುರಾದಿ ಜ್ಞಾನೇಂದ್ರಿಯಗಳನ್ನೂ ಸಹ ಬಲಾತ್ ವಿಷಯಗಳಲ್ಲಿ ಸೇರ ದಂತೆ ಮಾಡಿಕೊಂಡು, ಎಂದರೆ ಬಾಹ್ಯವ್ಯಾಪಾರರಹಿತನಾಗಿ ಮನಸ್ಸಿನಿಂದ ಸಕಲ ರೂಪಾದಿವಿಷಯಗಳನ್ನು ಚಿಂತಿಸಿಕೊಂಡೇ ಇರುವನೋ ಅವನು ಭ್ರಾಂತನು, ಕಪಟಾಚಾರಿಯು, ಡಾಂಭಿಕನೆಂದೆನಿಸಿಕೊಳ್ಳುವನು. ಯಾವನು ಮನಸ್ಸಿನಿಂದ ಸಕಲೇಂದ್ರಿಯಗಳನ್ನು ನಿಯಮನಮಾಡಿಕೊಂಡು, ಎಂದರೆ ಫಲೇಚ್ಛಾರಹಿತನಾಗಿ ಆಯಾ ಇಂದ್ರಿಯಗಳಿಂದ ಸ್ವವರ್ಣಾಶ್ರಮೋಚಿತ ವಾದ ಕರ್ಮರೂಪ ಉಪಾಯವನ್ನು ಆರಂಭಿಸುತ್ತಾನೋ, ಅವನು ಫಲೇ ಚ್ಛಾರಹಿತನಾದ ಪ್ರಯುಕ್ತ ಉತ್ತಮನು. ಇಲ್ಲಿ ಮನೋನಿಗ್ರಹವಿಲ್ಲದ ಪುರುಷನಿಗಿಂತ ಮನೋನಿಗ್ರಹವುಳ್ಳವನಿಗೆ ಆಧಿಕ್ಯವನ್ನು ಹೇಳಿದ ಕಾರಣ ಕರ್ಮಕರಣಾಕರಣಗಳು ಪ್ರಯೋಜಕಗಳಲ್ಲ. ಮನಸ್ಸೇ ಮುಖ್ಯ ಕಾರಣ ವೆಂದು ತಿಳಿಯುತ್ತದೆ. ॥ ೬, ೭ ॥

ಆದುದರಿಂದ ಸ್ವವರ್ಣಾಶ್ರಮನಿಯತವಾದ ಕರ್ಮವನ್ನು ನೀನು ಮಾಡು. ಕರ್ಮ ಮಾಡದೆ ಇರುವುದಕ್ಕಿಂತ ವಿಹಿತಕರ್ಮಕರಣವು ಶ್ರೇಷ್ಠ ವಾದುದು. ಇದಲ್ಲದೆ ಸರ್ವಾತ್ಮನಾ ಕರ್ಮಪರಿತ್ಯಾಗಮಾಡಿದರೆ ಶರೀರ ನಿರ್ವಾಹವೂ ಆಗುವುದಿಲ್ಲ. ॥ ೮ ॥

ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ
ಕರ್ಮಬಂಧನಃ ।
ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯ ॥

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦ ॥

ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥

ಇಷ್ಟಾನ್ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ ॥

'ಕರ್ಮಣಾ ಬಧ್ಯತೇ ಜಂತುಃ' ಎಂದು ಪ್ರಮಾಣವಿರುವುದರಿಂದ ಬಂಧಕವಾದ ಕರ್ಮವನ್ನು ನಾನು ಹೇಗೆ ಮಾಡಲೆಂದು ಶಂಕಿಸಬೇಡ. ಜನರಿಗೆ ಕರ್ಮವು ವಿಷ್ಣುವಿನ ಉದ್ದೇಶಕವಾಗಿಲ್ಲದಿದ್ದರೆ ಮಾತ್ರ ಬಂಧಕವಾಗುವುದು. ಪಾರ್ಥನೆ! ವಿಷ್ಣೂದ್ದೇಶಕವಾದ ಕರ್ಮವನ್ನು ಫಲಕಾಮನೆಯಿಲ್ಲದೆ ಮಾಡು; ಅದು ಬಂಧಕವಲ್ಲ. ವರ್ಣಾಶ್ರಮೋಚಿತವಾದ ಕರ್ಮವನ್ನು ಅವಶ್ಯ ಮಾಡಬೇಕೆಂಬ ವಿಷಯದಲ್ಲಿ ಒಂದು ಐತಿಹ್ಯವನ್ನು ಮೇಲಿನ ನಾಲ್ಕು ಶ್ಲೋಕಗಳಿಂದ ಹೇಳುತ್ತಾನೆ. ॥ ೯ ॥

ಪೂರ್ವದಲ್ಲಿ ಬ್ರಹ್ಮನು ಯಜ್ಞಗಳಿಂದ ಕೂಡಿದ ಬ್ರಾಹ್ಮಣಾದಿ ಪ್ರಜೆಗಳನ್ನು ಸೃಷ್ಟಿಮಾಡಿ ಅವರನ್ನು ಕುರಿತು ಎಂದನು, "ಎಲೈ ಪ್ರಜೆಗಳೇ! ನಿಮ್ಮ ಜೊತೆಯಲ್ಲಿ ಸೃಷ್ಟಿಮಾಡಿದ ಯಜ್ಞಕರ್ಮವು ನಿಮಗಭಿಲಷಿತವಾದುದನ್ನು ಕೊಡುವುದು. ಇದರಿಂದ ಬೇಕಾದ ಪುರುಷಾರ್ಥಗಳನ್ನು ಸಂಪಾದಿಸಿಕೊಳ್ಳಿರಿ. ಇದರಿಂದ ಹೇಗೆ ಸಂಪಾದಿಸುವುದೆಂದರೆ— ಈ ಯಜ್ಞಕರ್ಮದಿಂದ ದೇವತೆಗಳನ್ನು ಪೂಜಿಸಿರಿ. (ಹವಿಸ್ಸಿನಿಂದ ತೃಪ್ತರನ್ನಾಗಿ ಮಾಡಿರಿ.) ತೃಪ್ತರಾದ ದೇವತೆಗಳು ನಿಮ್ಮನ್ನು ಸಂಭಾವಿಸಲಿ—ಇಷ್ಟವಾದ ವೃಷ್ಟಿಸಸ್ಯಾದಿಗಳಿಂದ ನಿಮ್ಮನ್ನು ಸಂತೋಷಪಡಿಸಲಿ. ಹೀಗೆ ಅನ್ಯೋನ್ಯವಾಗಿ ನೀವೂ ದೇವತೆಗಳೂ ಸಂಭಾವಿಸಿಕೊಂಡರೆ ಶ್ರೇಯಸ್ಸನ್ನು ಹೊಂದುವಿರಿ."॥೧೦,೧೧॥

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥೧೩॥**
**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥**

---

ಇದನ್ನೆಲ್ಲ ವಿವರಿಸಿ ಕರ್ಮಮಾಡದಿದ್ದರೆ ದೋಷವನ್ನು ಹೇಳುತ್ತಾನೆ. ಹೀಗೆ ನಿಮ್ಮಿಂದ ಯಜ್ಞದಲ್ಲಿ ಪೂಜಿಸಲ್ಪಟ್ಟ ದೇವತೆಗಳು ಅನ್ನಾದಿ ಸಕಲಾಭೀಷ್ಟಗಳನ್ನು ನಿಮಗೆ ಕೊಡುತ್ತಾರೆ. ಹೀಗೆ ದೇವತೆಗಳಿಂದ ಕೊಡಲ್ಪಟ್ಟ ಅನ್ನಾದಿಗಳನ್ನು ಯಜ್ಞಾದಿಗಳ ಮೂಲಕ ದೇವತೆಗಳಿಗೆ ಅರ್ಪಿಸದೆ ಯಾರು ತಾನೇ ಭೋಗಿಸುತ್ತಾನೋ, ಅವನು ಪರದ್ರವ್ಯವನ್ನು ಪರರಿಗೆ ಕೊಡದಿರುವ ಚೋರನಂತೆ ಆಗುವನು. ॥ ೧೨ ॥

ಯಾರು ವಿಷ್ಣ್ವಾದಿ ದೇವತೆಗಳನ್ನು ಯಜ್ಞಾದಿಗಳಿಂದ ಪೂಜಿಸಿಕೊಂಡು ಉಳಿದ ಅಂಶವನ್ನು ತಾವು ಭೋಗಿಸಿಕೊಂಡಿರುವರೋ, ಅವರು ಸಕಲ ಪಾಪಗಳಿಂದ ಮುಕ್ತರಾಗುತ್ತಾರೆ. ಯಾರು ಸ್ವಾರ್ಥಕ್ಕಾಗಿ ಪಾಕವನ್ನು ಮಾಡುವರೋ, ಅವರು ಪಾಪವನ್ನೇ ಭೋಗಿಸುವರು. ಎಂದರೆ ಸ್ವೋದರ ಪೂರ್ತಿಗಾಗಿಯೇ ಪಾಕವನ್ನು ಮಾಡಿ ದೇವತೆಗಳಿಗೆ ಅರ್ಪಿಸದೆ ಯಾರು ಭೋಜನಮಾಡುವರೋ, ಆ ಪಾಕವು ಪಾಪಜನಕವಾದುದರಿಂದ ಅವರು ಪಾಪಭೋಜಿಗಳೆಂದೆನಿಸಿಕೊಳ್ಳುತ್ತಾರೆ. ॥ ೧೩ ॥

ಇನ್ನು ಸ್ವವರ್ಣಾಶ್ರಮೋಚಿತ ಕರ್ಮವನ್ನು ಅವಶ್ಯಮಾಡಬೇಕೆಂಬ ವಿಷಯದಲ್ಲಿ ಜಗಚ್ಚಕ್ರಪ್ರವರ್ತಕತ್ವರೂಪವಾದ ಕಾರಣವನ್ನು ಹೇಳುವನು. ಅನ್ನದಿಂದ ರೇತೋದ್ವಾರಾ ಪ್ರಾಣಿಗಳು ಉತ್ಪತ್ತಿಯನ್ನು ಹೊಂದುತ್ತವೆ. ಅಂತಹ ಅನ್ನವು ಮೇಘಚಕ್ರಾಭಿಮಾನಿಯಾಗಿದ್ದು ಪರ್ಜನ್ಯನೆಂದು ಪ್ರಸಿದ್ಧನಾದ ಆದಿತ್ಯನಿಂದ ವೃಷ್ಟಿಯ ಮೂಲಕ ಉಂಟಾಗುತ್ತದೆ. ಅಂತಹ ಆದಿತ್ಯನು ಯಜ್ಞದಿಂದಾಗುವನು. ಎಂದರೆ ಯಜ್ಞದಲ್ಲಿ ನಾವು ಕೊಡತಕ್ಕ ಆಜ್ಯಾದಿ ಹವಿಸ್ಸಿನಿಂದ ಆದಿತ್ಯನಿಗೆ ಶಕ್ತಿಯು ಬರುವುದರಿಂದ ಆದಿತ್ಯನಿಗೆ ಯಜ್ಞದಿಂದ ಉತ್ಪತ್ತಿಯನ್ನು ಹೇಳಿದುದಾಗಿರುತ್ತದೆ. ಅಂತಹ ಯಜ್ಞವು ಕ್ರಿಯೆಗಳಿಂದ ಉಂಟಾಗುತ್ತದೆ. ಆ ಕ್ರಿಯೆಯು ಪರಬ್ರಹ್ಮನಿಂದಾಗುವು

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥೧೫॥**

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥**

---

ದೆಂದು ತಿಳಿ. ಅಂತಹ ಪರಬ್ರಹ್ಮನು ನಾಶವಿಲ್ಲದ ಕಾರಣ ಅಕ್ಷರನೆಂದು ಪ್ರಸಿದ್ಧವಾದ ವೇದದಿಂದ ಪ್ರತಿಪಾದಿತನಾಗುತ್ತಾನೆ. ಪರಬ್ರಹ್ಮನ ವಿಷಯದಲ್ಲಿ ವೇದವೇ ನಮಗೆ ಮುಖ್ಯಪ್ರಮಾಣವು. ಆದಕಾರಣ ವೇದದಲ್ಲಿ ಹೇಳಿದ ರೀತಿಯಿಂದ ಪರಬ್ರಹ್ಮನನ್ನು ತಿಳಿದುಕೊಂಡರೇನೇ ಆ ಪರಬ್ರಹ್ಮನು ಪ್ರಸನ್ನನಾಗಿ ನಿಮ್ಮಿಂದ ಶುಭಕರ್ಮಗಳನ್ನು ಮಾಡಿಸುತ್ತಾನೆ. ಆದುದರಿಂದಲೇ ಬ್ರಹ್ಮನು ಅಕ್ಷರಸಮುದ್ಭವನೆಂದು ಹೇಳಿದ್ದು. ಅಂತಹ ಅಕ್ಷರಪದವಾಚ್ಯವಾದ ವೇದವು ಪ್ರಾಣಿಗಳಿಂದ ವ್ಯಕ್ತವಾಗುತ್ತದೆಂದು ಚಕ್ರತಾಸಂಪತ್ತಿಗೋಸ್ಕರ ತಿಳಿಯತಕ್ಕದ್ದು. ಹೀಗೆ ಸಕಲವೂ ಒಂದಕ್ಕೊಂದು ಸಂಬಂಧವಿದ್ದು ಒಟ್ಟಿಗೆ ಸೇರಿಕೊಂಡಿರುವಕಾರಣ ಇದನ್ನು ಜಗಚ್ಚಕ್ರವೆಂದು ಹೇಳುತ್ತೇವೆ. ಹಿಂದೆ ಹೇಳಿದಂತೆ ಪರಬ್ರಹ್ಮನು ಯಜ್ಞದಿಂದ ಪರಂಪರೆಯಾಗಿ ಪ್ರಕಟವಾಗುವುದರಿಂದ ಬ್ರಹ್ಮನು ಸರ್ವಗತನಾದರೂ ನಿತ್ಯದಲ್ಲಿಯೂ ಯಜ್ಞಪ್ರತಿಷ್ಠಿತನೆಂದೆನ್ನಿಸಿಕೊಳ್ಳುವನು. ಎಲೈ ಅರ್ಜುನನೆ! ಹೀಗೆ ಈಶ್ವರನಿಂದ ಪ್ರವರ್ತಿತವಾದ ಚಕ್ರವನ್ನು ಯಾರು ನಡೆಸುವುದಿಲ್ಲವೋ, ಎಂದರೆ ಯಜ್ಞಾದಿ ಕರ್ಮವನ್ನು ಮಾಡುವುದಿಲ್ಲವೋ, ಅಂತಹ ಇಂದ್ರಿಯವಿಷಯಗಳಲ್ಲಿಯೇ ಆಸಕ್ತನಾದವನು ಪಾಪಜನಕವಾದ ಆಯುಸ್ಸುಳ್ಳವನು; ಮಾತ್ರವಲ್ಲ, ಅವನ ಜೀವನವೇ ವ್ಯರ್ಥವು. ಹಿಂದೆ ಹೇಳಿದ ರೀತಿಯಿಂದ ಕರ್ಮಮಾಡುವಿಕೆ ಮತ್ತು ಬಿಡುವಿಕೆಗಳಿಗೆ ಲಾಭ ಮತ್ತು ಹಾನಿಗಳಿರುವುದಾದರೆ ಅಸಂಪ್ರಜ್ಞಾತ ಸಮಾಧಿಯನ್ನು ಮಾಡಬಾರದಾಗಿಬಂದಿತು. ಏಕೆಂದರೆ, ಆ ಕಾಲದಲ್ಲಿ ನಿಯತವಾಗಿ ಕರ್ಮಲೋಪವು ಉಂಟಾಗುತ್ತದೆಂಬ ಶಂಕೆಯನ್ನು ಉತ್ತರಶ್ಲೋಕದಲ್ಲಿ ಪರಿಹರಿಸುತ್ತಾನೆ.

॥ ೧೪, ೧೫, ೧೬ ॥

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥
ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥

---

ಯಾವ ಅಪರೋಕ್ಷಜ್ಞಾನಿಯು ಆತ್ಮರತಿಯಾಗಿರುವನೋ, ಪರಮಾತ್ಮಸಾಕ್ಷಾತ್ಕಾರದಿಂದುಂಟಾದ ಸುಖವುಳ್ಳವನೋ, ಆತನಿಗೆ ಅನ್ಯದರ್ಶನಸುಖ ಇರಬಾರದು. ಇದು ಏವಕಾರಸೂಚಿತವಾದುದು. ಆತ್ಮರತಿಯು ಕಾದಾಚಿತ್ಕವಲ್ಲ. ಸರ್ವಾತ್ಮನಾ ಇರಬೇಕೆಂಬುದನ್ನು 'ಆತ್ಮ ತೃಪ್ತ' ಎಂಬ ಪದವು ಹೇಳುತ್ತದೆ. ದೇವರ ಸಾಕ್ಷಾತ್ಕಾರದಿಂದ ಮಹಾಸುಖ ಪ್ರಾಪ್ತವಾದುದರಿಂದ ಇತರ ವಿಷಯಗಳಲ್ಲಿ ಅಲಂಬುದ್ಧಿಯುಳ್ಳವನೆಂದು ಅದರ ಅರ್ಥವು. ಇದಕ್ಕೆ ಹೇತುವೇನೆಂದರೆ ಶ್ರೀಪರಮಾತ್ಮನಲ್ಲಿಯೇ ಅವನ ಅನುಗ್ರಹದಿಂದಲೇ ಮಹಾಸುಖವುಳ್ಳವನು. ಆದಕಾರಣ ಅಂತಹ ಅಪರೋಕ್ಷಜ್ಞಾನಿಗೆ ಸಂಧ್ಯಾವಂದನಾದಿ ಕರ್ಮಗಳೂ ನಿಯಮದಿಂದ ಕರ್ತವ್ಯವಾಗಿಲ್ಲ. ಯಾರಾದರೂ ಒಂದು ಕಾರ್ಯದಲ್ಲಿ ನಿರತರಾದಾಗ ನಡುವೆ ನಿತ್ಯಕರ್ತವ್ಯಕರ್ಮಕಾಲವು ಪ್ರಾಪ್ತವಾದರೆ ನನ್ನನ್ನು ಬೋಧಿಸೆಂದು ಇನ್ನೊಬ್ಬನಿಗೆ ತಿಳಿಸುವಂತೆ ಸಂಧ್ಯಾವಂದನಾದಿಗಳ ಕಾಲವು ಬಂದಾಗ ಎಚ್ಚರಮಾಡುವಂತೆ ತಿಳಿಸಿ, ಏಕೆ ಸಮಾಧಿಯನ್ನಾರಂಭಿಸಬಾರದೆಂಬ ಶಂಕೆಗೆ ಉತ್ತರವನ್ನು ಉತ್ತರಶ್ಲೋಕದಲ್ಲಿ ಹೇಳುತ್ತಾನೆ. ॥ ೧೭ ॥

ಸಮಾಧಿಸ್ಥನಾದ ಅಪರೋಕ್ಷಜ್ಞಾನಿಗೆ ಯಜ್ಞಾದಿಗಳನ್ನು ಮಾಡಿದುದರಿಂದ ಹಿಂದೆ ಹೇಳಿದ ಸುಖಕ್ಕೆ ಸಮಾನವಾದ ಪುರುಷಾರ್ಥವು ಬೇರೆ ಇರುವುದಿಲ್ಲ. ಸಂಧ್ಯಾವಂದನಾದಿ ನಿತ್ಯಕರ್ಮವನ್ನು ಮಾಡದಿದ್ದರೆ ಯಾವ ದೋಷವೂ ಇರುವುದಿಲ್ಲ. ಇದಲ್ಲದೆ ಸಕಲ ಪ್ರಾಣಿಗಳಲ್ಲಿ ಎಂದರೆ ಗುರುಮೊದಲಾದವರೊಡನೆ ಶ್ರೇಯಃಸಾಧಕವಾದ ಸಂಭಾಷಣ, ಅವರ ಪೂಜನಾದಿ ವ್ಯಾಪಾರವೂ ಕರ್ತವ್ಯವಾಗಿ ಇಲ್ಲ. ಎಂದರೆ ಅದರಿಂದಾಗುವ ಲಾಭವೂ ಕೂಡ ಪರಮಾತ್ಮನ ದರ್ಶನಸುಖಕ್ಕೆ ಸಮಾನವಾದುದಲ್ಲವೆಂದು ಅಭಿಪ್ರಾಯವು. ॥ ೧೮ ॥

ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥
ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।
ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦ ॥
ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥
ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥

---

ಅಸಂಪ್ರಜ್ಞಾತಸಮಾಧಿ ಇಲ್ಲದಿರುವವನು ಕರ್ಮವನ್ನು ಅವಶ್ಯ ಮಾಡ ಬೇಕಾದುದರಿಂದ ಫಲೇಚ್ಛೆಯಿಲ್ಲದವನಾಗಿ ಕರ್ತವ್ಯಕರ್ಮವನ್ನು ಮಾಡು. ಏಕೆಂದರೆ ಫಲೇಚ್ಛೆಯಿಲ್ಲದವನಾಗಿ ಕರ್ಮವನ್ನು ಮಾಡುವ ಮನುಷ್ಯನೇ ಅಂತಃಕರಣಶುದ್ಧಿದ್ವಾರಾ ಪರಮಾತ್ಮನನ್ನು ಹೊಂದುತ್ತಾನೆ. ॥ ೧೯ ॥

ಜ್ಞಾನದಿಂದಲೇ ಮೋಕ್ಷವು ಲಬ್ಧವಾಗುವಾಗ ಕರ್ಮವನ್ನೇಕೆ ಮಾಡಬೇಕೆಂಬ ಸಂಶಯವನ್ನು ಪರಿಹರಿಸುವನು. ಜನಕ–ಪ್ರಿಯವ್ರತಾದಿ ಜ್ಞಾನಿಗಳೂ ಕೂಡ ಕರ್ಮವನ್ನು ಬಿಡದೇನೇ ಮೋಕ್ಷದಲ್ಲಿ ಆನಂದಾತಿಶಯ ವನ್ನು ಹೊಂದಿದ್ದಾರೆ. ಜ್ಞಾನಿಗಳ ಆಚಾರವಿರುವುದರಿಂದ ಮಾತ್ರವೇ ಕರ್ಮವನ್ನು ಮಾಡಬೇಕೆಂದಲ್ಲ; ಲೋಕಸಂಗ್ರಹಾರ್ಥವಾಗಿಯೂ ನೀನು ಕರ್ಮವನ್ನು ಮಾಡಬೇಕು. ದೊಡ್ಡವರು ಮಾಡಿದಂತೆ ಅಜ್ಞರು ಮಾಡು ವುದು ಲೋಕಪ್ರಸಿದ್ಧವು. ಅಜ್ಞರಿಗೆ ಕರ್ಮದಲ್ಲಿ ಪ್ರವೃತ್ತಿರೂಪವಾದ ಲೋಕಸಂಗ್ರಹವು ಈಶ್ವರನ ಪ್ರೀತಿಗೆ ಕಾರಣವಾದ ಪ್ರಯುಕ್ತ ಹಾಗೆ ತಿಳಿದುಕೊಂಡಾದರೂ ನೀನು ಕರ್ಮವನ್ನು ಮಾಡು. ॥ ೨೦ ॥

ಇದನ್ನೇ ವಿಸ್ತಾರವಾಗಿ ಈ ಶ್ಲೋಕದಲ್ಲಿ ವಿವರಿಸುತ್ತಾನೆ. ಉತ್ತಮರು ಪ್ರಮಾಣಸಿದ್ಧವಾದ ವೈದಿಕ-ಲೌಕಿಕ ಯಾವ ಯಾವ ಕರ್ಮಗಳನ್ನು ಮಾಡುತ್ತಾರೋ, ಅಜ್ಞರು ಅದನ್ನು ಅನುಸರಿಸುತ್ತಾರೆ. ॥ ೨೧ ॥

ಎಲೈ ಕುಂತೀತನಯನೆ! ನನ್ನನ್ನು ನೋಡು. ನನಗೆ ಕರ್ತವ್ಯ ವಾದುದು ಯಾವುದೂ ಇಲ್ಲ. ಏಕೆಂದರೆ ಮೂರು ಲೋಕಗಳಲ್ಲಿ ನನಗೆ

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩ ॥**
**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪ ॥**
**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾ ಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ೨೫**

---

ಸಿಗದಿರುವುದು ಕರ್ಮದಿಂದ ಹೊಂದತಕ್ಕದ್ದು ಇಲ್ಲ. ಹೀಗಿದ್ದರೂ ನಾನು ಕರ್ಮದಲ್ಲಿದ್ದೇನೆ; ಕರ್ಮಮಾಡುತ್ತಿದ್ದೇನೆ. ॥ ೨೨ ॥

ಎಲೈ ಪಾರ್ಥನೆ! ನಾನು ಆಲಸ್ಯವನ್ನು ಬಿಟ್ಟು ಯಾವಾಗಲೂ ಕರ್ಮವನ್ನು ಮಾಡಿಕೊಂಡಿರದಿದ್ದರೆ, ಕರ್ಮವನ್ನು ಯಾವಾಗಲೂ ಬಿಟ್ಟು ಬಿಟ್ಟರೆ ಸರ್ವರೂ ಕೂಡ ನನ್ನ ಮಾರ್ಗವನ್ನು ಅನುಸರಿಸುತ್ತಾರೆ ನನ್ನನ್ನು ದೃಷ್ಟಾಂತವಾಗಿಟ್ಟುಕೊಂಡು ಅವರೂ ಕರ್ಮವನ್ನು ಮಾಡಲಿಕ್ಕಿಲ್ಲ. ॥೨೩॥

ನಾನು ಕರ್ಮವನ್ನು ಮಾಡದಿದ್ದರೆ ಈ ಎಲ್ಲಾ ಜನರು ನಾಶವನ್ನು ಹೊಂದಬಹುದು, ನರಕಾದಿಗಳನ್ನು ಹೊಂದಿಯಾರು. ಮಾತ್ರವಲ್ಲ. ಆಯಾ ಜಾತಿಗಳಿಗೆ ವಿಹಿತವಾದ ಕರ್ಮವನ್ನು ಮಾಡದಿದ್ದ ಪ್ರಯುಕ್ತ ವರ್ಣಸಾಂಕರ್ಯವನ್ನು ತಂದವನಾಗುವೆನು. ಅದರಿಂದ ಸಕಲ ಪ್ರಜೆಗಳನ್ನೂ ನಾನೇ ಸಂಹರಿಸಿದಂತಾದೇನು. ಎಲೈ ಭರತಕುಲೋತ್ತಮನೇ! ಅಜ್ಞರು ಹೇಗೆ ಕರ್ಮದಲ್ಲಿ ಸಕ್ತರಾಗಿ (ಫಲೇಚ್ಛುಗಳಾಗಿ) ಕರ್ಮಮಾಡುವರೋ, ಹಾಗೆಯೇ ಜ್ಞಾನಿಯೂ ಕೂಡಾ ಲೋಕಸಂಗ್ರಹಮಾಡಲಪೇಕ್ಷಿಸುವವನು ಫಲೇಚ್ಛೆಯಿಲ್ಲದವನಾಗಿ ಕರ್ಮವನ್ನು ಮಾಡತಕ್ಕದು. ॥ ೨೪ ॥

ಅಜ್ಞರಿಗೆ ಎಂದರೆ ಪರಮಾತ್ಮಜ್ಞಾನಶೂನ್ಯರಿಗೆ ಕರ್ಮದಲ್ಲಿ ವಿಶ್ವಾಸವನ್ನು ಹುಟ್ಟಿಸುವ ಉದ್ದಿಶ್ಯವಾದರೂ ಜ್ಞಾನಿಗಳು ಕರ್ಮವನ್ನು ಮಾಡಬೇಕೆಂದು ಇಲ್ಲಿ ಹೇಳಲ್ಪಡುತ್ತದೆ. ಜ್ಞಾನಿಯಾದವನು ಕರ್ಮದಲ್ಲಿ ಆಸಕ್ತಿಯುಳ್ಳ ಅಜ್ಞರ ಬುದ್ಧಿಗೆ ಭೇದವನ್ನು ತಂದುಕೊಡಬಾರದು. ಎಂದರೆ ಕರ್ಮಾನುಷ್ಠಾನ ವಿಷಯದಲ್ಲಿ ಅವರ ಬುದ್ಧಿವಿಪರ್ಯಾಸವನ್ನು ಮಾಡಬಾರದು. ಆದರೆ ಜ್ಞಾನಿಯಾದವನು ಪರಮಾತ್ಮನಲ್ಲಿ ಮನೋಯೋಗ

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಸ್ಸಮಾಚರನ್ ॥೨೬॥**
**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ ॥ ೨೭ ॥**
**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥ ೨೮ ॥**

---

ಯುಕ್ತನಾಗಿಕೊಂಡು, ಪರಮಾತ್ಮನ ಪೂಜೆಯೆಂದು ತಾನು ಕರ್ಮಗಳನ್ನು ಆಚರಿಸುವವನಾಗಿ ಸರ್ವ ಕರ್ಮಗಳನ್ನೂ ಅಜ್ಞರು ಆಚರಿಸುವಂತೆ ಮಾಡ ತಕ್ಕದು. ಜ್ಞಾನಿ ಮತ್ತು ಅಜ್ಞಾನಿಗಳು ಕರ್ಮಮಾಡುವ ವಿಷಯದಲ್ಲಿ ಭೇದವನ್ನು ಇನ್ನು ಮೇಲಿನ ಮೂರು ಶ್ಲೋಕಗಳಲ್ಲಿ ಹೇಳುತ್ತಾನೆ.॥೨೫,೨೬॥

ಪ್ರಕೃಷ್ಟಕೃತಿ (ಯತ್ನ) ಉಳ್ಳವನಾದುದರಿಂದ ಪ್ರಕೃತಿಶಬ್ದವಾಚ್ಯ ನಾದ ಪರಮಾತ್ಮನ ಜ್ಞಾನೇಚ್ಛಾದಿ ಗುಣಗಳಿಂದಲೂ, ಜಡಪ್ರಕೃತಿಯ ಸಂಬಂಧಿಗಳಾದ ಸತ್ತ್ವರಜಸ್ತಮೋಗುಣಗಳಿಂದಲೂ ಮತ್ತು ಜೀವರ ಸ್ವಭಾವಭೂತವಾದ ಸಮ್ಯಗ್‌ಜ್ಞಾನ, ಮಿಶ್ರಜ್ಞಾನ, ಮಿಥ್ಯಾಜ್ಞಾನಾದಿ ರೂಪ ಗುಣಗಳಿಂದಲೂ ಮಾಡಲ್ಪಡುವ ಸರ್ವ ಕಾರ್ಯಗಳನ್ನು ಕರ್ತೃತ್ವಾ ಭಿಮಾನದಿಂದ ಮೂಢನಾದ ಜೀವನು ತಾನೇ ಮಾಡುವವನೆಂದು ತಿಳಿದು ಕೊಳ್ಳುತ್ತಾನೆ. ಎಂದರೆ ಈಶ್ವರನು ಸ್ವತಂತ್ರನಾಗಿ ಸ್ವೇಚ್ಛೆಯಿಂದ ಜೀವರ ಸ್ವಭಾವವನ್ನನುಸರಿಸಿಕೊಂಡು ಪ್ರಕೃತಿಕಾರ್ಯವಾದ ಗುಣಾದಿಸಾಧನ ಗಳಿಂದ ತ್ರಿವಿಧಜೀವರಿಂದ ಕರ್ಮವನ್ನು ಮಾಡಿಸುತ್ತಾನೆ. ಈ ಪ್ರಸಂಗದಲ್ಲಿ ಜೀವನು ಭ್ರಮೆಯಿಂದ ತಾನೇ ಸ್ವತಂತ್ರನೆಂದು ತಿಳಿಯುತ್ತಾನೆ. ॥ ೨೭ ॥

ಹಿಂದೆ ಹೇಳಿದ ರೀತಿಯಿಂದ ಈಶ್ವರನ ಇಚ್ಛಾದಿಗುಣಗಳು, ಪ್ರಕೃತಿ ಕಾರ್ಯ ಸತ್ತ್ವಾದಿ ಗುಣಗಳು ಮತ್ತು ಜೀವಸ್ವಭಾವ ಇವುಗಳ ವಿಭಾಗ ವನ್ನೂ, ಈಶ್ವರನು ಸಕಲ ಕರ್ಮಗಳಿಗೂ ಸ್ವತಂತ್ರಕರ್ತನು, ಜೀವನು ಪರತಂತ್ರಕರ್ತನು ಇತ್ಯಾದಿ ಕರ್ಮವಿಭಾಗಗಳ ಸತ್ಯತ್ವವನ್ನೂ ತಿಳಿದವನಾಗಿ ಈಶ್ವರನ ಇಚ್ಛಾದಿ ಗುಣಗಳು ಜೀವನ ಸ್ವಭಾವ, ಕರ್ಮ ಮತ್ತು ಸತ್ತ್ವಾದಿ

ಪ್ರಕೃತೇರ್ಗುಣಸಮ್ಮೂಢಾಃ ಸಜ್ಜಂತೇ ಗುಣಕರ್ಮಸು ।
ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ೨೯
ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸಾ ।
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥
ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ॥

---

ಗುಣ ಇವುಗಳಲ್ಲಿ ನಿಯಾಮಕಗಳಾಗಿರುವವೆಂದು ತಿಳಿದು ತಾನು ಕರ್ಮದಲ್ಲಿ ಸಕ್ತನಾಗುವುದಿಲ್ಲ, ಎಂದರೆ ತಾನೇ ಸ್ವತಂತ್ರಕರ್ತನೆಂದು ಭ್ರಮಿಸುವುದಿಲ್ಲ. ॥ ೨೮ ॥

ಹಿಂದೆ ಹೇಳಿದಂತೆ ತ್ರಿವಿಧವಾದ ಪ್ರಕೃತಿಗುಣದಲ್ಲಿ ಮುಗ್ಧರಾದ ಅಜ್ಞರು ಗುಣಗಳಲ್ಲಿಯೂ ಕರ್ಮಗಳಲ್ಲಿಯೂ ಸಕ್ತರಾಗುತ್ತಾರೆ. ಎಂದರೆ ರೂಪಾದಿ ಗುಣಗಳಲ್ಲಿ ಸ್ನೇಹವುಳ್ಳವರೂ, ಕರ್ಮಗಳಲ್ಲಿ ಸ್ವಾತಂತ್ರ್ಯಭ್ರಾಂತಿಯುಳ್ಳವರೂ ಆಗುತ್ತಾರೆ. ಅಂತಹ ಸಕಲವನ್ನು ತಿಳಿಯದಿರುವ ಅಜ್ಞರನ್ನು ಹಿಂದೆ ಹೇಳಿದ ಸರ್ವವಿಭಾಗವನ್ನು ತಿಳಿದಿರುವ ಜ್ಞಾನಿಯು ಅಲುಗಾಡಿಸಬಾರದು. ಎಂದರೆ ಸಹಸಾ ಅವರ ಆ ಬುದ್ಧಿಯನ್ನು ಹಾಳುಮಾಡಬಾರದು. ॥ ೨೯ ॥

ನೀನಾದರೂ ಜ್ಞಾನಿಯಾದ ಪ್ರಯುಕ್ತ ಜ್ಞಾನಿಗಳಂತೆ ಸರ್ವಾಧಿಕಚೇತನನಾದ ಈಶ್ವರನಲ್ಲಿ ನೆಟ್ಟ ಮನಸ್ಸಿನಿಂದ ಫಲಾಪೇಕ್ಷೆಯಿಲ್ಲದವನಾಗಿಯೂ, ಸ್ವಾತಂತ್ರ್ಯಾಭಿಮಾನಶೂನ್ಯನಾಗಿಯೂ ನನ್ನಲ್ಲಿಯೇ ಸರ್ವಕರ್ಮಗಳನ್ನು ಬಿಟ್ಟುಬಿಟ್ಟು, ಎಂದರೆ ಸರ್ವ ಕರ್ಮಗಳನ್ನು ಈಶ್ವರನು ಮಾಡಿಸುವನೆಂದು ತಿಳಿದು ಶೋಕರಹಿತನಾಗಿ ಯುದ್ಧವನ್ನು ಮಾಡು. ॥ ೩೦ ॥

ಶ್ರೀಕೃಷ್ಣನು ವಿಶ್ವಾಸವನ್ನು ಹುಟ್ಟಿಸುವ ಉದ್ದಿಶ್ಯ ತಾನು ಹೇಳಿದಂತೆ ಮಾಡುವವರಿಗೂ ಮಾಡಿದವರಿಗೂ ಆಗುವ ಫಲವನ್ನು ಹೇಳುತ್ತಾನೆ. ನನಗೆ ಸಮ್ಮತವಾದ, ನಾನೀ ಹಿಂದೆ ಹೇಳಿದ ಕರ್ಮಾನುಷ್ಠಾನವನ್ನು ಯಾವ ಮನುಷ್ಯರು ನನ್ನ ವಾಕ್ಯದಲ್ಲಿ ವಿಶ್ವಾಸವುಳ್ಳವರಾಗಿಯೂ, ಕಷ್ಟದಲ್ಲಿ ಪ್ರೇರಿಸು

ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥ ೩೨ ॥
ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।
ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥
ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।
ತಯೋರ್ನ ವಶಮಾಗಚ್ಛೇತ್ ತೌ ಹ್ಯಸ್ಯ ಪರಿಪಂಥಿನೌ ॥ ೩೪ ॥

---

ವನೆಂದು ಭಾವಿಸದೆಯೂ ಮಾಡುವರೋ, ಅಂತಹರು ನಿವೃತ್ತಕರ್ಮಗಳಿಂದ ಜ್ಞಾನದ್ವಾರಾ ಮುಕ್ತಿಯನ್ನು ಹೊಂದುವರು. ॥ ೩೧ ॥

ಯಾರು ಇದು ಬಹಳ ಕಷ್ಟಸಾಧ್ಯವೆಂದು ದೋಷದೃಷ್ಟಿಯುಳ್ಳವರಾಗಿ ಮಾಡುವುದಿಲ್ಲವೋ, ಅಂತಹ ವಿವೇಕಶೂನ್ಯರಾದ, ಅತ ಏವಜ್ಞಾತವ್ಯ ವಿಷಯದಲ್ಲಿ ಮೂಢರಾದ ಜನರನ್ನು ನಷ್ಟರನ್ನಾಗಿ ಎಂದರೆ ನರಕಾದ್ಯನರ್ಥಭಾಗಿಗಳನ್ನಾಗಿ ತಿಳಿ. ॥ ೩೨ ॥

ಹೀಗಾದರೆ ನೀನು ಹೇಳಿದ ರೀತಿಯಿಂದ ಏಕೆ ಎಲ್ಲರೂ ಮಾಡುವುದಿಲ್ಲವೆಂಬ ಶಂಕೆಗೆ ಉತ್ತರವನ್ನು ಕೊಡುತ್ತಾನೆ. ನಾನು ಹೇಳಿದಂತೆ ಮಾಡಿದರೆ ಮತ್ತು ಮಾಡದಿದ್ದರೆ ಆಗುವ ಫಲವಿಶೇಷವನ್ನು ಮನುಜನು ತಿಳಿದುಕೊಂಡವನಾದರೂ, ತನ್ನ ಪ್ರಕೃತಿಗೆ ಅನುಸಾರವಾಗಿ ಆಚರಿಸುತ್ತಾನೆ ಎಲ್ಲಾ ಪ್ರಾಣಿಗಳೂ ಸ್ವಭಾವವನ್ನೇ ಹೊಂದಿಕೊಂಡಿರುತ್ತವೆ; ಅಲ್ಲದೆ ಅವರನ್ನು ಮನೋನಿಗ್ರಹವು ಏನುಮಾಡುತ್ತದೆ? ಎಂದರೆ ತಿಳಿದರೂ ತಿಳಿದಂತೆ ಮಾಡಲು ಆಗುವುದಿಲ್ಲ. ಹಾಗಾದರೆ ನಿನ್ನ ಉಪದೇಶವು ವ್ಯರ್ಥವೆಂಬ ಆಕ್ಷೇಪದಿಂದ ಮೇಲಿನ ಶ್ಲೋಕದಲ್ಲಿ ಪರಿಹರಿಸುತ್ತಾನೆ. ॥ ೩೩ ॥

ಚಕ್ಷುರಾದಿ ಇಂದ್ರಿಯಗಳಿಗೆ ವಿಷಯಗಳಾದ ರೂಪಾದಿಗಳಲ್ಲಿ ಅನುಕೂಲದಲ್ಲಿ ರಾಗವೂ ಪ್ರತಿಕೂಲದಲ್ಲಿ ದ್ವೇಷವೂ ನಿಯತವು. ಅದಕ್ಕನುಸಾರವಾಗಿ ಪ್ರಾಣಿಗಳ ಚೇಷ್ಟೆಯೂ ಆಗುತ್ತದೆ. ಯದ್ಯಪಿ ಹೀಗಿದ್ದರೂ ತಿಳಿದ ಮನುಷ್ಯನು ಈ ರಾಗದ್ವೇಷಗಳ ಅಧೀನನಾಗಬಾರದು. ಏಕೆಂದರೆ ಶ್ರೇಯೋಭಿಲಾಷಿಯಾದ ಮನುಷ್ಯನ ಶ್ರೇಯಸ್ಸಿಗೆ ಆ ರಾಗದ್ವೇಷಗಳು ವಿಘಾತಕಗಳು, ಮಾತ್ರವಲ್ಲದೆ ಪಾಪಹೇತುಗಳೂ ಆಗಿವೆ. ಇಂದ್ರಿಯನಿಗ್ರಹದಿಂದ

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥**

**॥ ಅರ್ಜುನ ಉವಾಚ ॥**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

---

ಸದ್ಯಃ ಫಲವು ದೊರೆಯದಿದ್ದರೂ ಅದರಲ್ಲಿ ಪ್ರಯತ್ನಶೀಲನಾದ ಮನುಷ್ಯನಿಗೆ ಸಂಸ್ಕಾರವಶಾತ್ ಕೊನೆಗೆ ಫಲವು ಸಂಭವಿಸುತ್ತದೆಂದು ತಾತ್ಪರ್ಯವು. ಈ ಅಧ್ಯಾಯದ ಆದಿಯಲ್ಲಿ ಕರ್ಮವನ್ನು ಮಾಡಬಾರದು. ಅದರಲ್ಲಿಯೂ ಈ ಘೋರ ಯುದ್ಧವು ಸರ್ವಥಾ ಮಾಡತಕ್ಕದ್ದಲ್ಲವೆಂದು 'ಜ್ಯಾಯಸೀ ಚೇತ್ ಕರ್ಮಣಸ್ತೇ' ಎಂಬ ಶ್ಲೋಕದ ಎರಡು ಪ್ರಶ್ನೆಗಳಲ್ಲಿ ಒಂದನೆಯದಕ್ಕೆ ಉತ್ತರವನ್ನು ಕೊಟ್ಟು, ಈಗ ಎರಡನೆಯದಕ್ಕೆ ಉತ್ತರವನ್ನು ಕೊಡುತ್ತಾನೆ. ॥ ೩೪ ॥

ಸ್ವವರ್ಣಾಶ್ರಮೋಚಿತವಾದ ಧರ್ಮವು ಅಂಗವಿಕಲವಾದರೂ ಸರ್ವಾಂಗಸಹಿತವಾಗಿ ಮಾಡಲ್ಪಟ್ಟ ಅನ್ಯ ವರ್ಣಾಶ್ರಮಕರ್ಮಕ್ಕಿಂತ ಶ್ರೇಷ್ಠವಾದುದು. ಸ್ವಾಶ್ರಮೋಚಿತ ಧರ್ಮದಲ್ಲಿ ಮರಣವು ಪ್ರಾಪ್ತವಾದರೂ ಶ್ರೇಷ್ಠವೇ. ವರ್ಣಾಂತರ-ಆಶ್ರಮಾಂತರ ಧರ್ಮವು ನಿಷಿದ್ಧವಾದ ಪ್ರಯುಕ್ತ ಭಯಕಾರಿಯೂ ಅನರ್ಥಹೇತುವು. ॥ ೩೫ ॥

ಬಲವತ್ಪ್ರಯತ್ನದಿಂದ ಕಾಮಾದ್ಯರಿಗಳನ್ನು ಜಯಿಸಬಹುದೆಂದು 'ತಯೋರ್ನ ವಶಮಾಗಚ್ಛೇತ್' ಎಂಬಲ್ಲಿ ಹೇಳಿದ ಪ್ರಯುಕ್ತ ಆ ಪಾಪಹೇತುಗಳಾದ ಅರಿಗಳಲ್ಲಿ ಪ್ರಬಲನಾದ ಶತ್ರುವು ಯಾರು? ಅವನನ್ನು ನಾನು ಮಹಾಪ್ರಯತ್ನದಿಂದ ಮೊದಲು ಜಯಿಸುತ್ತೇನೆಂಬ ಅಭಿಪ್ರಾಯದಿಂದ ಅರ್ಜುನನು ಹೇಳುತ್ತಾನೆ. ಎಲೈ ವೃಷ್ಣಿಕುಲೋತ್ಪನ್ನನಾದ ಕೃಷ್ಣನೆ! ಈ ಪುರುಷನು ಪಾಪಾಚರಣೆಯನ್ನು ಇಚ್ಛಿಸದಿದ್ದರೂ ಬಲಾತ್ಕಾರದಿಂದ ಇತರ ಪ್ರೇರಿತನಂತೆ ಪಾಪವನ್ನು ಮಾಡುತ್ತಾನಷ್ಟೆ! ಅಂತಹ ಪ್ರೇರಕರು ಯಾರು? ಯಾವ ಬಲವಂತನಾದ ವೈರಿಯಿಂದ ಇವನು ಪ್ರೇರಿತನಾಗುವನು? ಎಂದು ಕೇಳಲು ಶ್ರೀಕೃಷ್ಣನು ಉತ್ತರಕೊಡುವನು. ॥ ೩೬ ॥

॥ ಶ್ರೀಭಗವಾನುವಾಚ ॥

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥ ೩೭ ॥**

**ಧೂಮೇನಾಽಽವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ ।**
**ಯಥೋಲ್ಬೇನಾಽಽವೃತೋ ಗರ್ಭಸ್ತಥಾ ತೇನೇದಮಾವೃತಮ್ ॥**

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ॥ ೩೯ ॥**

---

ನಿನ್ನ ಪ್ರಶ್ನೆಗೆ ವಿಷಯನಾದ ಪಾಪಕರ್ಮಪ್ರೇರಕನಾದ ವೈರಿಯು ಕಾಮವು. ಕಾಮದಿಂದ ಕ್ರೋಧವು ಹುಟ್ಟುವ ಪ್ರಯುಕ್ತ ಕಾರ್ಯಕಾರಣಗಳಿಗೆ ಅಭೇದ ವ್ಯವಹಾರವು ಲೋಕಸಿದ್ಧವಾದುದರಿಂದ ಕಾಮಕ್ಕೆ ಕ್ರೋಧವೆಂದು ನಿರ್ದೇಶವು. ಇದನ್ನೇ ವಿವರಿಸುವನು. ಕಾಮನಿಮಿತ್ತಕವಾದ ರಜೋಗುಣವಿಕಾರವೇ ಕ್ರೋಧವು ಎಂದು. ಮಹಾಪ್ರಯತ್ನದಿಂದ ಈ ಕಾಮಜಯವನ್ನು ಹೊಂದಬೇಕೆಂಬ ಅಭಿಪ್ರಾಯದಿಂದ ಕಾಮನನ್ನು ಬಿಡಿಸಿ ನಿರೂಪಿಸುತ್ತಾನೆ. ಈ ಕಾಮವು ಮಹತ್ತಾದ ಭೋಗ್ಯವು, ಎಂದರೆ ವಿಷಯವುಳ್ಳದ್ದು. ಬ್ರಹ್ಮಹತ್ಯಾದಿ ಮಹಾ ಪಾಪಕಾರಣವೂ ಆಗಿದೆ. ಹೀಗೆ ಅಶುಭಕ್ಕೆ ಪ್ರೇರಕವಾಗಿ ಮೋಕ್ಷವಿರೋಧಿಯಾದ ಪ್ರಯುಕ್ತ ಈ ಕಾಮವನ್ನು ವೈರಿಯೆಂದು ತಿಳಿ ॥ ೩೭ ॥

ಹೇಗೆ ಅಗ್ನಿಯು ಧೂಮದಿಂದ ಅಲ್ಪವಾಗಿ ಆವೃತವಾಗುತ್ತದೋ, ಹಾಗೆಯೇ ಉತ್ತಮ ಜೀವರಾಶಿಯು ಈ ಕಾಮದಿಂದ ಕಿಂಚಿದಾವೃತವಾಗುತ್ತದೆ. ದರ್ಪಣಾದಿಗಳು ಮಲದಿಂದ ಹೇಗೆ ಅಧಿಕವಾಗಿ ಆವೃತವಾಗುತ್ತವೋ, ಹಾಗೆಯೇ ಮಧ್ಯಮಜೀವಸಮೂಹವು ಈ ಕಾಮದಿಂದ ಅಧಿಕವಾಗಿ ಆವೃತವಾಗುತ್ತದೆ. ಗರ್ಭವು ಚೀಲದಂತಿರುವ ಗರ್ಭವೇಷ್ಟನ ಚರ್ಮದಿಂದ ಹೇಗೆ ಆತ್ಯಧಿಕ ಸರ್ವಾತ್ಮನಾ ಆವೃತವಾಗಿದೆಯೋ ಅಂತೆಯೇ ಅಧಮ ಜೀವಸಮುದಾಯವು ಸರ್ವಾತ್ಮನಾ ಆವೃತವಾಗಿರುವುದು. ತ್ರಿವಿಧ ಜೀವರಿಗೂ ಜ್ಞಾನವಿರೋಧಿಯಾದುದು ಕಾಮವೆಂದರ್ಥವು. ॥ ೩೮ ॥

ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦ ॥

ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।
ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥ ೪೧ ॥

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥

---

ಹಿಂದಿನ ಶ್ಲೋಕದಲ್ಲಿ ಜ್ಞಾನವು ಹುಟ್ಟಲಿಕ್ಕೆ ಕಾಮವು ಬಿಡುವುದಿಲ್ಲವೆಂದು ಹೇಳಿ, ಶಾಸ್ತ್ರದಿಂದ ಜ್ಞಾನವು ಹುಟ್ಟಿದರೂ ಈ ಕಾಮವು ಫಲಿಸಲಿಕ್ಕೆ ಬಿಡುವುದಿಲ್ಲವೆಂದು ಹೇಳುತ್ತಾನೆ. ಕೌಂತೇಯನೇ! ಶಾಸ್ತ್ರೋತ್ಪನ್ನವಾದ ಪುರುಷನ ಜ್ಞಾನವು ನಿತ್ಯದಲ್ಲಿಯೂ ವೈರಿಯಾದ ಈ ಕಾಮದಿಂದ ಆವೃತವಾಗಿದೆ, ಎಂದರೆ ಫಲಪ್ರದವಾಗುವುದಿಲ್ಲ. ಈ ಕಾಮವು ಎಂತಹುದೆಂದರೆ 'ದುಷ್ಪೂರ' ಎಂದರೆ ದುಃಖದಿಂದ ತುಂಬಿಸಿಕೊಳ್ಳಲ್ಪಡುವ ವಿಷಯವುಳ್ಳದ್ದು; ಅದಕ್ಕೆ ಬೇಕಾದಷ್ಟು ವಿಷಯಗಳನ್ನು ಕೊಡುವುದೇ ಕಷ್ಟವು. ಹೇಗಾದರೂ ಕಷ್ಟದಿಂದ ವಿಷಯಗಳನ್ನು ಕೊಡುತ್ತಾ ಹೋದರೂ ಅದು ಅನಲವು, ಎಂದರೆ ಅಲಂಬುದ್ಧಿಯಿಲ್ಲದುದು ಎಷ್ಟು ಭೋಗಿಸಿದರೂ ತೃಪ್ತಿಯಿಲ್ಲ. ॥ ೩೯ ॥

ಇಂತಹ ಬಲವತ್ತಾದ ಕಾಮವನ್ನು ಜಯಿಸುವ ನಿಮಿತ್ತವಾಗಿ ಆಶ್ರಯವಾದ ಸ್ಥಾನವನ್ನು ನಿರೂಪಿಸುತ್ತಾನೆ. ಈ ಕಾಮಕ್ಕೆ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಯು ಅಧಿಷ್ಠಾನವು. ಇದು ಹೇಗೆ ಆಶ್ರಯವೆಂದರೆ, ಈ ಇಂದ್ರಿಯಾದಿಗಳಿಂದ ಕಾಮವು ಜ್ಞಾನವನ್ನು ಪ್ರತಿಬಂಧಿಸಿ ಜೀವನನ್ನು ಮೋಹವುಳ್ಳವನನ್ನಾಗಿ ಮಾಡುತ್ತದೆ. ॥ ೪೦ ॥

ಭರತಕುಲೋತ್ಪನ್ನನಾದ ಅರ್ಜುನನೇ! ಹೀಗೆ ಇಂದ್ರಿಯಗಳು ಆಶ್ರಯವಾಗಿದ್ದ ಪ್ರಯುಕ್ತ ಇಂದ್ರಿಯಗಳನ್ನೇ ಪ್ರಥಮದಲ್ಲಿ ಜಯಿಸಿ ಜ್ಞಾನವಿಜ್ಞಾನನಾಶಕವಾದ ಈ ಪಾಪಿ ಕಾಮವನ್ನು ಜಯಿಸು. ಶತ್ರುಗಳು ಆಶ್ರಯಭ್ರಷ್ಟರಾದರೆ ಅವರನ್ನು ಜಯಿಸುವುದು ಸುಲಭವಾದುದಷ್ಟೆ! ॥ ೪೧ ॥

ಏವಂ ಬುದ್ಧೇಃ ಪರಂ ಬುಧ್ವಾ ಸಂಸ್ತಭ್ಯಾऽऽತ್ಮಾನಮಾತ್ಮನಾ ।
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥೪೩॥

॥ ಇತಿ ತೃತೀಯೋಧ್ಯಾಯಃ ॥

---

ಕಾಮವೆಂಬ ವೈರಿಯ ಸಂಹಾರದಲ್ಲಿ ಜ್ಞಾನವೇ ಆಯುಧವೆಂದು ಹೇಳುವ ಉದ್ದಿಶ್ಯ ಜ್ಞಾನವಿಷಯವನ್ನು ಹೇಳುತ್ತಾನೆ. ಶರೀರಕ್ಕಿಂತ ಇಂದ್ರಿಯಗಳು, ಉತ್ಕೃಷ್ಟಗಳು. ಇಂದ್ರಿಯಗಳಿಗಿಂತ ಮನಸ್ಸು ಉತ್ತಮವು. ಮನಸ್ಸಿಗಿಂತ ಬುದ್ಧಿಯು ಶ್ರೇಷ್ಠವು. ಬುದ್ಧಿಗಿಂತಲೂ ಯಾವಾತನು ಶ್ರೇಷ್ಠನೋ, ಇಲ್ಲಿ ಕಾಠಕಾದ್ಯುಪನಿಷತ್ತುಗಳಲ್ಲಿ ಹೇಳಿದ ರೀತಿಯಿಂದ ಇಂದ್ರಿಯಾದಿ ಶಬ್ದಗಳಿಂದ ತತ್ತದಭಿಮಾನಿದೇವತೆಗಳನ್ನು ಇಟ್ಟುಕೊಂಡು ತಾರತಮ್ಯದಿಂದ ಇರುವವರಲ್ಲಿ ಕೊನೆಯವನಾದ ಅಂತಹ ಶ್ರೀಪರಮಾತ್ಮನನ್ನು ತಿಳಿದುಕೊಂಡು, ನಿನ್ನ ಬುದ್ಧಿಯಿಂದ ನಿನ್ನ ಮನಸ್ಸನ್ನು ನಿಶ್ಚಲವನ್ನಾಗಿ ಮಾಡಿಕೊಂಡು, ಕಷ್ಟದಿಂದ ನಿವಾರಣೀಯವಾದ ಕಾಮವೆಂಬ ಹೆಸರುಳ್ಳ ಶತ್ರುವನ್ನು ಜಯಿಸು. ॥ ೪೨, ೪೩ ॥

# ಚತುರ್ಥೋಽಧ್ಯಾಯಃ

॥ ಶ್ರೀಭಗವಾನುವಾಚ ॥

ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥
ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।
ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨ ॥
ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।
ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥ ೩ ॥

---

ಹಿಂದೆ ನಿರೂಪಿತವಾದ ನಿವೃತ್ತಕರ್ಮ ಪರಮಾತ್ಮ ಮತ್ತು ಅವನ ಜ್ಞಾನ ಇದರ ನಿರೂಪಣವನ್ನು ವಿಸ್ತಾರವಾಗಿ ಈ ಅಧ್ಯಾಯದಲ್ಲಿ ಮಾಡುತ್ತಾರೆ –

ಹಿಂದೆ ಕರ್ಮಕರಣಾಕರಣಗಳಿಂದ ಇಷ್ಟಾನಿಷ್ಟಗಳನ್ನು ತೋರಿಸಿ ನಿವೃತ್ತಕರ್ಮವು ಅವಶ್ಯವಾಗಿ ಅನುಷ್ಠೇಯವೆಂದು ಹೇಳಿದರೂ ಅದರಲ್ಲಿ ಪುನಃ ಆಸಕ್ತಿಯನ್ನು ಹುಟ್ಟಿಸುವ ಉದ್ದಿಶ್ಯ ಈ ಕರ್ಮವು ಪೂರ್ವಿಕರಿಂದಲೂ ಅನುಷ್ಠಿತವೆಂದು ಹೇಳುತ್ತಾನೆ. ನಾಶರಹಿತವಾದ ಮೋಕ್ಷವೇ ಫಲವಾಗಿ ಉಳ್ಳದ್ದಾದುದರಿಂದ ಅವ್ಯಯವಾದ ಈ ಜ್ಞಾನೋಪಾಯವನ್ನು ನಾನು ಸೂರ್ಯನಿಗೆ ಹೇಳಿದ್ದೆನು. ಸೂರ್ಯನು ತನ್ನ ಪುತ್ರನಾದ ಮನುವಿಗೂ, ಮನುವು ತನ್ನ ಪುತ್ರನಾದ ಇಕ್ಷ್ವಾಕುವಿಗೂ ಹೇಳಿದ್ದಾನೆ. ॥ ೧ ॥

ಶತ್ರುತಾಪಕನಾದ ಅರ್ಜುನನೇ! ಹೀಗೆ ಪರಂಪರಾಪ್ರಾಪ್ತವಾದ ಜ್ಞಾನೋಪಾಯವನ್ನು ರಾಜರೂ ಋಷಿಗಳೂ ತಿಳಿದಿದ್ದರು. ನಮ್ಮಂತೆ ತಿಳಿದು ಬಿಟ್ಟಿಲ್ಲ, ಅನುಷ್ಠಾನವನ್ನು ಮಾಡಿದ್ದರೆಂದರ್ಥವು. ಅಂತಹ ಜ್ಞಾನೋಪಾಯವು ಬಹುಕಾಲ ಸಂದುಹೋದ ಪ್ರಯುಕ್ತ ಕಾಣದಂತಾಗಿದೆ. ॥ ೨ ॥

ಅದೇ ಪುರಾತನವಾದ ಜ್ಞಾನೋಪಾಯವು ನನ್ನ ಸಖನೂ ಭಕ್ತನೂ ಆದ ನಿನಗೆ ಹೇಳಲ್ಪಟ್ಟಿದೆ. ಆದುದರಿಂದಲೇ ಇದು ಉತ್ತಮವಾದುದು. ಎಲ್ಲರಿಗೆ ತಿಳಿಯದ ಪ್ರಯುಕ್ತವೂ ದುರ್ಜನರಿಗೆ ತಿಳಿಸಲು ಅನರ್ಹವಾದುದರಿಂದಲೂ ರಹಸ್ಯವೂ ಆಗಿದೆ. ॥ ೩ ॥

॥ ಅರ್ಜುನ ಉವಾಚ ॥

ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।
ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥

॥ ಶ್ರೀಭಗವಾನುವಾಚ ॥

ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।
ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ ೫ ॥
ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।
ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೬ ॥
ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾಽಽತ್ಮಾನಂ ಸೃಜಾಮ್ಯಹಮ್ ॥ ೭ ॥

---

ಅರ್ಜುನನು ಕೇಳುವನು—ಆದಿತ್ಯನ ಉತ್ಪತ್ತಿಯು ಪೂರ್ವಕಾಲದ್ದು. ನಿನ್ನ ಜನ್ಮವು ಈಡೆಗಾದುದು. ಹೀಗಿರುವಾಗ ನೀನು ಹೇಳಿದೆ ಎಂದು ಹೇಗೆ ತಿಳಿಯಲಿ? ॥ ೪ ॥

ಶ್ರೀಕೃಷ್ಣನು ಉತ್ತರವನ್ನು ಕೊಡುವನು—ಅರ್ಜುನನೆ! ನನಗೆ ಬಹು ಅವತಾರಗಳು ಹಿಂದೆ ಸಂದಿವೆ. ಅವುಗಳನ್ನೆಲ್ಲವನ್ನೂ ನಾನು ತಿಳಿದಿದ್ದೇನೆ. ನೀನು ತಿಳಿಯಲಿಲ್ಲ. ॥ ೫ ॥

ನನಗೆ ಬಹು ಜನ್ಮಗಳಿವೆ, ಎಂದು ತಿಳಿದು 'ಅವಿನಾಶಿ ತು' ಎಂದು ಎರಡನೇ ಅಧ್ಯಾಯದಲ್ಲಿ ಹೇಳಿದುದು ಅಸಂಗತವೆಂದು ತಿಳಿಯಬಾರದು. ದೇಹತಃ ನಾನು ಉತ್ಪತ್ತಿ-ನಾಶರಹಿತನಾದ ಪ್ರಯುಕ್ತ, ಅಜನಾದರೂ ಸ್ವರೂಪತಃ ನಾಶರಹಿತನಾದ ಪ್ರಯುಕ್ತ, ಅವ್ಯಯನಾದರೂ ಸಕಲ ಪ್ರಾಣಿಗಳಿಗೆ ನಿಯಾಮಕನಾದರೂ ಸ್ವೇಚ್ಛೆಯಿಂದ ಉತ್ಪನ್ನನಾಗುವೆನು. ಇಂತಹವರಿಗೆ ಎಂತಹ ಉತ್ಪತ್ತಿಯೆಂದು ಶಂಕಿಸಬಾರದೆಂಬ ಅಭಿಪ್ರಾಯದಿಂದ 'ಪ್ರಕೃತಿಮಧಿಷ್ಠಾಯ' ಎಂದು ಹೇಳಿದುದು. ವಸುದೇವಾದಿ ಪ್ರಾಕೃತರನ್ನು ಪ್ರವೇಶಮಾಡಿ ವ್ಯಕ್ತನಾಗುವೆನೆಂದು ಅದರ ಅರ್ಥವು. ॥ ೬ ॥

ತಾನು ಅವತಾರಮಾಡುವೆನೆಂದು ಹೇಳಿದ ಪ್ರಯುಕ್ತ ಅದು ಎಂದಿಗೆಂದರೆ ಆ ಕಾಲವನ್ನು ಸೂಚಿಸುತ್ತಾನೆ. ಯಾವಾಗ ಧರ್ಮಹ್ರಾಸವೂ

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ ೮ ॥

ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।
ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ೯ ॥

ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।
ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥

---

ಅಧರ್ಮವೃದ್ಧಿಯೂ ಆಗುತ್ತದೋ, ಭರತಕುಲೋತ್ಪನ್ನನೆ! ಆ ಕಾಲದಲ್ಲಿ ನನ್ನನ್ನು ನಾನು ಸೃಷ್ಟಿಸುವೆನು. ನಾನೇ ಸೃಷ್ಟಿಸುವೆನೆಂದು ಹೇಳಿದುದರಿಂದ ಇವನ ಅವತಾರದಲ್ಲಿ ಇವನ ಇಚ್ಛೆಯೇ ಕಾರಣವಲ್ಲದೆ ಇತರ ಕಾರಣಗಳಿಲ್ಲ ವೆಂಬುದು ಸ್ಪಷ್ಟವಾಗುತ್ತದೆ. ॥ ೭ ॥

ಅವತಾರದ ಕಾಲವನ್ನು ಹೇಳಿ ಅವತಾರದ ನಿಮಿತ್ತವನ್ನು ಹೇಳುತ್ತಾನೆ. ಸಾಧುಗಳ ರಕ್ಷಣಾರ್ಥವಾಗಿಯೂ, ದುಷ್ಟರ ವಿನಾಶಾರ್ಥವಾಗಿಯೂ ಸಮ್ಯಕ್ ಧರ್ಮಸ್ಥಾಪನಾರ್ಥವಾಗಿಯೂ ನಾನು ಪ್ರತಿಯುಗದಲ್ಲಿ ಅವತರಿಸುತ್ತೇನೆ. ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಅಧರ್ಮವೃದ್ಧಿ, ಧರ್ಮಗ್ಲಾನಿ ಬಂದ ಕಾಲದಲ್ಲೆಲ್ಲ ಅವತಾರವಾಗುವುದೆಂದು ತಾತ್ಪರ್ಯವು.॥ ೮ ॥

ಸ್ವೇಚ್ಛೆಯಿಂದಲೇ ನನಗೆ ಅವತಾರವೆಂದು ತಿಳಿಯುವವನಿಗೆ ಫಲವನ್ನು ಹೇಳುತ್ತಾನೆ. ಈ ಪ್ರಕಾರವಾಗಿ ನನ್ನ ಅಲೌಕಿಕವಾದ ಜನ್ಮವನ್ನೂ ವ್ಯಾಪಾರವನ್ನೂ ಯಥಾರ್ಥವಾಗಿ ಯಾರು ತಿಳಿಯುತ್ತಾನೋ, ಅರ್ಜುನ! ಆತನು ಈ ದೇಹವನ್ನು ಬಿಟ್ಟ ಮೇಲೆ ಎರಡನೆ ದೇಹವನ್ನು ಹೊಂದುವುದಿಲ್ಲ; ಮಾತ್ರವಲ್ಲದೆ ನನ್ನನ್ನು ಹೊಂದುವನು, ಎಂದರೆ ಮುಕ್ತನಾಗುವನು. ॥ ೯ ॥

ಹೀಗೆ ತಿಳಿದು ಮುಕ್ತನಾದವನಿದ್ದಾನೆಯೋ? ಎಂದು ಕೇಳಿದರೆ ಬಹು ಮಂದಿಗಳಿದ್ದಾರೆಂದು ಹೇಳುವನು. ರಾಗಾದಿ ದೋಷಗಳನ್ನು ತ್ಯಜಿಸಿದ ನಾನೇ ಪ್ರಧಾನನೆಂದು ತಿಳಿದುಕೊಂಡು ನನ್ನನ್ನೇ ಮರೆಹೊಕ್ಕ ಬಹು ಜನರು ನಾನು ಹೇಳಿದ ಜ್ಞಾನರೂಪ ತಪಸ್ಸಿನಿಂದ ಪವಿತ್ರರಾಗಿ ಸಾಯುಜ್ಯರೂಪವಾದ ಮದ್ಭಾವವನ್ನು ಹೊಂದಿದ್ದಾರೆ. ॥ ೧೦ ॥

ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೧೧॥

ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।
ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨ ॥

ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।
ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥ ೧೩ ॥

---

ವಿಷ್ಣುವನ್ನು ಸರ್ವೋತ್ತಮನೆಂದು ತಿಳಿದುಕೊಂಡು ಇರುವ ಕರ್ಮಿಗಳಿಗೂ ಜ್ಞಾನಿಗಳಿಗೂ ಫಲವು ಸಮವಲ್ಲವೆಂದು ಹೇಳುತ್ತಾನೆ. ನನ್ನನ್ನು ಯಾರು ಹೇಗೆ ಸೇವಿಸುತ್ತಾರೋ, ನಾನು ಅವರ ಸೇವಾನುಸಾರವಾಗಿಯೇ ಅವರನ್ನು ಸೇವಿಸುತ್ತೇನೆ. ಎಂದರೆ ಸ್ವರ್ಗೇಚ್ಛೆಯಿಂದ ಕರ್ಮಮಾಡುವವರಿಗೆ ಸ್ವರ್ಗವನ್ನು ಕೊಡುವೆನು. ಹೀಗೆ ಯಾವ ಯಾವ ಫಲವನ್ನು ಇಚ್ಛಿಸುವರೋ, ಆಯಾ ಫಲವನ್ನು ಕೊಡುತ್ತೇನೆ. ಪಾರ್ಥ! ಸರ್ವ ಮನುಷ್ಯರೂ ನನ್ನ ದಾರಿಯನ್ನೇ ಅನುಸರಿಸುತ್ತಾರೆ. ಸರ್ವ ಕರ್ಮ ಕರ್ತೃಗಳು ಯಾಗದಲ್ಲಿ ಕೊಡುವ ಹವಿಸ್ಸನ್ನು ನಾನೇ ಭೋಗಿಸುವವನಾದ ಕಾರಣ ಯಾರು ಯಾವುದನ್ನು ಮಾಡಿದರೂ ನನ್ನನ್ನೇ ಅನುಸರಿಸುವವರಾಗುತ್ತಾರೆ. ॥೧೧॥

'ನನ್ನ ದಾರಿಯನ್ನೇ ಅನುಸರಿಸುತ್ತಾರೆ'ಂಬುದನ್ನು ವಿವರಿಸುತ್ತಾನೆ. ಈ ಲೋಕದಲ್ಲಿ ಕರ್ಮದ ಫಲವನ್ನು ಅಪೇಕ್ಷಿಸುವವರು ಇತರ ದೇವತೆಗಳನ್ನು ಪೂಜಿಸುತ್ತಾರೆ. ಅಂತಹರಿಗೆ ಕರ್ಮದಿಂದಾಗುವ ಫಲವು ಈ ಮನುಷ್ಯಲೋಕದಲ್ಲಿ ಬೇಗನೆ ಆಗುತ್ತದೆ. ನಾನು ಸಕಲ ಯಜ್ಞ ಭೋಕ್ತನು; ಆದುದರಿಂದಲೇ ಅವರಿಗೆ ಕರ್ಮಫಲವು ಬೇಗನೇ ದೊರೆಯುವುದು; ಇಲ್ಲವಾದರೆ ದೊರೆಯಲಾರದು. ಆದುದರಿಂದಲೇ ಎಲ್ಲರೂ ನನ್ನ ಮಾರ್ಗವನ್ನೇ ಅನುಸರಿಸುವರು. ॥ ೧೨ ॥

ನನ್ನನ್ನು ಬಿಟ್ಟು ಇತರ ದೇವತೆಗಳನ್ನು ಭಜಿಸುವವರಿಗೆ ಮಹಾ ಫಲಪ್ರಾಪ್ತಿಯು ಏಕೆ ಇರಲಾರದೆಂದರೆ ನಾನು ಸರ್ವರಿಗೂ ಪಿತನು. ಪಿತೃಪರಿತ್ಯಾಗಿಗಳಿಗೆ ಫಲವೇ ಸಿಗಲಾರದು; ಮಹಾಫಲಪ್ರಾಪ್ತಿಯು ಅಸಂಭಾವಿತ

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ ೧೪ ॥**

---

ಮೆಂದು ಹೇಳುವನು. ನನ್ನಿಂದ ಸತ್ತ್ವರಜಸ್ತಮೋಗುಣಗಳ ವಿಭಾಗ ಮತ್ತು ಕರ್ಮಗಳ ವಿಭಾಗ ಇವೆರಡರಿಂದ ಬ್ರಾಹ್ಮಣಾದಿ ನಾಲ್ಕು ಜಾತಿಯವರ ಸಮುದಾಯವು ಸೃಷ್ಟಿಸಲ್ಪಟ್ಟಿತು. ಹೀಗೆ ನೀನು ಕರ್ತೃವಾದರೆ ಜೀವರಿಗೆ ಕರ್ತೃತ್ವಪ್ರಯುಕ್ತ ಕರ್ಮಲೇಪವಿದ್ದಂತೆ ನಿನಗೂ ಕರ್ಮಲೇಪವಿದೆಯೇ? ಎಂದು ಶಂಕಿಸಿದರೆ ಮೇಲಿನ ಶ್ಲೋಕದಿಂದ ಅದಿಲ್ಲವೆಂದು ಹೇಳುವ ಉದ್ದಿಶ್ಯ ಅದಕ್ಕುಪಯುಕ್ತವಾದ ಹೇತುವನ್ನಿಲ್ಲಿ ಹೇಳುತ್ತಾನೆ. ಆ ಚಾತುರ್ವರ್ಣ್ಯಕ್ಕೆ ನಾನು ನಾಶಶೂನ್ಯವಾದ ಕರ್ತನಾಗಿದ್ದರೂ ನನ್ನನ್ನು ಕರ್ತನಲ್ಲವೆಂದು ತಿಳಿ. ಎಂದರೆ ಜೀವನಂತೆ ಕರ್ತೃತ್ವವು ನನಗಿಲ್ಲ. ಆದಕಾರಣ ಕರ್ಮಲೇಪವಿಲ್ಲ. ಇಲ್ಲಿ ಉಪಯುಕ್ತವಾದ ಒಂದು ವಿಷಯವು ಪ್ರಸಂಗಸಂಗತಿಯಿಂದ ವಿವರಿಸಲ್ಪಡುತ್ತದೆ. ಜನರಲ್ಲಿ ಸಾತ್ತ್ವಿಕ-ಸಾತ್ತ್ವಿಕರು, ರಾಜಸ-ಸಾತ್ತ್ವಿಕರು, ತಾಮಸ-ಸಾತ್ತ್ವಿಕರು ಎಂದು ಮೂರು ಪ್ರಭೇದವಿದೆ. ಅದರಲ್ಲಿ ಮಧ್ಯಮರಾದ ರಾಜಸ-ಸಾತ್ತ್ವಿಕರ ಪ್ರಭೇದವನ್ನು ಇಲ್ಲಿ (ಗೀತೆಯಲ್ಲಿ) ಹೇಳಿದುದು. ಅತಿಸತ್ತ್ವಾಧಿಕ ರಜೋಗುಣಯುಕ್ತರು ಬ್ರಾಹ್ಮಣರು. ಕಿಂಚಿತ್ಸತ್ತ್ವಾಧಿಕ ರಜೋಗುಣಯುಕ್ತರು ಕ್ಷತ್ರಿಯರು. ತಮೋಗುಣಕ್ಕಿಂತ ಅಧಿಕವಾಗಿಯೂ, ಪರಸ್ಪರ ಸಮವಾಗಿಯೂ ಇರುವ ಸತ್ತ್ವರಜೋಗುಣಗಳುಳ್ಳವರು ವೈಶ್ಯರು. ರಜೋಗುಣಕ್ಕಿಂತ ಅಧಿಕ ತಮೋಗುಣವೂ, ತಮೋಗುಣಕ್ಕಿಂತ ಅಧಿಕ ಸತ್ತ್ವಗುಣವೂ ಉಳ್ಳವರು ಶೂದ್ರರು. ಇದರಿಂದ ಬ್ರಾಹ್ಮಣರಲ್ಲಿರುವ ಸತ್ತ್ವಗುಣಕ್ಕಿಂತ ವೈಶ್ಯ-ಶೂದ್ರರಲ್ಲಿ ಸತ್ತ್ವಗುಣವು ಅಧಿಕವೆಂದು ಯಾರೂ ತಿಳಿಯಬಾರದು. ಅವರವರಲ್ಲಿರುವ ಮೂರು ಗುಣಗಳಲ್ಲಿ ಮಾತ್ರ ತಾರತಮ್ಯವನ್ನು ಇಲ್ಲಿ ವಿವರಿಸಿದುದು ಹೊರತು ವಿಜಾತೀಯರಲ್ಲಿರುವ ಗುಣಗಳ ತಾರತಮ್ಯವು ಇದಲ್ಲವು ಎಂದು ತಿಳಿಯತಕ್ಕದ್ದು. ಇದು ಗುಣಕೃತವಾದ ವಿಭಾಗವು. ಕರ್ಮಕೃತ ವಿಭಾಗವನ್ನು ಹದಿನೆಂಟನೆಯ ಅಧ್ಯಾಯದಲ್ಲಿರುವ 'ಶಮೋ ದಮಃ' ಇತ್ಯಾದಿ ಮೂರು ಶ್ಲೋಕಗಳಲ್ಲಿ ಗ್ರಂಥಕಾರರೇ ನಿರೂಪಿಸಿರುವುದರಿಂದ ಇಲ್ಲಿ ವಿವರಿಸಲ್ಪಡಲಿಲ್ಲ. ॥ ೧೩ ॥

ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।
ಕುರು ಕರ್ಮೈವ ತಸ್ಮಾತ್ ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥
ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।
ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽ-
ಶುಭಾತ್ ॥ ೧೬ ॥

---

ಜೀವನಂತೆ ನನಗೆ ಕರ್ತೃತ್ವವಿಲ್ಲದ ಪ್ರಯುಕ್ತ ಕರ್ಮವು ನನ್ನನ್ನು ಲೇಪಿಸುವುದಿಲ್ಲ. ಮತ್ತು ಜೀವರು ಫಲಾಪೇಕ್ಷಿಗಳಾದ ಕಾರಣ ಅವರಿಗೆ ಕರ್ಮಲೇಪವಿದೆ. ನನಗೆ ಫಲೇಚ್ಛೆಯಿಲ್ಲದ ಕಾರಣ ಕರ್ಮಲೇಪವಿಲ್ಲ. ಮಾತ್ರವಲ್ಲದೆ ನನ್ನನ್ನು ಈ ರೀತಿಯಲ್ಲಿ ಕರ್ಮಲೇಪವಿಲ್ಲದವನೆಂದು ಯಾರು ತಿಳಿಯುತ್ತಾನೋ, ಅವನೂ ಕರ್ಮಬದ್ಧನಾಗುವುದಿಲ್ಲ. ಹೀಗಿರಲು ನಾನು ಕರ್ಮಬದ್ಧನಲ್ಲವೆಂದೇನು ಹೇಳಬೇಕು? ಈ ಕೈಮುತ್ಯ ನ್ಯಾಯವು ಉತ್ತರಾರ್ಧಶ್ಲೋಕದಲ್ಲಿ ನಿರೂಪಿತವಾಗಿದೆ. ॥ ೧೪ ॥

ಜ್ಞಾನಿಗಳಿಗೆ ಕರ್ಮಬಂಧವಿಲ್ಲದಿದ್ದರೆ ನಾನೂ ಜ್ಞಾನಿಯಾದ ಪ್ರಯುಕ್ತ ನನಗೂ ಕರ್ಮಬಂಧವಿಲ್ಲ. ಆದಕಾರಣ ಮಹಾಫಲರೂಪವಾದ ಮುಕ್ತಿಯು ನಿಯತವೇ ಹೀಗಿರಲು ಏಕೆ ಕರ್ಮವನ್ನು ವಿಧಿಸುತ್ತೀ? ಎಂಬ ಅರ್ಜುನನ ಹೃದ್ಗತವಾದ ಶಂಕೆಯನ್ನು, 'ಜ್ಞಾನಿಗಳೂ ಕೂಡಾ ಮೋಕ್ಷದಲ್ಲಿ ಅಧಿಕ ಸುಖರೂಪ ಫಲಾಪೇಕ್ಷೆಯಿಂದ ಕರ್ಮ ಮಾಡುವುದಿದೆ' ಎಂದು ಪೂರ್ವಿಕರ ಆಚಾರವನ್ನು ಶ್ರೀಕೃಷ್ಣನು ತೋರಿಸಿ ಪರಿಹರಿಸುತ್ತಾನೆ. ಅಧಿಕ ಮೋಕ್ಷೇಚ್ಛೆಯುಳ್ಳ ಪೂರ್ವಿಕರಿಂದ ಪರಮಾತ್ಮನು ಕರ್ಮಲೇಪಶೂನ್ಯನು, ಫಲೇಚ್ಛಾರಹಿತನು, ಎಂದು ತಿಳಿದುಕೊಂಡಿದ್ದರೂ ಕರ್ಮವು ಮಾಡಲ್ಪಟ್ಟಿದೆ. ಆದುದರಿಂದಲೂ ಪೂರ್ವಜರಿಂದ ಆದಿಯಿಂದಲೂ ಮಾಡಿಕೊಂಡು ಬಂದ ಕರ್ಮವನ್ನು ನೀನು ಮಾಡು. ॥ ೧೫ ॥

ನೀನು ಮಾಡೆಂದು ವಿಧಿಸಲ್ಪಟ್ಟ ಕರ್ಮಸ್ವರೂಪದಲ್ಲಿ ವಿಶೇಷ ಜಿಜ್ಞಾಸೆಯು ಹುಟ್ಟುವ ಉದ್ದಿಶ್ಯ ಕರ್ಮವು ದುರ್ಜ್ಞೇಯವೆಂದು ಹೇಳುತ್ತಾನೆ. ಯಾವುದು ಕರ್ಮವು, ಯಾವುದು ಅಕರ್ಮವು ಎಂದು ಈ ಕರ್ಮದ ವಿಷಯದಲ್ಲಿ ಕವಿಗಳೂ ಕೂಡಾ ಭ್ರಾಂತರು. ಯಾವ ಕರ್ಮಸ್ವರೂಪವನ್ನು ತಿಳಿದು

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**
**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥**

---

ಅಶುಭವಾದ ಕರ್ಮಬಂಧದಿಂದ ಮುಕ್ತನಾಗುತ್ತೀಯೋ, ಅಂತಹ ಗಹನವಾದ ಕರ್ಮಸ್ವರೂಪವನ್ನೂ, ಅಕರ್ಮದ ಎಂದರೆ ವಿರುದ್ಧಕರ್ಮ ಮತ್ತು ಕರ್ಮಾಭಾವ, ಇದರ ಸ್ವರೂಪವನ್ನೂ ಹೇಳುತ್ತೇನೆಂದು ಶ್ರೀಕೃಷ್ಣನು ಹೇಳುತ್ತಾನೆ. ॥ ೧೬ ॥

ಅಕರ್ಮ ಎಂಬುದಕ್ಕೆ ಕರ್ಮವಿಪರೀತ, ಎಂದರೆ ವಿರುದ್ಧ ಕರ್ಮ ಮತ್ತು ಕರ್ಮಾಕರಣವೆಂದು ಎರಡು ಅರ್ಥಗಳಿವೆ. ಅದರಲ್ಲಿ ಕರ್ಮದಿಂದ ವಿರುದ್ಧಕರ್ಮವೂ ಕರ್ಮಾಕರಣವೂ ಬೇರೆಬೇರೆಯಾಗಿ ತಿಳಿಯಲ್ಪಡತಕ್ಕದ್ದು. ಹೀಗೆಯೇ ವಿರುದ್ಧಕರ್ಮದಿಂದ ಕರ್ಮವೂ ಕರ್ಮಾಕರಣವೂ, ಹಾಗೆಯೇ ಕರ್ಮಾಕರಣದಿಂದ ಕರ್ಮವೂ ವಿರುದ್ಧಕರ್ಮವೂ ಬೇರೆಬೇರೆಯೆಂದು ತಿಳಿಯತಕ್ಕದ್ದು. ಆದುದರಿಂದಲೇ ಕರ್ಮದ ತಿಳುವಳಿಕೆಯು ಗಹನವಾದುದೆಂದು ಹಿಂದೆ ಹೇಳಿದುದು. ॥ ೧೭ ॥

ಕರ್ಮಾದಿ ಸ್ವರೂಪವನ್ನು ಬಿಡಿಸಿ ಅದರ ಜ್ಞಾನವನ್ನು ಹೊಗಳುತ್ತಾನೆ. ವರ್ಣಾಶ್ರಮೋಚಿತವಾದ ಕರ್ಮವನ್ನು ಮಾಡುವಾಗ ಅಂತಹ ಕರ್ಮದ ವಿಷಯದಲ್ಲಿ ಯಾವನು ತನಗೆ ಅಕರ್ಮ ಎಂದರೆ ಕರ್ಮಾಭಾವವನ್ನು ತಿಳಿಯುವನೋ, ಎಂದರೆ ತಾನು ಕರ್ಮಮಾಡುವಾಗಲೂ ತನಗೆ ಸ್ವಾತಂತ್ರ್ಯವಿಲ್ಲದ ಪ್ರಯುಕ್ತ ಕರ್ಮಕರ್ತನು ನಾನಲ್ಲ; ಮತ್ತು ಸ್ವತಂತ್ರನಾದ ಪರಮಾತ್ಮನೇ ಕರ್ತನು; ನಾನು ತದಧೀನನಾಗಿ ಮಾಡುವುದು ಎಂದು ತಿಳಿಯುತ್ತಾನೋ, ಹೀಗೆಯೇ 'ಅಕರ್ಮಣಿ' ಎಂದರೆ ಕರ್ಮವಿಲ್ಲದಿರುವಾಗ ನಿದ್ರಾವಸ್ಥೆಯಲ್ಲಿಯೂ ಕರ್ಮವನ್ನು ಯಾರು ತಿಳಿಯುತ್ತಾನೋ ಎಂದರೆ ಜೀವನ ವ್ಯಾಪಾರವು ಸರ್ವಾತ್ಮನಾ ಇಲ್ಲದಿರುವಾಗಲೂ ಪರಮಾತ್ಮನೇ ಸ್ವಾಪ್ನಗಜತುರಗಾದಿ ಪ್ರದರ್ಶನವ್ಯಾಪಾರವನ್ನು ಮಾಡುತ್ತಾನಾಗಿ ತಿಳಿಯುತ್ತಾನೋ, ಅವನೇ ಮನುಷ್ಯರಲ್ಲಿ ಪ್ರಶಸ್ತಜ್ಞಾನವುಳ್ಳವನು. 'ಯುಕ್ತಃ'-ಜ್ಞಾನೋಪಾ

ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥೧೯॥
ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।
ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦ ॥

---

ಯುವುಳ್ಳವನೂ ಅವನೇ; ಸಕಲ ಕರ್ಮಫಲವಾದ ಮೋಕ್ಷವನ್ನು ಹೊಂದಲಿಕ್ಕೆ ಯೋಗ್ಯನೂ ಅವನೇ; ಸಕಲ ಕರ್ಮಫಲಮೋಕ್ಷವನ್ನು ಹೊಂದಲು ಯೋಗ್ಯನಾದ ಪ್ರಯುಕ್ತ ಸಕಲ ಕರ್ಮವನ್ನು ಮಾಡುವವನೂ ಅವನೇ. ಇದರಿಂದ ಪರಾನಪೇಕ್ಷೆ ಎಂದರೆ ಇತರ ಸಹಾಯವಿಲ್ಲದೆ ಪರಮಾತ್ಮನೇ ಸಕಲ ಕರ್ಮಕರ್ತೃ, ತಾನು ತದಧೀನಕರ್ತನೆಂದು ತಿಳಿದು ವರ್ಣಾಶ್ರಮವಿಹಿತವಾದುದನ್ನು ಮಾಡುವುದೇ ಕರ್ಮಸ್ವರೂಪವೆಂದು ತಿಳಿಯತಕ್ಕದ್ದು. ॥ ೧೮ ॥

ತಾನು ತನಗೆ ಕರ್ತೃತ್ವಾಭಿಮಾನವನ್ನು ತ್ಯಾಗಮಾಡಿದರೆ ಮಾತ್ರ ಸಾಕಾಗದು; ಕಾಮನಾದಿ ಪರಿತ್ಯಾಗವನ್ನೂ ಮಾಡಬೇಕೆಂಬ ಅಭಿಪ್ರಾಯದಿಂದ ಕರ್ಮಸ್ವರೂಪವನ್ನೇ ಇನ್ನು ಮುಂದಿನ ಐದು ಶ್ಲೋಕಗಳಿಂದ ವಿವರಿಸಿ ನಿರೂಪಿಸುವನು. ಯಾವ ಮನುಷ್ಯನ ಸರ್ವ ಕರ್ಮಾರಂಭಗಳು ಕಾಮಸಂಕಲ್ಪಗಳಿಂದ ರಹಿತಗಳಾಗಿದ್ದಾವೋ— ಈ ಕರ್ಮದಿಂದ ನಾನೀ ಫಲವನ್ನು ಹೊಂದುವೆನು ಎನ್ನುವುದು ಸಂಕಲ್ಪ; ಫಲಬೇಕೆಂದಿಚ್ಛಿಸುವುದು ಕಾಮ— ಈ ಎರಡರಿಂದ ಶೂನ್ಯನಾದ ಮನುಷ್ಯನನ್ನು ಕಾಮಸಂಕಲ್ಪವರ್ಜಿತನೆಂದು ಹೇಳುವರು. ಅವನನ್ನೇ ಜ್ಞಾನಾಗ್ನಿದಗ್ಧಕರ್ಮನೆನ್ನುವರು. ಎಂದರೆ ಪರಮಾತ್ಮನೇ ಸ್ವತಂತ್ರಕರ್ತೃ, ತಾನು ಸ್ವಾತಂತ್ರ್ಯೇಣ ಕರ್ತನಲ್ಲವೆಂದೂ ಕರ್ಮಸ್ವರೂಪತತ್ತ್ವಜ್ಞಾನಿಯೆಂದೂ ಬುಧರು ಹೇಳುತ್ತಾರೆ. ॥ ೧೯ ॥

ಇಷ್ಟುಮಾತ್ರವಲ್ಲದೆ ಕರ್ಮಫಲದಲ್ಲಿ ಸ್ನೇಹವೂ ಇರಬಾರದೆಂದೆನ್ನುತ್ತಾನೆ. ಯಾರು ಕರ್ಮಫಲದಲ್ಲಿ ಆಸಕ್ತಿಯನ್ನು ಬಿಟ್ಟು ನಿತ್ಯದಲ್ಲಿಯೂ ಅಲಂಬುದ್ಧಿಯುಳ್ಳವನೂ, ಪರಮಾತ್ಮನೇ ಆಶ್ರಯವಾಗಿ ಉಳ್ಳವನೂ ಆಗಿಕೊಂಡು ಕರ್ಮದಲ್ಲಿ ಪ್ರವೃತ್ತಿಮಾಡುತ್ತಾನೋ, ಅವನು ಕರ್ಮಾರಂಭವನ್ನು ಮಾಡಿದರೂ ಏನೊಂದನ್ನೂ ಸ್ವಾತಂತ್ರ್ಯಬುದ್ಧಿಯಿಲ್ಲದ ಕಾರಣ ಮಾಡುವುದಿಲ್ಲ. ॥ ೨೦ ॥

ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।
ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೨೧॥
ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।
ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ॥ ೨೨ ॥
ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।
ಯಜ್ಞಾಯಾಽಽಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩ ॥

---

ಕಾಮಾದಿ ಪರಿತ್ಯಾಗದಲ್ಲಿ ಉಪಾಯವನ್ನು ಶ್ರೀಕೃಷ್ಣನು ನಿರೂಪಿಸುವನು. ಯಾವ ಮನುಷ್ಯನು ನಿಯತವಾದ ಮನಸ್ಸುಳ್ಳವನೊ, (ಯತಚಿತ್ತಾತ್ಮಸ್ವರೂಪವು ಮೇಲಿನ ಶ್ಲೋಕದಲ್ಲಿ ವಿವರಿಸಲ್ಪಡುವುದು.) ಫಲಕಾಮನಾಶೂನ್ಯನೂ, ಶರೀರೇಂದ್ರಿಯಾದ್ಯಭಿಮಾನವನ್ನು ಪರಿತ್ಯಾಗಮಾಡಿದ ಪ್ರಯುಕ್ತ, ಶರೀರೇಂದ್ರಿಯಾದಿಗಳಿದ್ದರೂ ಶರೀರೇಂದ್ರಿಯಾದಿಸರ್ವಪರಿಗ್ರಹತ್ಯಾಗಿಯೂ ಆಗಿ ಕೇವಲ ಶರೀರಯಾತ್ರಾರ್ಥವಾಗಿ ಕರ್ಮವನ್ನು ಮಾಡುವನೋ, ಅವನು ಕರ್ಮಬಂಧರೂಪವಾದ ಕಿಲ್ಬಿಷವನ್ನು ಹೊಂದುವುದಿಲ್ಲ ॥ ೨೧ ॥

ಯತಚಿತ್ತನು ಯಾರೆಂಬುವುದನ್ನು ಈ ಶ್ಲೋಕದಲ್ಲಿ ವಿವರಿಸುವನು. ಪ್ರಯತ್ನಮಾಡದೆ ಅನಾಯಾಸವಾಗಿ ಲಬ್ಧವಾದವುಗಳಿಂದ ತೃಪ್ತನಾದವನು. ಇವನೇ ಯದೃಚ್ಛಾಲಾಭಸಂತುಷ್ಟನು. ದ್ವಂದ್ವಾತೀತನಾಗಿಯೂ ಮನಃಖೇದಶೂನ್ಯನಾಗಿಯೂ ಇರುವ ಮನುಷ್ಯನು ಕಾಮವನ್ನು ಮಾಡಿದರೂ, ಅದರಿಂದ ಬದ್ಧನಾಗುವುದಿಲ್ಲ. ದ್ವಂದ್ವಾತೀತ ಶಬ್ದಾರ್ಥವನ್ನು 'ಸಿದ್ಧಾಅಸಿದ್ಧೌ ಚ' ಸಮನೆಂದು ಮೂಲದಲ್ಲಿಯೇ ಬಿಡಿಸಿಯದೆ. ಎಂದರೆ ಸುಖಾದಿಸಿದ್ಧಿಯಾಗಲಿ ಆಗದಿರಲಿ, ತತ್ಪ್ರಯುಕ್ತ ನೀಚೋಚ್ಚಭಾವರಹಿತನು. ಸ್ವಾಧೀನತಾಭ್ರಾಂತಿಯಿಲ್ಲದುದರಿಂದ ಮನಃಖೇದವಿಲ್ಲದವನೇ ವಿಮತ್ಸರನು. ॥ ೨೨ ॥

ಹಿಂದೆ ಹೇಳಿದುದನ್ನೇ ಸಂಗ್ರಹಿಸಿ ಹೇಳುವನು. ಫಲಸ್ನೇಹವಿಲ್ಲದವನಾಗಿಯೂ ಸ್ವಾತಂತ್ರ್ಯಾಭಿಮಾನವನ್ನು ಬಿಟ್ಟು ಶ್ರೀವಿಷ್ಣುವಿನ ಜ್ಞಾನದಲ್ಲಿಯೇ ಆಸಕ್ತನಾದ ಮನಸ್ಸುಳ್ಳವನಾಗಿಯೂ ಯಜ್ಞಶಬ್ದವಾಚ್ಯನಾದ

ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥

ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।
ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫ ॥

---

ಶ್ರೀವಿಷ್ಣುವಿನ ಪ್ರೀತಿಗಾಗಿಯೇ ಯಾರು ಕರ್ಮವನ್ನಾಚರಿಸುತ್ತಾನೋ, ಅಂತಹ ಮನುಷ್ಯನಿಗೆ ಅಂದಿನಿಂದ ಮಾಡಲ್ಪಟ್ಟ ಸಕಲ ಕರ್ಮಗಳೂ ಬಂಧಕವಾಗುವುದಿಲ್ಲ. ॥ ೨೩ ॥

ಈ ವರೆಗೆ ಕರ್ಮಸ್ವರೂಪವನ್ನು ಹೇಳಿ ಜ್ಞಾನಾವಸ್ಥಿತ ಚೇತಸ್ಸುಳ್ಳವನು ಯಾರೆಂಬುದನ್ನು ಸ್ಪಷ್ಟಪಡಿಸುತ್ತಾನೆ. ಬ್ರಹ್ಮನಲ್ಲಿ ಅರ್ಪಣೆಮಾಡಿದುದೂ, ಬ್ರಹ್ಮನ ಹವಿಸ್ಸೂ ಬ್ರಹ್ಮನ ಅಗ್ನಿಯಲ್ಲಿ ಬ್ರಹ್ಮನಿಂದ ಹೋವಿಸಲ್ಪಟ್ಟದ್ದು ಸಮಾಧಿಯಿಂದ ಕೂಡಿದ ಕರ್ಮವೂ ಬ್ರಹ್ಮನದ್ದು ಎಂದರೆ ಇದೆಲ್ಲವೂ ಬ್ರಹ್ಮಾಧೀನವಾದುದು, ತನಗೆ ಯಾವುದರಲ್ಲಿಯೂ ಸ್ವಾತಂತ್ರ್ಯವಿಲ್ಲವೆಂದು ಯಾರು ತಿಳಿಯುವನೋ ಅವನಿಂದ ಬ್ರಹ್ಮನು ಹೊಂದಲ್ಪಡಲರ್ಹನಾಗಿದ್ದಾನೆ. ಹೀಗೆ ಹೇಳಿದುದರಿಂದ ಸರ್ವತ್ರ ಸ್ವಾತಂತ್ರ್ಯಾಭಿಮಾನವನ್ನು ಬಿಟ್ಟು ಎಲ್ಲವೂ ಪರಬ್ರಹ್ಮಾಧೀನವೆಂದು ತಿಳಿಯೋಣವೇ ಜ್ಞಾನಾವಸ್ಥಿತಚೇತಸ್ಸುಳ್ಳತನವೆಂದಾಗಲೀ, 'ಯಜ್ಞಾಯಾಚರತಃ' ಎಂದು ಹಿಂದೆ ಹೇಳಿದ ಯಜ್ಞೋದ್ದೇಶ ಕರ್ಮಮಾಡುವುದು ಎಂಬ ಜ್ಞಾನವೆಂದಾಗಲೀ ಹೇಳಿದಂತಾಯಿತು. ॥ ೨೪ ॥

ಹಿಂದೆ ಹೇಳಿದ ಕರ್ಮಸ್ವರೂಪವನ್ನೇ ಅನೇಕ ವಿಧದಿಂದ ಇಲ್ಲಿ ನಿರೂಪಿಸುತ್ತಾನೆ. ಕೆಲವು ಯೋಗಿಗಳು ವಿಷ್ಣುವನ್ನೇ ಯಜ್ಞವೆಂದು ಉಪಾಸನೆ ಮಾಡುತ್ತಾರೆ. ಎಂದರೆ ಭಗವದುಪಾಸನೆಯನ್ನೇ ಯಜ್ಞರೂಪವಾಗಿ ಅನುಷ್ಠಾನಮಾಡುತ್ತಾರೆ. ಕೆಲವರು ಬ್ರಹ್ಮಾಖ್ಯವಾದ ಅಗ್ನಿಯಲ್ಲಿ ಅಗ್ನಿಹೋತ್ರಾದಿ ಯಜ್ಞದಿಂದ ಯಜ್ಞಶಬ್ದವಾಚ್ಯನಾದ ಪರಮಾತ್ಮನನ್ನು ಉದ್ದೇಶಿಸಿ ಹೋಮಿಸುತ್ತಾರೆ. ಸರ್ವವನ್ನು ವಿಷ್ಣುವಿನ ಅಧೀನವೆಂದು ತಿಳಿದುಕೊಂಡು ಸ್ವಾತಂತ್ರ್ಯಾಭಿಮಾನವಿಲ್ಲದೆ ತಮ್ಮಿಂದ ಮಾಡಲ್ಪಟ್ಟ ಕರ್ಮವನ್ನು ವಿಷ್ಣುವಿನಲ್ಲಿ ಸಮರ್ಪಿಸುತ್ತಾರೆ. ॥ ೨೫ ॥

ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।
ಶಬ್ದಾದೀನ್ ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥ ೨೬ ॥
ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।
ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥
ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ ।
ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮ ॥

---

ಕೆಲವು ಯೋಗಿಗಳು ಶ್ರೋತ್ರಾದಿ ಜ್ಞಾನೇಂದ್ರಿಯಗಳನ್ನು ಇಂದ್ರಿಯವನ್ನು ಅಧೀನದಲ್ಲಿಟ್ಟುಕೊಳ್ಳುವಿಕೆಯೆಂಬ ಅಗ್ನಿಯಲ್ಲಿ ಹೋಮಿಸುತ್ತಾರೆ, ಎಂದರೆ ಭಗವತ್ಪೂಜಾರೂಪವಾಗಿ ಇಂದ್ರಿಯನಿಯಮವನ್ನು ಮಾಡುವರು. ಕೆಲವರು ಇಂದ್ರಿಯಾಖ್ಯ ಅಗ್ನಿಗಳಲ್ಲಿ ಶಬ್ದ-ಸ್ಪರ್ಶ-ರೂಪ-ರಸಗಂಧಾಖ್ಯ ವಿಷಯಗಳನ್ನು ಹೋಮಿಸುತ್ತಾರೆ. ವಿಷಯಗಳನ್ನು ಭೋಗಿಸಿದರೂ ಸ್ವಾತಂತ್ರ್ಯಾಭಿಮಾನವನ್ನು ಬಿಟ್ಟು ಪರಮಾತ್ಮನೇ ಮಾಡಿಸುವನೆಂದು ತಿಳಿದುಕೊಂಡು ಭಗವತ್ಪೂಜಾತ್ವೇನ ಭೋಗಿಸುತ್ತಾರೆ. ॥ ೨೬ ॥

ಕೆಲವು ಯೋಗಿಗಳು ವಾಕ್-ಪಾಣಿ-ಪಾದ-ಪಾಯೂಪಸ್ಥಾಖ್ಯ ಕರ್ಮೇಂದ್ರಿಯ ವ್ಯಾಪಾರಗಳನ್ನೂ ಪ್ರಾಣಾಪಾನವ್ಯಾನೋದಾನಸಮಾನ ರೂಪ ಪಂಚಪ್ರಾಣಗಳ ವ್ಯಾಪಾರವನ್ನೂ ಮನೋನಿಗ್ರಹಪೂರ್ವಕವಾಗಿ ಭಗವತ್ಪೂಜಾರೂಪವಾಗಿ ನಿಯಮಿಸುತ್ತಾರೆ. ॥ ೨೭ ॥

ಇನ್ನು ದ್ರವ್ಯಯಜ್ಞವನ್ನು ಮಾಡುವವರು, ಕೃಚ್ಛ್ರಚಾಂದ್ರಾಯಣಾದಿ ತಪೋಯಜ್ಞಮಾಡುವವರು, ಭಗವದ್ಧ್ಯಾನರೂಪಯೋಗ ಯಜ್ಞವನ್ನು ಮಾಡುವವರು, ಭಗವತ್ಪೂಜಾರೂಪವಾದ ವೇದಾಧ್ಯಯನಾದಿ ಯಜ್ಞಗಳನ್ನು ಮಾಡುವವರು, ಇನ್ನು ಕೆಲವರು ಶ್ರವಣಾದಿರೂಪಜ್ಞಾನ ಯಜ್ಞವುಳ್ಳವರು, ತೀಕ್ಷ್ಣವಾದ ನಿಯಮವುಳ್ಳವರು. ಇವರೆಲ್ಲರೂ ತಾವು ತಾವು ಮಾಡುವ ಯಜ್ಞಾಖ್ಯ ಕರ್ಮವನ್ನು ಭಗವತ್ಪೂಜಾರೂಪವಾಗಿ ಮಾಡುವರೆಂದು ತಾತ್ಪರ್ಯ. ಇನ್ನು ಕೆಲವರು ಪ್ರಾಣಾಯಾಮದಲ್ಲಿ ಆಸಕ್ತರಾಗಿ ಪ್ರಾಣಾಪಾನ–ಗತಿಗಳನ್ನು ತಡೆದು ಅಪಾನದಲ್ಲಿ ಪ್ರಾಣವನ್ನೂ ಪ್ರಾಣದಲ್ಲಿ ಅಪಾನವನ್ನೂ ಹೋಮಿಸುತ್ತಾರೆ—ಕುಂಭಕಸ್ಥರಾಗಿರುತ್ತಾ

ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ ।
ಪ್ರಾಣಾಪಾನಗತೀ ರುಧ್ವಾ ಪ್ರಾಣಾಯಾಮಪರಾಯಣಾಃ ॥ ೨೯ ॥
ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।
ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥ ೩೦ ॥
ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।
ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥
ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।
ಕರ್ಮಜಾನ್ ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥

---

ರೆಂದು ಅರ್ಥವು. ಕೆಲವರು ಆಹಾರನಿಯಮವುಳ್ಳವರಾಗಿ ಶ್ರೋತ್ರಾದಿ ಸಕಲೇಂದ್ರಿಯವ್ಯಾಪಾರಗಳನ್ನು ಇಂದ್ರಿಯಗಳಲ್ಲಿ ಹೋಮಿಸುತ್ತಾರೆ. ಎಂದರೆ ಆಹಾರನಿಯಮನವನ್ನು ಮಾಡಿದ ಪ್ರಯುಕ್ತ ಇಂದ್ರಿಯಗಳ ಶಕ್ತಿ ಹ್ರಾಸವಾಗಲು ಸಕಲೇಂದ್ರಿಯವ್ಯಾಪಾರಗಳನ್ನು ಸಂಕುಚಿತವನ್ನಾಗಿ ಮಾಡುತ್ತಾರೆಂದರ್ಥವು. ಇವರೆಲ್ಲರೂ ಶಿಷ್ಟರೆಂದು ಸ್ತೋತ್ರ ಮಾಡುತ್ತಾನೆ. ಇವರೆಲ್ಲರೂ ಯಜ್ಞದಲ್ಲಿ ತಿಳುವಳಿಕೆಯುಳ್ಳವರು, ಯಜ್ಞದಿಂದ ನಾಶ ಹೊಂದಿದ ಪಾಪವುಳ್ಳವರು. ಹೀಗೆ ಯಜ್ಞಪ್ರಭೇದವನ್ನು ತಿಳಿದುಕೊಂಡು ಆಯಾ ಯಜ್ಞವನ್ನು ಮಾಡುವವರಿಗೆ ಫಲವನ್ನೂ, ಮಾಡದೆ ಇದ್ದವರಿಗೆ ಅನರ್ಥವನ್ನೂ ಮುಂದಿನ ಶ್ಲೋಕದಲ್ಲಿ ಹೇಳುವನು. ॥ ೨೮, ೨೯, ೩೦ ॥

ದೇವತೆಗಳಿಗೆ ಹವಿಸ್ಸಾಗಿ ಕೊಟ್ಟು ಉಳಿದ ಭಾಗಕ್ಕೆ ಅಮೃತವೆಂದು ಹೆಸರು. ಯಾರು ಅಂತಹ ಅಮೃತವನ್ನು ಭುಂಜಿಸುತ್ತಾರೋ, ಅವರು ಅನಾದಿನಿತ್ಯನಾದ ಪರಬ್ರಹ್ಮನನ್ನು ಹೊಂದುವರು. ಎಲೈ ಕುರುಶ್ರೇಷ್ಠನಾದ ಅರ್ಜುನನೆ! ಇವುಗಳಲ್ಲಿ ಯಾವ ಯಜ್ಞವನ್ನೂ ಮಾಡದೆ ಇರುವವನಿಗೆ ಈ ಅಲ್ಪಸುಖವುಳ್ಳ ಮನುಷ್ಯಲೋಕವೂ ಇಲ್ಲ. ಇನ್ನು ಮಹಾಸುಖವುಳ್ಳ ಸ್ವರ್ಗಾದಿ ಇತರ ಲೋಕಗಳೂ ಇಲ್ಲವೆಂದೇನು ಹೇಳಬೇಕು? ಇರಲಾರದೆಂದರ್ಥವು. ॥ ೩೧ ॥

ಹಿಂದೆ ಹೇಳಿದ ಕರ್ಮಪ್ರಭೇದಗಳನ್ನು ಉಪಸಂಹರಿಸುತ್ತಾನೆ. ಈ ಪ್ರಕಾರಗಳಾದ ಅನೇಕ ವಿಧದ ಯಜ್ಞಗಳು ಪರಬ್ರಹ್ಮನ ಮುಖದಲ್ಲಿ

ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಞಾನಯಜ್ಞಃ ಪರಂತಪ ।
ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥

ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।
ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪ ॥

---

ವಿಸ್ತೃತಗಳಾಗಿದ್ದಾವೆ. ಸರ್ವಯಜ್ಞಭೋಕ್ತೃವು ಪರಬ್ರಹ್ಮನಾದ ಪ್ರಯುಕ್ತ ಅವನ ಮುಖದಲ್ಲಿ ವಿಸ್ತೃತಗಳೆಂದು ಹೇಳಿದ್ದು. ಹೀಗೆ ಹಿಂದೆ ಹೇಳಿದ ಸಕಲ ಕರ್ಮಗಳೂ ಕಾಯಿಕ-ವಾಚಿಕ-ಮಾನಸಿಕ ಕರ್ಮಜನ್ಯಗಳೆಂದು ತಿಳಿ. ಹೀಗೆ ತಿಳಿದು ಕರ್ಮಮಾಡಿದರೇನೇ ಮುಕ್ತಿಯನ್ನು ಹೊಂದುವೆ. ॥ ೩೨ ॥

ಹಿಂದೆ ಹೇಳಿದ ಯಜ್ಞದಲ್ಲಿ ಯಾವುದು ಶ್ರೇಷ್ಠವೆಂದು ಶಂಕಿಸಿದರೆ ಉತ್ತರವನ್ನೀಯುವನು. ದೇವತೋದ್ದೇಶದಿಂದ ದ್ರವ್ಯತ್ಯಾಗರೂಪ ದ್ರವ್ಯಯಜ್ಞಕ್ಕಿಂತ ಜ್ಞಾನರೂಪ ಯಾಗವು ಶ್ರೇಷ್ಠವು. ಏಕೆಂದರೆ, ಎಲೈ ಅರ್ಜುನನೇ! ಸರ್ವಕರ್ಮವೂ 'ಅಖಿಲಂ' ಎಂದರೆ 'ಸಮಂತಾತ್' ಅತ್ಯಲ್ಪವಾಗಿದ್ದರೂ ಜ್ಞಾನವು ಉದಿಸಿದರೆ ಅದು ಪರಿಸಮಾಪಿತವಾಗುತ್ತದೆ; ಸಫಲವಾಗುತ್ತದೆಂದರ್ಥ. ॥ ೩೩ ॥

ಆದಕಾರಣ ಕರ್ಮಯಜ್ಞಕ್ಕಿಂತ ಅಧಿಕವಾದ ಜ್ಞಾನವನ್ನು ಸಂಪಾದಿಸಿಕೊ ಎಂದು ಅಪ್ಪಣೆಕೊಡುತ್ತಾನೆ. ಜ್ಞಾನದಿಂದಲೇ ಕರ್ಮವು ಫಲವತ್ತಾಗುವ ಕಾರಣ ಜ್ಞಾನಿಗಳಿಗೆ ನಮಸ್ಕಾರವನ್ನು ಮಾಡಿ ಸೇವೆಯನ್ನೂ ಪ್ರಶ್ನೆಯನ್ನೂ ಮಾಡಿ ಅವರಿಂದ ತಿಳಿಯಲು ಯೋಗ್ಯವಾದ ಪ್ರಮೇಯವನ್ನು ತಿಳಿದುಕೊ. ತತ್ತ್ವವನ್ನು ತಿಳಿದುಕೊಂಡ ಜ್ಞಾನಿಗಳು ನಿನ್ನ ಸೇವೆಯಿಂದ ಜ್ಞಾನಜನಕವಾದ ಶಾಸ್ತ್ರವನ್ನು ಉಪದೇಶಿಸುವರು. ಇಲ್ಲಿ ಹಿಂದು ಮುಂದಿನ ಗ್ರಂಥವನ್ನು ಪರಿಶೋಧಿಸುವಾಗ ಕೃಷ್ಣನು ಉಪದೇಶಾರ್ಥವಾಗಿಯೇ ಹೊರಟವನಾದ ಪ್ರಯುಕ್ತ ಮುಂದೆ ವಿಸ್ತಾರವಾಗಿ ತಾನು ಉಪದೇಶವನ್ನು ಕೊಡುವ ಕಾರಣವೂ ಜ್ಞಾನಿಗಳು ಉಪದೇಶಿಸುತ್ತಾರೆಂದು ಹೇಳಿದರೆ ಜ್ಞಾನಿಯಾದ ನಾನು ಉಪದೇಶಿಸುವೆನೆಂದೇ ಅರ್ಥವು. ॥ ೩೪ ॥

ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।
ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ ೩೫ ॥
ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।
ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬ ॥
ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ ಕುರುತೇಽರ್ಜುನ ।
ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇ ತಥಾ ॥ ೩೭ ॥
ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।
ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮ ॥

---

ಈಗ ಮುಂದೆ ಉಪದೇಶಿಸುವ ಜ್ಞಾನವನ್ನು ಸ್ತುತಿಸುವನು. ನಾನು ಮುಂದೆ ಉಪದೇಶಿಸುವ ವಿಷಯವನ್ನು ತಿಳಿದುಕೊಂಡು ಇನ್ನೊಮ್ಮೆ ಪ್ರಥಮಾಧ್ಯಾಯದಲ್ಲಿ ಹೇಳಿದ ರೀತಿಯಿಂದ ನೀನು ಬಂಧುವಿಷಯಕವಾದ ಮೋಹವನ್ನು ಹೊಂದುವುದಿಲ್ಲ. ಎಲೈ ಪಾಂಡುತನಯನೇ, ನನ್ನಿಂದ ಉಪದೇಶಹೊಂದುವ ಜ್ಞಾನದಿಂದ ಸರ್ವವ್ಯಾಪ್ತನಾದ ನನ್ನಲ್ಲಿ, ಸರ್ವಭೂತಗಳನ್ನು ತಿಳಿ. ನಾನು ವ್ಯಾಪ್ತನಾಗಿದ್ದ ಕಾರಣವೇ ಸರ್ವ ಭೂತಗಳೂ ನನ್ನನ್ನು ಆಶ್ರಯಿಸಿಕೊಂಡಿದ್ದವೆಂದು ತಿಳಿಯುವೆ. ॥ ೩೫ ॥

ಪಾಪಮಾಡುವವರಿಗಿಂತ ಅಧಿಕವಾಗಿ ಪಾಪಮಾಡುವವನಾಗಿದ್ದರೂ ಅಂತಹ ಸರ್ವ ಪಾಪಗಳನ್ನು ಜ್ಞಾನರೂಪವಾದ ನಾವೆಯಿಂದ ದಾಟುವೆ. ॥ ೩೬ ॥

ಹೇಗೆ ಚೆಳ್ಳೀ ಪ್ರಕಾಶಮಾನವಾದ ಅಗ್ನಿಯು ಕಟ್ಟಿಗೆಗಳನ್ನು ಭಸ್ಮವಾಗಿ ಮಾಡುತ್ತದೋ, ಹಾಗೆಯೇ ಬೆಂಕಿಯಂತಿರುವ ಜ್ಞಾನವು ನಿನ್ನ ಸರ್ವಕರ್ಮ (ಅಪ್ರಾರಬ್ಧಕರ್ಮ)ಗಳನ್ನು ಸುಟ್ಟು ಬೂದಿಯನ್ನಾಗಿ ಮಾಡುತ್ತದೆ. ॥೩೭॥

ಈ ಜ್ಞಾನದಿಂದ ಸದೃಶವಾದ ವಸ್ತು ಪಾವನವಾದುದು ಈ ಜಗತ್ತಿನಲ್ಲಿ ಬೇರೊಂದಿಲ್ಲ. ಇಂತಹ ಜ್ಞಾನವನ್ನು ಸಿದ್ಧವಾದ ಜ್ಞಾನೋಪಾಯವುಳ್ಳ ಮನುಷ್ಯನು ತನ್ನಲ್ಲಿ ಬಹುಕಾಲದಿಂದ ಹೊಂದುತ್ತಾನೆ. ಆದುದರಿಂದ ಇದು ಪ್ರಶಸ್ತವೆಂಬ ಅಭಿಪ್ರಾಯವು. ॥ ೩೮ ॥

ಶ್ರದ್ಧಾವಾನ್ ಲಭತೇ ಜ್ಞಾನಂ ಮತ್ಪರಃ ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೩೯ ॥

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।
ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥

ಯೋಗಸನ್ನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।
ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧ ॥

---

ಜ್ಞಾನದ ಅಂತರಂಗಸಾಧನವನ್ನೂ ಫಲವನ್ನೂ ಶ್ರೀಕೃಷ್ಣನು ಹೇಳುತ್ತಾನೆ. ಈ ಜ್ಞಾನವನ್ನು ಆಸ್ತಿಕ್ಯಬುದ್ಧಿಯುಳ್ಳವನೂ, ನನ್ನಲ್ಲಿ ಭಕ್ತಿಯುಳ್ಳವನೂ, ಜಿತೇಂದ್ರಿಯನೂ ಆಗಿರುವವನು ಹೊಂದುವನು. ಇಂತಹ ಜ್ಞಾನವನ್ನು ಹೊಂದಿ ಸ್ವಲ್ಪ ಕಾಲಾನಂತರದಲ್ಲಿಯೇ ಮೋಕ್ಷರೂಪವಾದ ಪರಶಾಂತಿಯನ್ನೂ ಹೊಂದುತ್ತಾನೆ. ॥ ೩೯ ॥

ಇಂತಹ ಜ್ಞಾನವಿಲ್ಲದವನಿಗೆ ಶ್ರೀಕೃಷ್ಣನು ಅನಿಷ್ಟವನ್ನು ನಿರೂಪಿಸುತ್ತಾನೆ. ಅಜ್ಞನು ಎಂದರೆ ಜ್ಞಾನವಿಲ್ಲದವನೂ, ಆಸ್ತಿಕ್ಯಬುದ್ಧಿಶೂನ್ಯನೂ ಮತ್ತು ತತ್ತ್ವದಲ್ಲಿ ಸಂಶಯವುಳ್ಳವನೂ ನರಕರೂಪವಾದ ನಾಶವನ್ನು ಹೊಂದುತ್ತಾನೆ. ಇಂತಹ ಸಂಶಯವುಳ್ಳವನಿಗೆ ಈ ಮಾನುಷಲೋಕವೂ ಇಲ್ಲ, ಸ್ವರ್ಗಾದಿ ಪರಲೋಕವೂ ಇಲ್ಲ. ಆತನಿಗೆ ಸುಖವೇ ಇಲ್ಲವೆಂದು ಅಭಿಪ್ರಾಯವು. ॥ ೪೦ ॥

ಹಿಂದೆ ಹೇಳಿದ ಜ್ಞಾನದ ಫಲವನ್ನು ವಿಶದೀಕರಿಸುವನು—ಎಲೈ ಅರ್ಜುನನೆ! ಪರಮಾತ್ಮನಲ್ಲಿ ಮನಸ್ಸನ್ನಿಟ್ಟು ಸಕಲ ಕರ್ಮಗಳನ್ನು ಪರಮಾತ್ಮನಿಗೆ ಅರ್ಪಿಸುವ ಮತ್ತು ಜ್ಞಾನದಿಂದ ತತ್ತ್ವವಿಷಯದಲ್ಲಿ ಸಂಶಯವನ್ನು ಪರಿಹರಿಸಿಕೊಂಡ ಪರಮಾತ್ಮಭಕ್ತನನ್ನು ಕರ್ಮಗಳು ಬಂಧಿಸುವುದಿಲ್ಲ; ಆತನು ಮುಕ್ತನಾಗುತ್ತಾನೆ. ॥ ೪೧ ॥

ಈ ವರೆಗೆ ಮಾಡಿದ ಕರ್ಮಕರ್ತವ್ಯತ್ವ ನಿರೂಪಣವನ್ನು ಇಲ್ಲಿ ಮುಗಿಸುವನು. ಎಲೈ ಭರತಕುಲೋತ್ಪನ್ನನಾದ ಪಾರ್ಥನೆ! ಹಿಂದೆ ಹೇಳಿದ ರೀತಿ

ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾಽಽತ್ಮನಃ ।
ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥

॥ ಇತಿ ಚತುರ್ಥೋಽಧ್ಯಾಯಃ ॥

---

ಯಲ್ಲಿ ಜ್ಞಾನೋಪಾಯದ ಅನುಷ್ಠಾನದಿಂದ ಇಷ್ಟವೂ, ಅನನುಷ್ಠಾನದಿಂದ ಅನಿಷ್ಟವೂ ಇರುವುದರಿಂದ ನಿನ್ನ ಹೃದಯದಲ್ಲಿರುವ ಅಜ್ಞಾನದಿಂದುಂಟಾದ ತತ್ತ್ವವಿಷಯಕ ಸಂಶಯವನ್ನು ಜ್ಞಾನವೆಂಬ ಖಡ್ಗದಿಂದ ಛೇದಿಸಿ, ಜ್ಞಾನಕ್ಕೆ ಉಪಾಯರೂಪವಾದ ಕರ್ಮವನ್ನು ಮಾಡು; ಅದಕ್ಕೆ ಉದ್ಯುಕ್ತನಾಗು. ॥ ೪೨ ॥

# ಪಂಚಮೋಽಧ್ಯಾಯಃ

॥ ಅರ್ಜುನ ಉವಾಚ ॥

ಸನ್ನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।
ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥

॥ ಶ್ರೀಭಗವಾನುವಾಚ ॥

ಸನ್ನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।
ತಯೋಸ್ತು ಕರ್ಮಸನ್ನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥

---

ಅರ್ಜುನನು ಹಿಂದೆ 'ಯೋಗಸನ್ನ್ಯಸ್ತಕರ್ಮಾಣಂ' ಎಂದು ಹೇಳಿದ ಸನ್ನ್ಯಾಸವು ಯತ್ಯಾಶ್ರಮ ವಿಷಯವೆಂದೂ, 'ಯೋಗಮಾತಿಷ್ಠ' ಎಂಬಲ್ಲಿ ಹೇಳಿದ ಯೋಗವು ಗೃಹಸ್ಥವಿಷಯವೆಂದೂ ತಿಳಿದುಕೊಂಡು ಯತಿಯು ಜ್ಞಾನಮಾತ್ರಾಧಿಕಾರಿಯು, ಗೃಹಸ್ಥನು ಕರ್ಮಮಾತ್ರಾಧಿಕಾರಿಯು. ಆದುದರಿಂದ ಯೋಗ ಮತ್ತು ಸನ್ನ್ಯಾಸ ಇವೆರಡು ಒಬ್ಬನಲ್ಲಿ ಕೂಡದೆ ಇದ್ದುದರಿಂದ ಅವುಗಳಲ್ಲಿ ಯಾವುದು ಅಧಿಕವಾದುದು ಹೇಳು; ಅದನ್ನು ಸ್ವೀಕರಿಸುವೆನೆಂದು ಶ್ರೀಕೃಷ್ಣನಲ್ಲಿ ಪ್ರಶ್ನೆಮಾಡುವನು. ॥ ೧ ॥

ಶ್ರೀಕೃಷ್ಣನು ಸನ್ನ್ಯಾಸಶಬ್ದಾರ್ಥವು ಹಿಂದೆ ಅರ್ಜುನನ ಅಭಿಪ್ರಾಯದಂತೆ ಯತ್ಯಾಶ್ರಮವಲ್ಲ. ಕಾಮಾದಿವರ್ಜನರೂಪವಾದುದು. ಯೋಗಶಬ್ದಾರ್ಥವೂ ಗೃಹಸ್ಥಧರ್ಮವಲ್ಲ. ಮತ್ತು ಕರ್ಮಾನುಷ್ಠಾನರೂಪವಾದುದು. ಆದುದರಿಂದ ಇವೆರಡೂ, ಒಬ್ಬನಲ್ಲಿರಲು ಯೋಗ್ಯವಾದ ಕಾರಣ ನಿನ್ನ ಪ್ರಶ್ನೆಯು ವ್ಯರ್ಥವೆಂದು ಅಭಿಪ್ರಾಯವುಳ್ಳವನಾಗಿ ಹಿಂದೆ ನಿರೂಪಿತವಾದ ಸನ್ನ್ಯಾಸ ಮತ್ತು ಯೋಗ ಇವೆರಡೂ ಪುರುಷಾರ್ಥ ಸಾಧಕಗಳೆಂದೂ, ಅವುಗಳಲ್ಲಿ ಸನ್ನ್ಯಾಸದಿಂದ ಭಗವದರ್ಪಣ ಬುದ್ಧಿಯಿಂದ ಮಾಡುವ ಕರ್ಮಾನುಷ್ಠಾನರೂಪವಾದ ಯೋಗವು ಶ್ರೇಷ್ಠವೆಂದೂ ಇಲ್ಲಿ ಆಜ್ಞಾಪಿಸುವನು. ॥ ೨ ॥

ಸನ್ನ್ಯಾಸ ಶಬ್ದಾರ್ಥವು ಯತ್ಯಾಶ್ರಮವಲ್ಲವೆಂಬೀ ಅಭಿಪ್ರಾಯದಿಂದ ಹಿಂದೆ ಹೇಳಿದ ಸನ್ನ್ಯಾಸ ಶಬ್ದಾರ್ಥವನ್ನೇ ಪುನಃ ಜ್ಞಾಪನಮಾಡಿ ಕೊಡು

ಜ್ಞೇಯಃ ಸ ನಿತ್ಯಸನ್ನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।
ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ ॥
ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।
ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥ ೪ ॥
ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।
ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥
ಸನ್ನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।
ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥ ೬ ॥

---

ವನು. ಹೇ ಪರಾಕ್ರಮಿ ಅರ್ಜುನನೆ! ದ್ವೇಷಾದಿಗಳನ್ನು ಬಿಟ್ಟು ಕಾಮ್ಯ ಕರ್ಮಪರಿತ್ಯಾಗದಿಂದ ಉಪಲಕ್ಷಿತವಾದುದು ಸನ್ನ್ಯಾಸವು ಎಂದು ತಿಳಿಯ ತಕ್ಕದ್ದು. ಇಂತಹ ಸನ್ನ್ಯಾಸದಿಂದ ಕೂಡಿದವನು ಅನಾಯಾಸದಿಂದ ಬಂಧಮುಕ್ತನಾಗುವನು. ಆದುದರಿಂದ ನೀನು ಕರ್ಮವನ್ನು ಬಿಡಬೇಡ ॥೩॥

ಜ್ಞಾನದಲ್ಲಿ ಸನ್ನ್ಯಾಸದಂತೆ ಕರ್ಮಯೋಗವೂ ಉತ್ತಮವೆಂದು ಶ್ರೀಕೃಷ್ಣನು ಸಮರ್ಥಿಸುವನು. ಹೇಗೆಂದರೆ ಸಾಂಖ್ಯಶಬ್ದಾರ್ಥವಾದ ಜ್ಞಾನವನ್ನೂ, ಭಗವದರ್ಪಣಬುದ್ಧ್ಯಾ ಮಾಡುವ ಕರ್ಮಾನುಷ್ಠಾನರೂಪ ಯೋಗವನ್ನೂ ಬಾಲಕರು ಎಂದರೆ ಅವಿವೇಕಿಗಳು ಪರಸ್ಪರ ಸಾಧ್ಯಸಾಧನ ಭಾವವುಳ್ಳವುಗಳೆಂದೆನ್ನುವುದಿಲ್ಲ. ಆದರೂ ಪಂಡಿತರು ಹಾಗೆ ಅಂಗೀಕರಿಸುವುದಿಲ್ಲ. ಹಿಂದೆ ತಿಳಿಸಿದ ಸನ್ನ್ಯಾಸವನ್ನಾಗಲೀ ಯೋಗವನ್ನಾಗಲೀ ಸರಿಯಾಗಿ ಅನುಷ್ಠಾನಮಾಡುವಾತನು ಎರಡರಿಂದಲೂ ಆಗುವ ಫಲಭಾಗಿಯೆಂದು ತಿಳಿಯುವರು. ॥ ೪ ॥

ಇದರಿಂದ ಸಾಂಖ್ಯ ಮತ್ತು ಯೋಗ ಇವೆರಡಕ್ಕೇ ಫಲಹೇತುತ್ವವನ್ನು ಹೇಳಿದಂತಾಯಿತೆಂದು ಇನ್ನೂ ಸ್ಪಷ್ಟವಾಗಿ ಶ್ರೀಕೃಷ್ಣನು ತನ್ನ ಅಭಿಪ್ರಾಯವನ್ನು ಸೂಚಿಸುವನು. ಜ್ಞಾನಿಗಳಿಂದ ಹೊಂದಲು ಯೋಗ್ಯವಾದ ಭಗವತ್ಸ್ವರೂಪವು ಕರ್ಮಿಗಳಿಂದಲೂ ಜ್ಞಾನದ್ವಾರಾ ಹೊಂದಲ್ಪಡುವುದು. ಆದುದರಿಂದ ಸಾಂಖ್ಯ ಮತ್ತು ಯೋಗವು ಒಂದೇ ಭಗವಜ್ಜ್ಞಾನಸಾಧನವಾಗಿ ಯಾರು ತಿಳಿಯುತ್ತಾನೋ ಅವನು ಜ್ಞಾನಿಯು. ॥ ೫ ॥

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।
ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥
ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।
ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥ ೮ ॥

---

ಶ್ರೀಕೃಷ್ಣನು ಹಿಂದೆ ತನಗಭಿಮತವಾದ ಸನ್ನ್ಯಾಸ ಶಬ್ದಾರ್ಥದ ಸ್ಮರಣೆಯನ್ನುಂಟುಮಾಡಿ ಸನ್ನ್ಯಾಸಕ್ಕೆ ಯೋಗದ ದೆಶೆಯಿಂದ ಅವರತ್ವದ ವಿಷಯದಲ್ಲಿ ಬಾಧಕವನ್ನು ಪರಿಹರಿಸಿ ಉತ್ತಮತ್ವದಲ್ಲಿ ಹೇತುವನ್ನು ಹೇಳುವನು. ಹಿಂದೆ ಹೇಳಿದ ಯೋಗಸಹಾಯವಿಲ್ಲದ ಸನ್ನ್ಯಾಸವು ಎಂದರೆ ಕೇವಲ ಕಾಮಾದಿ ವರ್ಜನವು ಪುರುಷಾರ್ಥಸಾಧನವಾಗಲಾರದ ಕಾರಣ ದುಃಖಕ್ಕೆ ಮಾತ್ರವೇ ಕಾರಣವಾಗುವುದು. ಯೋಗಯುಕ್ತನಾದ ಮುನಿಯು (ಸನ್ನ್ಯಾಸಿಯು) ಶೀಘ್ರವಾಗಿ ಬ್ರಹ್ಮನನ್ನು ತಿಳಿಯುವನು ಎಂದು ಅನ್ವಯ ವ್ಯತಿರೇಕದಿಂದ ಯೋಗಕ್ಕೆ ಉತ್ತಮತ್ವವನ್ನು ಅರ್ಜುನನಿಗೆ ತಿಳಿಸಿದನು ॥೬॥

ಹಿಂದೆ ಹೇಳಿದ ಸನ್ನ್ಯಾಸದಿಂದ ಕೂಡಿದ ಯೋಗಕ್ಕೆ ಪುರುಷಾರ್ಥ ಹೇತುತ್ವವನ್ನು ಶ್ರೀಕೃಷ್ಣನು ವಿಸ್ತರಿಸುವನು. ಕರ್ಮಯೋಗದಿಂದ ಕೂಡಿದ ಪರಿಶುದ್ಧವಾದ ಸ್ವಭಾವವುಳ್ಳ, ಆದುದರಿಂದಲೇ ಮನೋನಿಗ್ರಹವುಳ್ಳ ಜಿತೇಂದ್ರಿಯನು, ಎಂದರೆ ಸನ್ನ್ಯಾಸವುಳ್ಳವನು. ಸರ್ವಸ್ವಾಮಿಯಾದ ಪರಮಾತ್ಮನೇ ತನಗೆ ಸ್ವಾಮಿಯೆಂಬ ಜ್ಞಾನವುಳ್ಳವನು ಕರ್ಮಲೇಪವಿಲ್ಲದವನಾಗಿ ಮುಕ್ತನಾಗುವನು. ॥ ೭ ॥

'ಜ್ಞೇಯಃ ಸ' ಇತ್ಯಾದಿಯಿಂದ ವಿಸ್ತರಿಸಿ ನಿರೂಪಿಸಿದ ಸನ್ನ್ಯಾಸ ಶಬ್ದಾರ್ಥವನ್ನೇ ಪುನಃ ಎರಡು ಶ್ಲೋಕಗಳಿಂದ ವಿವರಿಸುವನು. 'ಯುಕ್ತಃ' ಕರ್ಮಯೋಗವನ್ನು ಆಚರಿಸುವ ತತ್ತ್ವಜ್ಞಾನಿಯು ನೋಡೋಣ ಕೇಳೋಣ ಮೊದಲಾದ ಸರ್ವೇಂದ್ರಿಯವ್ಯಾಪಾರವನ್ನು ಮಾಡಿದಾಗ್ಯೂ ತಾನು ಸ್ವಾತಂತ್ರ್ಯಾಭಿಮಾನರಹಿತನಾಗಿ ಮುಖ್ಯಕರ್ತೃ ಭಗವದರ್ಪಣ ಬುದ್ಧಿಯಿಂದ ಕೂಡಿ ತಾನು ಸ್ವತಂತ್ರನಾಗಿ ಏನನ್ನೂ ಮಾಡುವುದಿಲ್ಲವೆಂಬ

ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।
ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥೯॥

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦ ॥

ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।
ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽಽತ್ಮಶುದ್ಧಯೇ

---

ಬುದ್ಧಿಯನ್ನು ಹೊಂದುವುದೇ ಸನ್ನ್ಯಾಸವೆಂದೂ, ಇದೇ ಪುರುಷಾರ್ಥ ಹೇತುವೆಂದೂ ತಿಳಿಸುವನು. ॥ ೮, ೯ ॥

ಶ್ರೀಕೃಷ್ಣನು ಯೋಗಶಬ್ದಾರ್ಥವನ್ನು ಸ್ವಲ್ಪ ವಿವರಿಸಿಕೊಂಡು ಕರ್ಮಯೋಗಗಳಿಗೆ ಸಾಧನನಿಯಮವನ್ನು ತಿಳಿಸುವನು. 'ಸನ್ನ್ಯಾಸಸ್ತು' ಎಂಬ ಶ್ಲೋಕದಿಂದ ಸನ್ನ್ಯಾಸ ಮತ್ತು ಯೋಗಗಳು ಕೂಡಿಯೇ ಫಲ ಸಾಧನಗಳೆಂದು ತಿಳಿಸಿದುದರಿಂದ ನಿಯಮವನ್ನು ತಿಳಿಸಿದಂತಾಯಿತು. ಆದರೂ ಅದು ಔಪಚಾರಿಕವಲ್ಲವೆಂದು ತಿಳಿಸಲಿಕ್ಕಾಗಿ ಫಲೋಕ್ತಿಪೂರ್ವಕ ಉಭಯನಿಯಮಕ್ಕೆ ಸಾಧನತ್ವವನ್ನು ತಿಳಿಸುವನು. ಫಲಕಾಮನಾ ಇಲ್ಲದವನಾಗಿ ನನ್ನ ಶುಭಕ್ಕೋಸ್ಕರ ಸ್ವಪೂಜಾರೂಪವಾದ ಕರ್ಮವನ್ನು ಭಗವಂತನು ನನ್ನಿಂದ ಮಾಡಿಸುತ್ತಾನೆಂದು ತಿಳಿದು, ಕರ್ಮಗಳನ್ನು ಭಗವದಧೀನಕರ್ತೃಶಕ್ತಿಯುಳ್ಳವನಾಗಿ ಮಾಡುವವನು ಜಲಲೇಪವಿಲ್ಲದ ಕಮಲದಂತೆ ಕರ್ಮಲೇಪವಿಲ್ಲದವನಾಗಿ ಜ್ಞಾನದ್ವಾರಾ ಮುಕ್ತನಾಗುತ್ತಾನೆ. ॥೧೦॥

ಶ್ರೀಕೃಷ್ಣನು ಸನ್ನ್ಯಾಸ ಮತ್ತು ಯೋಗಗಳು ಕೂಡಿಯೇ ಫಲಹೇತುಗಳೆಂದುದಕ್ಕೆ ಆಚಾರವನ್ನು ಪ್ರಮಾಣವಾಗಿ ತಿಳಿಸುವನು. ಯೋಗಿಗಳೂ ಕೂಡ ಕಾಮಾಹಂಕಾರರಹಿತಗಳಾದ ಮನೋಬುದ್ಧಿಗಳಿಂದ ಕೂಡಿ ಹನ್ನೆರಡು ಇಂದ್ರಿಯಗಳಿಂದ ಜ್ಞಾನೋತ್ಪತ್ತಿಗಾಗಲೀ ಪಾಪಸಂಬಂಧ ನಾಶಾರ್ಥವಾಗಿಯಾಗಲೀ ಕರ್ಮವನ್ನು ಮಾಡುತ್ತಾರೆ. ಕಾಮಾಹಂಕಾರರಾಹಿತ್ಯವನ್ನು ಸೂಚಿಸಿದುದರಿಂದ ಸನ್ನ್ಯಾಸವನ್ನೂ ಕರ್ಮಕರಣದಿಂದ ಯೋಗವನ್ನೂ ಸೂಚಿಸಿದಂತಾಯಿತು. ॥ ೧೧ ॥

ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।
ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥
ಸರ್ವಕರ್ಮಾಣಿ ಮನಸಾ ಸನ್ನ್ಯಸ್ಯಾಽಽಸ್ತೇ ಸುಖಂ ವಶೀ ।
ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥
ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪ ॥

---

ಯೋಗಸನ್ನ್ಯಾಸಗಳು ಕಲೆತು ಮೋಕ್ಷಸಾಧಕಗಳೆಂಬ ನಿಯಮವನ್ನು ತಿಳಿಸಿ ಇವೆರಡನ್ನು ಹೊರತು ಬೇರೆ ಫಲಸಾಧಕವಿಲ್ಲವೆಂದು ತಿಳಿಸಲಿಕ್ಕಾಗಿ ಇವುಗಳುಳ್ಳವಂಗೆ ಮೋಕ್ಷವು, ಇಲ್ಲದವಂಗೆ ಸಂಸಾರವು ಫಲವೆಂದು ಶ್ರೀಕೃಷ್ಣನು ತಿಳಿಸುವನು. ಫಲೇಚ್ಛಾರಹಿತನಾದ ಯೋಗಿಯು ಭಗವದರ್ಪಣಬುದ್ಧಿಯಿಂದ ಕರ್ಮಮಾಡುವವನಾಗಿ ಸ್ವಾಭಾವಿಕವಾದ ಸ್ವರೂಪಾನಂದಾವಿರ್ಭಾವರೂಪ ಮೋಕ್ಷವನ್ನು ಹೊಂದುವನು. ಫಲಕಾಮನಾದಿಂದ ಕರ್ಮಮಾಡುವಾತನು ಯೋಗರಹಿತನೂ, ಕ್ಷುದ್ರಫಲದಲ್ಲಿ ಆಸಕ್ತನೂ ಆದವನಾಗಿ ಸಂಸಾರವನ್ನು ಅನುಭವಿಸುವನು. ॥ ೧೨ ॥

'ನೈವ ಕಿಂಚಿತ್ಕರೋಮಿ' ಇತ್ಯಾದಿಯಿಂದ ಕರ್ತೃತ್ವಾಭಿಮಾನತ್ಯಾಗರೂಪವಾದ ಸನ್ನ್ಯಾಸ ಸ್ವರೂಪವನ್ನು ನಿರೂಪಿಸಿ, ಕಾರಯಿತೃತ್ವಾಭಿಮಾನರಾಹಿತ್ಯರೂಪವಾದ ಸನ್ನ್ಯಾಸ ಶಬ್ದಾರ್ಥವನ್ನು ವಿವರಿಸುತ್ತಾನೆ ಜಿತೇಂದ್ರಿಯನಾದವನು ತಾನೇ ಮಾಡುವವನು, ಮತ್ತು ಮಾಡಿಸುವವನೆಂಬ ಕರ್ತೃತ್ವ–ಕಾರಯಿತೃತ್ವಾಭಿಮಾನರಹಿತನಾಗಿ ಕರ್ಮವನ್ನು ಮಾಡುತ್ತಾ, ಕಣ್ಣು–ಕಿವಿ–ಮೂಗುಗಳ ಆರು ದ್ವಾರಗಳು, ಮುಖ-ಪಾಯು-ಉಪಸ್ಥವೆಂಬ ಮೂರು ದ್ವಾರಗಳು ಕೂಡಿ ಒಂಭತ್ತು ದ್ವಾರಗಳುಳ್ಳ ದೇಹದಲ್ಲಿ ಕರ್ಮಲೇಪವಿಲ್ಲದೆ ಸುಖವಾಗಿರುತ್ತಾನೆ. ಇದರಿಂದ ಕರ್ತೃತ್ವ ಕಾರಯಿತೃತ್ವಾಭಿಮಾನತ್ಯಾಗವು ಸನ್ನ್ಯಾಸ ಶಬ್ದಾರ್ಥವೆಂದು ಸೂಚಿತವಾಯಿತು. ॥ ೧೩ ॥

ಜೀವನಿಗೆ ಸ್ವಾತಂತ್ರ್ಯವಿಲ್ಲದಿದ್ದರೂ ಈಶ್ವರನಿಂದ ಕೊಡಲ್ಪಟ್ಟ ಸ್ವಾತಂತ್ರ್ಯವು ಕ್ರಿಯೆಯಲ್ಲಿಯೂ ತಜ್ಜನ್ಯ ಅದೃಷ್ಟ ಮತ್ತು ಕರ್ಮಫಲಪ್ರಾಪ್ತಿಯಲ್ಲಿಯೂ ಇದ್ದುದರಿಂದ 'ಬ್ರಹ್ಮಣ್ಯಾಧಾಯ ಕರ್ಮಾಣಿ' ಎಂದು

ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ ।
ಅಜ್ಞಾನೇನಾಽಽವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥೧೫॥
ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥ ೧೬ ॥

---

ಸರ್ವ ಕರ್ಮಗಳಿಗೂ ಕೇವಲ ತದಧೀನತ್ವ ಜ್ಞಾನವು ಯುಕ್ತವಲ್ಲವೆಂಬ ಆಶಂಕೆಯನ್ನು ಪರಿಹರಿಸುವನು. ಈಶ್ವರನು ಜೀವನಿಗೆ ಅಗ್ನಿಹೋತ್ರಾದಿ ಕ್ರಿಯೆಯಲ್ಲಿ ಕ್ರಿಯಾಜನ್ಯ ಅದೃಷ್ಟ ಮತ್ತು ಕ್ರಿಯಾಫಲದಲ್ಲಿಯೂ ಸ್ವಾತಂತ್ರ್ಯವನ್ನು ಸೃಷ್ಟಿಸಲಿಲ್ಲ. ಪ್ರವೃತ್ತಿಯಾದರೂ 'ಸ್ವಭಾವಸ್ತು ಪ್ರವರ್ತತೇ'—ಸ್ವಭಾವನಾದ ಎಂದರೆ ಸ್ವತಂತ್ರನಾದ ಭಗವಂತನಿಂದಲೇ ಆಗುತ್ತದೆ. ॥ ೧೪ ॥

ಪರಮಾತ್ಮನೇ ಕ್ರಿಯಾದಿ ಸರ್ವಕರ್ತನಾದರೆ ಕರ್ಮಲೇಪವೂ ಆತನಿಗೆ ಬರಲೆಂಪರೆ ಶ್ರೀಕೃಷ್ಣನು ಉತ್ತರವನ್ನು ಹೇಳುವನು. ಈಶ್ವರನು ವಿಭುವಾದುದರಿಂದ ಎಂದರೆ ಸ್ವತಂತ್ರನಾದುದರಿಂದಲೇ ಯಾವುದೊಂದು ಕ್ರಿಯೆಯ ಮತ್ತು ಕ್ರಿಯಾಜನ್ಯವಾದ ಪುಣ್ಯಪಾಪದ ಲೇಪವುಳ್ಳವನಾಗುವುದಿಲ್ಲ. ಹೀಗೆ ಸ್ವತಂತ್ರನಾದ ಈಶ್ವರನು ಸರ್ವತ್ರ ಇರುವವನಾದರೂ ಜೀವರಿಗೇಕೆ ತೋರುವುದಿಲ್ಲವೆಂಬ ಪ್ರಶ್ನೆಗೆ ಉತ್ತರವನ್ನು ಕೊಡುತ್ತಾನೆ. ಜೀವರ ಜ್ಞಾನವು ಅಜ್ಞಾನದಿಂದ ಕೂಡಿರುವ ಕಾರಣ ಅವರು ಮೋಹವುಳ್ಳವರಾಗುತ್ತಾರೆ. ಆದುದರಿಂದ ಭಗವಂತನನ್ನು ತಿಳಿಯುವುದಿಲ್ಲ. ॥ ೧೫ ॥

ಜ್ಞಾನವು ಅಜ್ಞಾನದಿಂದ ಆವೃತವಾಗುವುದಾದರೆ ಅಂತಹ ಜ್ಞಾನವು ಅಜ್ಞಾನಕ್ಕೆ ನಾಶಕವಾಗಲಾರದು ಜ್ಞಾನೇತರವಾದುದು ಅಜ್ಞಾನಕ್ಕೆ ನಾಶಕವಾಗುವುದಿಲ್ಲ ಅಜ್ಞಾನಕ್ಕೆ ಯಾವುದೂ ನಾಶಕವೇ ಇಲ್ಲವೆಂದಾದ ಮೇಲೆ ಸನ್ನ್ಯಾಸ ಮತ್ತು ಯೋಗಗಳು ವ್ಯರ್ಥವೆಂದು ಶಂಕಿಸಲು ಪರಿಹರಿಸುತ್ತಾನೆ. ಜ್ಞಾನವು ಎರಡು ವಿಧವಾದುದು. ವೃತ್ತಿಜ್ಞಾನ ಮತ್ತು ಸ್ವರೂಪಜ್ಞಾನವೆಂದು. ಅವುಗಳಲ್ಲಿ ಸ್ವರೂಪಜ್ಞಾನವು ಅಜ್ಞಾನದಿಂದ ಆವೃತವಾದುದು; ಅದು ಅಜ್ಞಾನನಾಶಕವಲ್ಲ ವೃತ್ತಿರೂಪವಾದ ಪರೋಕ್ಷಜ್ಞಾನದಿಂದ ಅಜ್ಞಾನವು ಶಿಥಿಲವಾಗಲು ಭಗವದಪರೋಕ್ಷಜ್ಞಾನವು ಆದಿತ್ಯನಂತೆ ಬ್ರಹ್ಮ

ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।
ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭ ॥
ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ೧೮ ॥
ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।
ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ ಬ್ರಹ್ಮಣಿ ತೇ ಸ್ಥಿತಾಃ ॥

---

ನನ್ನು ಪ್ರಕಾಶಪಡಿಸುತ್ತದೆ. ಅದುಕಾರಣ ಯೋಗಸನ್ನ್ಯಾಸಗಳಿಗೆ ವೈಯರ್ಥ್ಯವಿಲ್ಲ. ॥ ೧೬ ॥

ಅಪರೋಕ್ಷಜ್ಞಾನಕ್ಕೆ ಅಂತರಂಗಸಾಧನವನ್ನು ನಿರೂಪಿಸುವನು. ಯಾವಾಗಲೂ ಪರಮಾತ್ಮನೇ ತಮಗೆ ಸ್ವಾಮಿಯೆಂದೂ, ಅವನೇ ಮುಖ್ಯಾಶ್ರಯನೆಂದೂ, ಅಚಂಚಲವಾದ ಬುದ್ಧಿಯುಳ್ಳವರು ತಮ್ಮ ಇಂತಹ ಮುಖ್ಯ ಸಾಧನವಾದ ಪರೋಕ್ಷಜ್ಞಾನದಿಂದ ಅಪರೋಕ್ಷಜ್ಞಾನವನ್ನು ಹೊಂದಿ ಸರ್ವಪಾಪವಿಮುಕ್ತರಾಗಿ ಪುನರಾವೃತ್ತಿರಹಿತವಾದ ಮೋಕ್ಷಕ್ಕೆ ಭಾಗಿಗಳಾಗುತ್ತಾರೆ. ॥ ೧೭ ॥

ಅಪರೋಕ್ಷಜ್ಞಾನಕ್ಕೆ ಪರಮಾತ್ಮನ ಸ್ವರೂಪಗಳ ಸಾಮ್ಯದರ್ಶನವೂ ಕಾರಣವೆಂದು ನಿರೂಪಿಸುವನು. ಪರೋಕ್ಷಜ್ಞಾನಿಗಳು ವಿದ್ಯಾವಿನಯಾದಿಗಳಿಂದ ಕೂಡಿದ ಬ್ರಾಹ್ಮಣರೇ ಮೊದಲಾದ ವಿಷಮಪ್ರಾಣಿಗಳಲ್ಲಿಯೂ ಇರುವ ಪರಮಾತ್ಮನ ರೂಪಗಳನ್ನು ಗುಣಪೂರ್ತಿ ಮತ್ತು ದೋಷಾಭಾವ ಇವುಗಳಲ್ಲಿ ಸಮವಾಗಿ, ಎಂದರೆ ಸರ್ವತ್ರ ಇರುವ ಭಗವದ್ರೂಪಗಳೂ, ಗುಣಪರಿಪೂರ್ಣಗಳೂ ಮತ್ತು ನಿರ್ದುಷ್ಟಗಳೂ ಎಂದು (ನೋಡುವರು) ತಿಳಿಯುವರು. ॥ ೧೮ ॥

ಹಿಂದೆ ಹೇಳಿದ ಸಾಮ್ಯದರ್ಶನಕ್ಕೆ ಪ್ರಾಶಸ್ತ್ಯಬೋಧನಾರ್ಥವಾಗಿ ಶ್ರೀಕೃಷ್ಣನು ಅಂತಹ ಜ್ಞಾನಿಯನ್ನು ಸ್ತುತಿಸುವನು. ಯಾರು ಭಗವದ್ರೂಪಗಳಿಗೆ ಸಾಮ್ಯದಲ್ಲಿ ಮನಸ್ಸನ್ನಿಟ್ಟಿರುವರೋ, ಅಂತಹರಿಂದ ಇದೇ ಜನ್ಮದಲ್ಲಿ ಸಂಸಾರವು ಜಯಿಸಲ್ಪಟ್ಟಂತೆಯೇ ಇರುತ್ತದೆ. ಸಮನೆಂದರೆ ದೋಷಲೇಶದಿಂದಲೂ ರಹಿತನಾದ ಲಕ್ಷ್ಮೀಸಮೇತನಾದ ಪರಬ್ರಹ್ಮನೇ ಆಗಿರು

ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಮ್ ।
ಸ್ಥಿರಬುದ್ಧಿರಸಮ್ಮೂಢೋ ಬ್ರಹ್ಮವಿದ್ ಬ್ರಹ್ಮಣಿ ಸ್ಥಿತಃ ॥ ೨೦ ॥
ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।
ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥ ೨೧ ॥
ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ ೨೨ ॥

---

ತ್ತಾನೆ. ಹಾಗೆ ತಿಳಿಯುವಿಕೆಯು ಶ್ರೇಷ್ಠವಾದುದರಿಂದ ಅಂತಹ ಜ್ಞಾನಿಯು ಬ್ರಹ್ಮಜ್ಞಾನಿಯಾಗಿರುವನು. ॥ ೧೯ ॥

ಹಿಂದೆ ನಿರೂಪಿಸಿದ ಸನ್ನ್ಯಾಸವನ್ನು ಶ್ರೀಕೃಷ್ಣನು ಪುನಃ ವಿಸ್ತಾರವಾಗಿ ನಿರೂಪಿಸುವನು. ಲೌಕಿಕ ಸುಖಸಾಧನವನ್ನು ಹೊಂದಿ ಅತ್ಯಾನಂದವನ್ನು ಹೊಂದಬಾರದು; ದುಃಖಸಾಧನವನ್ನು ಹೊಂದಿ ಅಧೈರ್ಯವನ್ನು ತಾಳಬಾರದು; ಇದೇ ಸನ್ನ್ಯಾಸವು. ಇದಕ್ಕೆ ಸಾಧನವು ಬುದ್ಧಿಯ ಸ್ಥೈರ್ಯವು. ಇದಕ್ಕೆ ಸುಖದುಃಖಸಾಧನಪ್ರಾಪ್ತಿ ಪರಿಹಾರದಲ್ಲಿ ಜೀವನೇ ಸ್ವತಂತ್ರನೆಂಬ ಮಿಥ್ಯಾಜ್ಞಾನವಿಲ್ಲದಿರುವಿಕೆಯೇ ಕಾರಣವು. ಇದಕ್ಕೆ ಕಾರಣವು ಬ್ರಹ್ಮಜ್ಞಾನವು ಮತ್ತು ಆತನ ನಿರಂತರ ಸ್ಥಿತಿಯು. ॥ ೨೦ ॥

'ಯೋಗಯುಕ್ತೋ ಮುನಿರ್ಬ್ರಹ್ಮ' ಎಂದು ಹಿಂದೆ ಆರನೇ ಶ್ಲೋಕದಲ್ಲಿ ಹೇಳಿದ ಯೋಗರೂಪ ಸನ್ನ್ಯಾಸಕ್ಕೆ ಮೋಕ್ಷಕಾರಣತ್ವವನ್ನು ಸ್ಪಷ್ಟಪಡಿಸುತ್ತಾನೆ. ಸಂಸಾರದಲ್ಲಿರುವಾತನೂ ಕೂಡ ಬಾಹ್ಯ ಎಂದರೆ ಲೌಕಿಕ ಶಬ್ದಾದಿ ವಿಷಯಗಳಲ್ಲಿ ಆಸಕ್ತವಾಗದಿರುವ ಮನಸ್ಸಿನಿಂದ ಅಲ್ಪಧ್ಯಾನವನ್ನು ಮಾಡುತ್ತಾ ತನ್ನ ಸ್ವರೂಪಸುಖವನ್ನು ಅನುಭವಿಸುವನು. ಮಹತ್ತಾದ ಧ್ಯಾನದಿಂದ ಕೂಡಿದವನು ನಾಶವಿಲ್ಲದ ಮೋಕ್ಷದಲ್ಲಿ ಲಭಿಸುವ ಸುಖವನ್ನು ಅನುಭವಿಸುವನು ಎಂಬುದು ಕೈಮುತ್ಯನ್ಯಾಯಸಿದ್ಧವು. ॥ ೨೧ ॥

ಕಾಮಾದಿ ತ್ಯಾಗರೂಪವಾದ ಸನ್ನ್ಯಾಸದ ಉದ್ದಿಶ್ಯ ಕಾಮಭೋಗವನ್ನು ನಿಂದಿಸುವನು. ಲೌಕಿಕ ವಿಷಯಾನುಭವದಿಂದುಂಟಾಗುವ ಸುಖಗಳು ಯಾವತ್ತೂ ದುಃಖಕಾರಣಗಳೇ ಆಗಿದ್ದು ಉತ್ಪತ್ತಿ-ನಾಶವುಳ್ಳವುಗಳೇ

ಶಕ್ನೋತೀಹೈವ ಯಃ ಸೋಢುಂ ಪ್ರಾಕ್ ಶರೀರವಿಮೋಕ್ಷಣಾತ್ ।
ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥
ಯೋಽಂತಃಸುಖೋಽಂತರಾರಾಮಸ್ತಥಾಽಂತಜ್ಯೋ೯ತಿರೇವ ಯಃ।
ಸ ಯೋಗೀ ಬ್ರಹ್ಮ ನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪ ॥
ಲಭಂತೇ ಬ್ರಹ್ಮ ನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।
ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫ ॥

---

ಆಗಿರುವುವು. ಆದುದರಿಂದ ಜ್ಞಾನಿಯಾದವನು ವೈಷಯಿಕಭೋಗದಲ್ಲಿ ಆಸಕ್ತನಾಗುವುದಿಲ್ಲ. ॥ ೨೨ ॥

ಹಿಂದೆ ಹೇಳಿದ ಸನ್ನ್ಯಾಸದ ಉದ್ದಿಶ್ಯ ಕಾಮಭೋಗ ತ್ಯಾಗವನ್ನು ಸ್ತುತಿಸುವನು. ಯಾವ ಮನುಜನು ಈ ಮನುಷ್ಯ ದೇಹದಲ್ಲಿಯೇ ದೇಹ ಪರಿತ್ಯಾಗದ ಮೊದಲೇ ಕಾಮ-ಕ್ರೋಧಾದಿಗಳಿಂದುಂಟಾಗುವ ಮನೋವೇಗವನ್ನು ಜಯಿಸುವನೋ, ಅವನೇ ಜ್ಞಾನೋಪಾಯವಾದ ಯೋಗ ಉಳ್ಳವನು, ಅವನೇ ಸುಖಿಯಾಗುವನು. ಮನುಷ್ಯದೇಹದಲ್ಲಿಯೇ ಕಾಮಾದಿಗಳನ್ನು ಜಯಿಸಲು ಶಕ್ಯವಾದುದರಿಂದ ಈಗಲೇ ಪ್ರಯತ್ನವನ್ನು ಮಾಡಬೇಕೆಂದು ತಿಳಿಸಲು ಶ್ರೀಕೃಷ್ಣನು 'ಇಹೈವ' ಎಂದು ಹೇಳಿದುದು. ॥ ೨೩ ॥

ಶ್ರೀಕೃಷ್ಣನು ಮೇಲಿನ ಶ್ಲೋಕಗಳಿಂದ ಜ್ಞಾನಿಲಕ್ಷಣವನ್ನು ವಿವರಿಸುವನು. ಯಾವ ಜ್ಞಾನಿಯು ಕಾಮಾದ್ಯುಪದ್ರವನಾಶದಿಂದ ಅಭಿವ್ಯಕ್ತವಾದ ಸ್ವರೂಪಸುಖವುಳ್ಳವನೋ, ಮತ್ತು ಭಗವದ್ದರ್ಶನದಿಂದುಂಟಾದ ಆನಂದವುಳ್ಳವನೋ, ಅವನೇ ಜ್ಞಾನಿಯು. ಇದಕ್ಕೆ ಕಾರಣವು ಭಗವತ್ಸ್ವರೂಪಾಭಿವ್ಯಕ್ತಿಯು. ಇಂತಹ ಯೋಗಿಯು ಸರ್ವದಾ ಬ್ರಹ್ಮಜ್ಞಾನವುಳ್ಳವನಾಗಿ ಮೋಕ್ಷವನ್ನು ಹೊಂದುವನು. ॥ ೨೪ ॥

ಸ್ವರೂಪಸುಖಾಭಿವ್ಯಕ್ತಿಗೆ ಕಾರಣವಾದ ಬ್ರಹ್ಮಸ್ವರೂಪಾಭಿವ್ಯಕ್ತಿಯು ಬ್ರಹ್ಮಜ್ಞಾನದಿಂದ ಮಾತ್ರ ಉಂಟಾಗುವುದಿಲ್ಲ. ಪಾಪಕ್ಷಯವೂ ಬೇಕೆಂದು ನಿರೂಪಿಸುವನು. ತತ್ತ್ವವಿಷಯದಲ್ಲಿ ಸಂಶಯ ಮತ್ತು ಭ್ರಮಾತ್ಮಕ ಜ್ಞಾನವಿಲ್ಲದವರಾದ ಶಾಸ್ತ್ರಶ್ರವಣಾದಿಗಳಿಂದ ಸರ್ವವನ್ನೂ ತಿಳಿದಿರುವ, ಸರ್ವ

ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।
ಅಭಿತೋ ಬ್ರಹ್ಮ ನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥ ೨೬ ॥

ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭ ॥

ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥೨೮॥

---

ಪ್ರಾಣಿಗಳಿಗೆ ಹಿತವನ್ನು ಬಯಸುವ ಋಷಿಗಳು ಪಾಪನಾಶವುಳ್ಳವರಾಗಿ ಪ್ರಾಕೃತ ಶರೀರವಿಲ್ಲದ ಪರಬ್ರಹ್ಮನನ್ನು ನೋಡುವರು. ॥ ೨೫ ॥

ಇಲ್ಲಿ ಜ್ಞಾನಿಯ ಸ್ವರೂಪವನ್ನು ತಿಳಿಸುವನು. ಕಾಮಕ್ರೋಧಾದಿಗಳಿಲ್ಲದವರಾದ ಪ್ರಯತ್ನಶೀಲರಾದ ಮನೋಜಯವುಳ್ಳ ಜ್ಞಾನಿಗಳಿಗೆ ಪರಮಾತ್ಮನು ರಕ್ಷಕನಾಗಿ ಸರ್ವತ್ರ (ಉಪಲಬ್ಧನಾಗುವನು) ತೋರುವನು. ಹೀಗಿರುವುದೇ ಜ್ಞಾನಿಲಕ್ಷಣವು. ॥ ೨೬ ॥

'ಸ ಬ್ರಹ್ಮಯೋಗಯುಕ್ತಾತ್ಮಾ' ಎಂಬಲ್ಲಿ ಪ್ರಸಕ್ತವಾದ ಧ್ಯಾನಪ್ರಕಾರವನ್ನು ಶ್ರೀಕೃಷ್ಣನು ತಿಳಿಸುವನು. ದುಃಖಕಾರಣಗಳಾದ ಲೌಕಿಕಶಬ್ದಾದಿ ವಿಷಯವಿಚಾರವಿಲ್ಲದವನಾಗಿ, ಕಣ್ಣುಗಳನ್ನು ಹುಬ್ಬುಗಳ ಮಧ್ಯದಲ್ಲಿಟ್ಟು, ಶ್ವಾಸವಾಯುವನ್ನು ಸಮವಾಗಿ ಧರಿಸಿಕೊಳ್ಳುತ್ತಾ, ಎಂದರೆ ಕುಂಭಕದಲ್ಲಿಟ್ಟುಕೊಂಡು, ಯಾವುದೊಂದೂ ವೈಷಯಿಕ ಇಚ್ಛಾಭಯಾದಿಗಳಿಲ್ಲದೆ, ಇಂದ್ರಿಯಜಯ ಮತ್ತು ಮನೋನಿಗ್ರಹದಿಂದ ಕೂಡಿ ತಿಳಿದ ಬ್ರಹ್ಮಸ್ವರೂಪವನ್ನು ಚಿಂತಿಸುತ್ತಾ, ಮೋಕ್ಷವೇ ಮುಖ್ಯ ಪ್ರಾಪ್ಯವೆಂದಿಟ್ಟುಕೊಂಡಿರುವವನನ್ನು ನಿಯತವಾದ ಮೋಕ್ಷವುಳ್ಳವನಾದುದರಿಂದ ಮುಕ್ತನೆಂದೇ ಹೇಳಬಹುದು. ॥ ೨೭, ೨೮ ॥

ಧ್ಯಾನಪ್ರಕಾರವನ್ನು ಹೇಳುವನು. ಜ್ಯೋತಿಷ್ಟೋಮಾದಿ ಯಜ್ಞಗಳಿಗೂ ಕೃಚ್ಛ್ರಚಾಂದ್ರಾಯಣಾದಿ ತಪಸ್ಸಿಗೂ ವಿಷಯನಾದ, ಸಮಸ್ತ ಲೋಕಕ್ಕೂ ಮುಖ್ಯ ಸ್ವಾಮಿಯಾದ, ಸಮಸ್ತ ಪ್ರಾಣಿವರ್ಗಕ್ಕೂ ಉಪಕಾರಿಯಾದ, ಮೋಕ್ಷದಾಯಕನಾದ, ನಿನಗೂ ಉಪದೇಶಮಾಡುತ್ತಿರುವ ನನ್ನನ್ನೇ

ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।
ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥

॥ ಇತಿ ಪಂಚಮೋಽಧ್ಯಾಯಃ ॥

---

ಪರೋಕ್ಷವಾಗಿ ತಿಳಿದು ಅಪರೋಕ್ಷೀಕರಿಸುವವನು ಮುಕ್ತಿಯೋಗ್ಯನು. ಇದರಿಂದಲ್ಲಿ ಶ್ರೀಕೃಷ್ಣನೇ ಧ್ಯಾನವಿಷಯವಾದ ವಸ್ತುವೆಂದು ಸ್ಪಷ್ಟೀಕೃತವಾಯಿತು. ॥ ೨೯ ॥

# ಷಷ್ಠೋಽಧ್ಯಾಯಃ

॥ ಶ್ರೀಭಗವಾನುವಾಚ ॥

ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।
ಸ ಸನ್ನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥ ೧ ॥
ಯಂ ಸನ್ನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।
ನ ಹ್ಯಸನ್ನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥

ಶ್ರೀಕೃಷ್ಣನು 'ಬುದ್ಧಿಯೋಗೇ ತ್ವಿಮಾಂ ಶೃಣು' ಎಂದು ೨ನೇ ಅಧ್ಯಾಯದ ೩೯ನೇ ಶ್ಲೋಕದಲ್ಲಿ ಅರ್ಜುನನಿಗೆ ನಿರೂಪಿಸಿದ ಯೋಗವು ಕರ್ಮಯೋಗ-ಜ್ಞಾನಯೋಗವೆಂದು ಎರಡು ವಿಧವಾದುದು. ಮೊದಲಿನ ಆರು ಅಧ್ಯಾಯಗಳಲ್ಲಿ 'ಯುಜ್ಯತೇ ಅನೇನೇತಿ ಯೋಗಃ' ಎಂಬ ಕರಣವ್ಯುತ್ಪತ್ತಿಯಿಂದ ಫಲಸಾಧನವಾದ ಯೋಗವನ್ನು ನಿರೂಪಿಸುವುದಾಗಿ ಪ್ರತಿಜ್ಞಾ ಮಾಡಿದುದರಲ್ಲಿ ತೃತೀಯಾದಿ ಪಂಚಮಾಧ್ಯಾಯ ಪರ್ಯಂತ ಮುಂದಿನ ಭಾಗದಲ್ಲಿ ನಿರೂಪಿಸಲ್ಪಡುವ ಜ್ಞಾನದ ಬಹಿರಂಗಸಾಧನವಾದ ಕರ್ಮಯೋಗವನ್ನು ನಿರೂಪಿಸಿ; ಯೋಗಗಳಲ್ಲಿ ಎರಡನೆಯದಾದ ಧ್ಯಾನವನ್ನು 'ಸ್ಪರ್ಶಾನ್ ಕೃತ್ವಾ' ಎಂದು ಪಂಚಮಾಧ್ಯಾಯಾಂತ್ಯದಲ್ಲಿ ಸೂಕ್ಷ್ಮವಾಗಿ ನಿರ್ದಿಷ್ಟವಾದುದನ್ನು ವಿಸ್ತಾರವಾಗಿ ಇಲ್ಲಿ ನಿರೂಪಿಸುವನು. ಮುಂದೆ ನಿರೂಪಿಸಲಿರುವ ಧ್ಯಾನದಲ್ಲಿ ಸನ್ನ್ಯಾಸ ಮತ್ತು ಯೋಗದಿಂದ ಕೂಡಿದವನೇ ಅಧಿಕಾರಿಯೆಂದು ತಿಳಿಸುವುದಕ್ಕೋಸ್ಕರ ಕಾಮಾದಿವರ್ಜನ ರೂಪವಾದ ಸನ್ನ್ಯಾಸವನ್ನೂ, ಈಶ್ವರಾರಾಧನರೂಪವಾದ ಯೋಗವನ್ನೂ ಪ್ರಥಮ ಶ್ಲೋಕದಲ್ಲಿ ನಿರೂಪಿಸುವನು. ಯಾರು ಫಲೇಚ್ಛಾರಹಿತನಾಗಿ ತನ್ನ ವರ್ಣಾಶ್ರಮೋಚಿತವಾದ ಕರ್ಮವನ್ನು ಮಾಡುತ್ತಾನೋ, ಅವನೇ ಸನ್ನ್ಯಾಸಿಯು ಮತ್ತು ಯೋಗಿಯು, ಎಂದರೆ ಧ್ಯಾನಾಧಿಕಾರಿಯು. ಸಾಂಖ್ಯರು ಹೇಳುವಂತೆ ಅಗ್ನಿಯಿಲ್ಲದವನು, ಕ್ರಿಯಾ ಇಲ್ಲದವನು ಅಧಿಕಾರಿಯಲ್ಲವೆಂದು ಸೂಚಿಸುವನು. ಅಗ್ನಿಯಿಲ್ಲದವನು ಸನ್ನ್ಯಾಸಿಯೆಂದೂ, ಕ್ರಿಯಾ ಇಲ್ಲದವನು ಯೋಗಿಯೆಂದೂ ಸಾಂಖ್ಯರು ಹೇಳುವಂತೆ ತಿಳಿಯಬಾರದು. ॥ ೧ ॥

ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।
ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩ ॥
ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।
ಸರ್ವಸಂಕಲ್ಪಸನ್ನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥

---

ಪೂರ್ವಶ್ಲೋಕದಲ್ಲಿ 'ಸ ಸನ್ನ್ಯಾಸೀ ಚ ಯೋಗೀ ಚ' ಎಂದು ಹೇಳಿದುದರಿಂದ ಉಂಟಾಗುವ ಭೇದಶಂಕೆಯನ್ನು ನಿರಾಕರಿಸುವುದಕ್ಕೋಸ್ಕರ ಸನ್ನ್ಯಾಸವು ಯೋಗಾಂತರ್ಭೂತವೆಂದು ಹೇಳುವನು. ಯಾವುದನ್ನು ಕಾಮಾದಿವರ್ಜನರೂಪವಾದ ಸನ್ನ್ಯಾಸವನ್ನಾಗಿ ಹೇಳುವರೋ, ಅದನ್ನು ಮುಖ್ಯ ಯೋಗವನ್ನಾಗಿ ತಿಳಿ. ಮುಖ್ಯ ಯೋಗವೆಂದರೆ ಕಾಮಾದಿರಹಿತನಾಗಿ ಫಲೇಚ್ಛೆಯಿಲ್ಲದೆ ಮಾಡುವ ಕರ್ಮಾನುಷ್ಠಾನವು. ಎಲೈ ಅರ್ಜುನ! ಯಾರಾದರೂ ಕಾಮಾದಿವರ್ಜನರೂಪವಾದ ಸನ್ನ್ಯಾಸದಿಂದ ರಹಿತನಾಗಿ ಕೇವಲ ಕರ್ಮಾನುಷ್ಠಾನ ಮಾತ್ರ ಉಳ್ಳವನಾದರೆ ಅವನು ಮುಂದಿನ ಜ್ಞಾನಾಧಿಕಾರಿಯಾಗಲಾರನು. ॥ ೨ ॥

ಧ್ಯಾನಾಂಗವಾಗಿ ಹೇಳಿದ ಕರ್ಮಯೋಗವು ಒಂದಾವರ್ತಿ ಮಾಡಲ್ಪಟ್ಟಿದಾದರೆ ಸಾಕಾಗುವುದೋ, ಅಥವಾ ಫಲನಿಷ್ಪತ್ತಿ ಪರ್ಯಂತವಾಗಿ ಬೇಕೋ? ಎಂಬ ಶಂಕೆಗೆ ಈ ಶ್ಲೋಕದಲ್ಲಿ ಸಮಾಧಾನವನ್ನು ಹೇಳುವನು. ಪರೋಕ್ಷಜ್ಞಾನಿಯಾಗಿ ಜ್ಞಾನೋಪಾಯವಾದ ಯೋಗವನ್ನು ಇಚ್ಛಿಸುವವನಿಗೆ ಕರ್ಮಯೋಗವು ಆವಶ್ಯಕವು, ಎಂದರೆ ಅಪರೋಕ್ಷಜ್ಞಾನವಾಗುವವರೆಗೆ ಆವಶ್ಯಕವು. ಅಂತಹ ಅಪರೋಕ್ಷಜ್ಞಾನವಾದ ಮೇಲೆ ಶಮಶಬ್ದಾರ್ಥವಾದ ಧ್ಯಾನಾದಿಗಳು ಮೋಕ್ಷದಲ್ಲಿ ಸುಖಾತಿಶಯಕ್ಕೆ ಕಾರಣವಾಗುವುವು. ॥ ೩ ॥

ಶ್ರೀಕೃಷ್ಣನು ಸಂಪೂರ್ಣವಾಗಿ ಯೋಗಸಿದ್ಧಿಯುಳ್ಳವನ ಲಕ್ಷಣವನ್ನು ಈ ಶ್ಲೋಕದಲ್ಲಿ ನಿರೂಪಿಸುವನು. ಯಾವಾತನು ಪ್ರಯತ್ನವಿಲ್ಲದೇನೇ ಇಂದ್ರಿಯಾರ್ಥಗಳಾದ ಶಬ್ದಾದಿಗಳನ್ನು ನಿಗ್ರಹಿಸುವನೋ, ಎಂದರೆ ಲೌಕಿಕ ರೂಪದರ್ಶನ–ಶಬ್ದಶ್ರವಣಾದಿಗಳಲ್ಲಿ ಉಪರತಿಯನ್ನು ಹೊಂದುವನೋ,

ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್ ।
ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫ ॥
ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾಽಽತ್ಮನಾ ಜಿತಃ ।
ಅನಾತ್ಮನಸ್ತು ಶತ್ರುತ್ವೇ ವರ್ತೇತಾಽಽತ್ಮೈವ ಶತ್ರುವತ್ ॥ ೬ ॥
ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।
ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥

---

ಮತ್ತು ಕರ್ಮಗಳಲ್ಲಿ ಸಂಕಲ್ಪ ಕ್ರಿಯಾದಿಗಳನ್ನು ಭಗವದಧೀನವನ್ನಾಗಿ ತಿಳಿದು ಅನಾಸಕ್ತನಾಗುವನೋ, ಅವನೇ ಸಂಪೂರ್ಣ ಯೋಗವುಳ್ಳವನಾಗಿ ಯೋಗಾರೂಢಶಬ್ದವಾಚ್ಯನು. ॥ ೪ ॥

ಶ್ರೀಕೃಷ್ಣನು ಯಾವ ಧ್ಯಾನಕ್ಕೆ ಕಾಮಾದಿ ತ್ಯಾಗರೂಪವಾದ ಸನ್ನ್ಯಾಸದಿಂದ ಕೂಡಿದ ತನ್ನ ವರ್ಣಾಶ್ರಮೋಚಿತವಾದ ಕರ್ಮದಿಂದ ಯುಕ್ತನಾದವನೇ ಅಧಿಕಾರಿಯೆಂದೂ ಮತ್ತು ಯಾವ ಧ್ಯಾನವು ಅಪರೋಕ್ಷಜ್ಞಾನ ಪರ್ಯಂತ ಮಾಡಲ್ಪಡತಕ್ಕದೆಂದೂ ನಿರೂಪಿಸಿದನೋ, ಅಂತಹ ಧ್ಯಾನಕ್ಕೆ ಅವಶ್ಯ ಕಾರ್ಯತ್ವವನ್ನು ಇಲ್ಲಿ ಉಪದೇಶಿಸುವನು. ಜೀವನು ಮನಸ್ಸಿನಿಂದ ಎಂದರೆ ಮನಸ್ಸಿನ ಕಾರ್ಯರೂಪವಾದ ಭಗವದ್ಧ್ಯಾನದಿಂದ ತನ್ನನ್ನು ಪುರುಷಾರ್ಥಭಾಗಿಯನ್ನಾಗಿ ಮಾಡಿಕೊಳ್ಳತಕ್ಕದ್ದು; ಧ್ಯಾನಾದಿಗಳನ್ನು ಮಾಡದೆ ವ್ಯರ್ಥವಾಗಿ ನಾಶಗೊಳಿಸಬಾರದು. ಹಾಗೆ ಧ್ಯಾನಾದಿಗಳಿಂದ ತನ್ನನ್ನು ಪುರುಷಾರ್ಥಭಾಗಿಯನ್ನಾಗಿ ಮಾಡಿಕೊಂಡರೆ ಆಗ ಆತನ ಮನಸ್ಸು ಅವನಿಗೆ ಬಂಧುವು ಇಲ್ಲವಾದರೆ ಶತ್ರುವೆಂದು ತಿಳಿಯಬೇಕು. ॥ ೫ ॥

ಯಾವ ಜೀವನಿಗೆ ಎಂತಹ ಮನಸ್ಸು ಬಂಧು ಅಥವಾ ಶತ್ರುವೆಂಬುದನ್ನು ಶ್ರೀಕೃಷ್ಣನು ಇಲ್ಲಿ ವಿಶದಪಡಿಸುವನು. ಯಾವ ಜೀವನು ಮನಸ್ಸನ್ನು ಜಯಿಸಿ ಆ ಮನಸ್ಸಿನಿಂದ ಭಗವದ್ಧ್ಯಾನವನ್ನು ಮಾಡುವನೋ, ಅವನ ಅಂತಹ ಮನಸ್ಸು ಬಂಧುವಿನಂತೆ ಉಪಕಾರಿಯು. ಯಾರ ಮನಸು ನಿಗ್ರಹಿಸಲ್ಪಡದೆ ಧ್ಯಾನಾದಿಗಳಿಗೆ ಪ್ರತಿಕೂಲವಾಗಿರುವುದೋ, ಅವರಿಗೆ ಆ ಮನಸ್ಸು ಶತ್ರುವಿನಂತೆ ದುಃಖಕಾರಿಯು. ಎಂದರೆ ಮನೋನಿಗ್ರಹವೇ ಧ್ಯಾನಯೋಗವೆಂದು ಸ್ಪಷ್ಟವಾಯಿತು. ॥ ೬ ॥

ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।
ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮ ॥
ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥

---

ಹಿಂದೆ ಹೇಳಿದಂತೆ ನಿಗೃಹೀತ ಮನಸ್ಸುಳ್ಳವನ ಲಕ್ಷಣವನ್ನು ಇಲ್ಲಿ ನಿರೂಪಿಸುವನು. ಯಾರು ಮನಸ್ಸನ್ನು ಸ್ವಾಧೀನಪಡಿಸಿಕೊಂಡಿರುವನೋ ಮತ್ತು ಪರಮಾತ್ಮನನ್ನು ಭಕ್ತಿಯಿಂದ ವಶೀಕರಿಸಿಕೊಂಡಿರುವನೋ, ಅವನಿಗೆ ಶಾಂತಿಯು ಉಂಟಾಗುತ್ತದೆ. ಎಂದರೆ ಪ್ರಯತ್ನವಿಲ್ಲದೆ ವಿಷಯಗಳಲ್ಲಿ ನಿವೃತ್ತಿಯು ಸಿದ್ಧಿಸುತ್ತದೆ. ಅಂತಹನ ಹೃದಯದಲ್ಲಿ ಪರಮಾತ್ಮನು ಸನ್ನಿಹಿತನಾಗುವನು, ಎಂದರೆ ಧ್ಯಾನಗೋಚರನಾಗಿ ಅಪರೋಕ್ಷವಿಷಯನಾಗುವನು. ॥ ೭ ॥

'ಯದಾ ಹಿ ನೇಂದ್ರಿಯಾರ್ಥೇಷು' ಎಂದು ಹಿಂದೆ ೪ನೇ ಶ್ಲೋಕದಲ್ಲಿ ಅಪರೋಕ್ಷಜ್ಞಾನಿ ಲಕ್ಷಣವು ಹೇಳಲ್ಪಟ್ಟಿದ್ದರೂ, ಪುನಃ ಸ್ಪಷ್ಟವಾಗಿ ಇಲ್ಲಿ ನಿರೂಪಿಸುವನು. ಯಾರು ಶೀತೋಷ್ಣ ಮತ್ತು ಮಾನಾಪಮಾನ ಮೊದಲಾದ ವಿರುದ್ಧ ಧರ್ಮಗಳಲ್ಲಿ ಕೂಟಸ್ಥ, ಎಂದರೆ ಆಕಾಶದಂತೆ ಹರ್ಷಶೋಕದಿಂದುಂಟಾಗುವ ವಿಕಾರವಿಲ್ಲದವನಾಗಿರುವನೋ, ಮತ್ತು ಜ್ಞಾನವೆಂದರೆ ಪರೋಕ್ಷಜ್ಞಾನವು ಮತ್ತು ವಿಜ್ಞಾನವೆಂದರೆ ಅಪರೋಕ್ಷಜ್ಞಾನವು, ಇವುಗಳಿಂದ ತೃಪ್ತನಾಗಿ ವಿಷಯಗಳಲ್ಲಿ ಅಲಂಬುದ್ಧಿಯುಳ್ಳವನೋ, ಇಂದ್ರಿಯಜಯವುಳ್ಳವನಾಗಿ ಸುವರ್ಣ ಮತ್ತು ಲೋಷ್ಟಗಳ ಲಾಭದಿಂದ ಸಮಾನಬುದ್ಧಿಯುಳ್ಳವನಾಗಿ ಹರ್ಷಾದಿ ಪ್ರಯುಕ್ತ ವಿಕಾರರಹಿತನೋ ಇಂತಹನನ್ನೇ ಧ್ಯಾನಾಧಿಕಾರಿಯಾದ ಅಪರೋಕ್ಷಜ್ಞಾನಿಯೆಂದು ತಿಳಿಯಬೇಕು. ॥ ೮ ॥

ಅವನೇ ಸುಹೃದ್-ಮಿತ್ರ-ಶತ್ರು-ಉದಾಸೀನ-ಮಧ್ಯಸ್ಥ-ದ್ವೇಷಿ-ಬಂಧು ಇವರಲ್ಲಿ ಸಮವಾದ ಬುದ್ಧಿಯುಳ್ಳವನು. ಸಮಬುದ್ಧಿಯೆಂದರೆ ಶಾಸ್ತ್ರದಲ್ಲಿ ಹೇಳಿದಂತೆ ತತ್ತದ್ಯೋಗ್ಯಭಾವನೆಮಾಡುವವನೆಂದರ್ಥವು. ಅವನು ಯೋಗಾರೂಢನು, ಯೋಗಿಗಳಲ್ಲಿ ಶ್ರೇಷ್ಠನು. ನಮ್ಮಿಂದ ಪ್ರತ್ಯುಪಕಾರವನ್ನು ಬಯಸದೆ ಉಪಕಾರಿಯು 'ಸುಹೃತ್' ನಮಗೆ ಬರಲಿರುವ ದುಃಖವನ್ನು ತಿಳಿಸಿ

ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।
ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥
ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।
ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥ ೧೧ ॥
ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।
ಉಪವಿಶ್ಯಾಽಽಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥೧೨॥
ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥
ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।
ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥

---

ರಕ್ಷಿಸುವವನು ಮಿತ್ರನು. ಹಿಂಸೆ ಮಾಡುವವನು ಅರಿಯು. ಉಪಕಾರಕ್ಕೆ ಯೋಗ್ಯ ಕಾಲದಲ್ಲಿ ಉಪಕಾರವನ್ನಾಗಲಿ ಅಪಕಾರಕ್ಕೆ ಯೋಗ್ಯ ಕಾಲದಲ್ಲಿ ಅಪಕಾರವನ್ನಾಗಲಿ ಮಾಡದೆ ಇರುವನು ಉದಾಸೀನನು. ಉಪಕಾರ ಮತ್ತು ಅಪಕಾರ ಇವೆರಡನ್ನೂ ಮಾಡುವವನು ಮಧ್ಯಸ್ಥನು. ಇಷ್ಟವಾಗದಿರುವುದನ್ನು ಮಾಡುವವನು ದ್ವೇಷಿಯು. ಉಪಕಾರಿಯು ಬಂಧುವು. ॥ ೯ ॥

'ಉದ್ಧರೇದಾತ್ಮನಾತ್ಮಾನಂ' ಎಂಬಲ್ಲಿ ವಿಹಿತವಾದ ಧ್ಯಾನದ ರೀತಿಯನ್ನು ಮುಂದಿನ ಶ್ಲೋಕಗಳಲ್ಲಿ ವಿವರಿಸುವನು. ಯೋಗಿಯು ಇತರರ ಸಂಗವಿಲ್ಲದೆ ಏಕಾಕಿಯಾಗಿ ನಿತ್ಯವೂ ಏಕಾಂತಪ್ರದೇಶದಲ್ಲಿ ತನ್ನ ದೇಹ ಮತ್ತು ಮನಸ್ಸನ್ನು ನಿಗ್ರಹಿಸಿಕೊಂಡು, ಕಾಮನಾ ಇಲ್ಲದೆ, ಇತರರಿಂದ ಪ್ರತಿಗ್ರಹರಹಿತನಾಗಿ ತನ್ನ ಮನಸನ್ನು ಪರಮಾತ್ಮನಲ್ಲಿಟ್ಟು ಮನಃಶಾಂತಿಕರವಾದ ನಿರ್ಮಲಪ್ರದೇಶದಲ್ಲಿ ಮೊದಲು ದರ್ಭೆಹಾಸಿ, ಅದರ ಮೇಲೆ ವ್ಯಾಘ್ರಾಜಿನ ಅಥವಾ ಕೃಷ್ಣಾಜಿನವನ್ನು ಹಾಸಿ, ಅದರ ಮೇಲೆ ವಸ್ತ್ರವನ್ನು ಹಾಸಿ ಮಾಡಿದ ಆ ಆಸನವು ಅತಿ ಎತ್ತರವೂ ಅಥವಾ ಅತಿ ತಗ್ಗಾದದ್ದೂ ಆಗದಿದ್ದು, ಅಂತಹ ಆಸನದ ಮೇಲೆ ಕುಳಿತುಕೊಂಡು, ಮನಸ್ಸು ಮತ್ತು ಇಂದ್ರಿಯವ್ಯಾಪಾರಗಳನ್ನು ಏಕತ್ರ ಇಟ್ಟುಕೊಂಡು, ಮಧ್ಯದೇಹ, ಕುತ್ತಿಗೆ, ತಲೆ ಇವುಗಳನ್ನು ಅಲ್ಲಾಡದಂತೆ ಸಮವಾಗಿ ಧರಿಸುತ್ತಾ ಇತರ ಪ್ರದೇಶ

**ಏವಂ ಯುಂಜನ್ ಸದಾಽಽತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥**

---

ವನ್ನು ನೋಡದೆ ತನ್ನ ಮೂಗಿನ ತುದಿಯನ್ನೇ ನೋಡುತ್ತಾ ಹುಲಿ ಮೊದಲಾದವುಗಳಿಂದ ಹೆದರದೆ, ಪ್ರಸನ್ನಮನಸ್ಕನಾಗಿ ನಾನೇ ಸರ್ವೋತ್ತಮನೆಂದು ಭಾವಿಸುತ್ತಾ ತನ್ನ ಸಂಸಾರಮೂಲನಾಶಾರ್ಥವಾಗಿ ನನ್ನನ್ನೇ ಧ್ಯಾನಮಾಡಬೇಕೆಂದು ಶ್ರೀಕೃಷ್ಣನು ಉಪದೇಶಿಸುವನು. ॥ ೧೦,೧೧,೧೨,೧೩,೧೪॥

ಇದುವರೆಗೆ ತಾನು ನಿರೂಪಿಸಿದ ಧ್ಯಾನರೂಪ ಸಮಾಧಿಯ ಫಲವನ್ನು ಶ್ರೀಕೃಷ್ಣನು ಇಲ್ಲಿ ಹೇಳುತ್ತಾನೆ. ನಿಗೃಹೀತವಾದ ಮನಸ್ಸಿನಿಂದ ಧ್ಯಾನಾದಿಗಳನ್ನು ಮಾಡುತ್ತಾ ಮನಸ್ಸನ್ನು ಪರಮಾತ್ಮನಲ್ಲಿಟ್ಟವನು ಶರೀರತ್ಯಾಗೋತ್ತರಕಾಲೀನವಾದ ನನ್ನ (ಲೋಕದ)ಲ್ಲಿ ಸ್ಥಿತಿರೂಪವಾದ ಮೋಕ್ಷವನ್ನು ಹೊಂದುತ್ತಾನೆ. ॥ ೧೫ ॥

ಧ್ಯಾನಯೋಗವನ್ನು ಮಾಡುವಾತನಿಗೆ ಆಹಾರನಿಯಮವನ್ನು ಭಗವಂತನು ಈ ಶ್ಲೋಕದಲ್ಲಿ ಹೇಳುವನು. ಕೇವಲ ಅಶಕ್ತನಾಗಿದ್ದು ನಿಯತವಾಗಿ ಅಧಿಕ ಭೋಜನಮಾಡುವವನಿಗೂ ಆಹಾರವನ್ನು ಸಂಪೂರ್ಣವಾಗಿ ಬಿಟ್ಟವನಿಗೂ, ಹಾಗೆಯೇ ನಿದ್ದೆಯನ್ನು ಬಿಟ್ಟವನಿಗೂ ಮತ್ತು ಅತಿ ನಿದ್ರೆಯನ್ನು ಮಾಡುವವನಿಗೂ ಯೋಗವು ಸಿದ್ಧಿಸುವುದಿಲ್ಲ. ॥ ೧೬ ॥

ಹೇಗಿದ್ದವನಿಗೆ ಯೋಗವು ಸಿದ್ಧಿಸುವುದೆಂಬುದನ್ನು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುವನು. ಧ್ಯಾನಕ್ಕೆ ವಿಘಾತಕ ಮತ್ತು ಶ್ರಮದಾಯಕವಾಗದಿರುವ ಆಹಾರ-ವಿಹಾರದಿಂದಿರುವವನಿಗೆ ಮತ್ತು ಮಿತವಾದ ಚೇಷ್ಟೆಯುಳ್ಳವನಿಗೆ ಯೋಗಕ್ಕೆ ಪ್ರತಿಬಂಧಕವಾಗದಿರುವ ನಿದ್ರಾಜಾಗರವುಳ್ಳವನಿಗೆ ದುಃಖನಾಶಕರವಾದ ಯೋಗವು ಸಿದ್ಧಿವುದು. ॥ ೧೭ ॥

ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।
ನಿಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥ ೧೮ ॥
ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।
ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥ ೧೯ ॥
ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।
ಯತ್ರ ಚೈವಾಽಽತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥
ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧ ॥

---

ಸಂಪೂರ್ಣ ಯೋಗದ ಸ್ವರೂಪವನ್ನು ಶ್ರೀಕೃಷ್ಣನು ನಿರೂಪಿಸುವನು. ಯಾವಾಗ ಯಾರ ಮನಸ್ಸು ವಿಶೇಷವಾಗಿ ವಿಷಯಗಳಿಂದ ನಿವೃತ್ತವಾಗಿ ಪರಮಾತ್ಮನಲ್ಲಿಯೇ ಇರುತ್ತದೋ ಮತ್ತು ಯಾರು ಸರ್ವ ಕಾಮಗಳಲ್ಲಿ ಅಭಿಲಾಷೆಯಿಲ್ಲದವನಾಗಿರುತ್ತಾನೋ, ಆವಾಗ ಅವನು ಸಂಪೂರ್ಣವಾದ ಯೋಗವುಳ್ಳವನೆಂದೆನ್ನಿಸಿಕೊಳ್ಳುವನು. ॥ ೧೮ ॥

ಯೋಗಸಂಪನ್ನನು ಹೇಗಿರುವನೆಂಬುದನ್ನು ಶ್ರೀಕೃಷ್ಣನು ತಿಳಿಸುವನು. ಗಾಳಿ ಇಲ್ಲದ ದೇಶದಲ್ಲಿ ದೀಪವು ಚಲಿಸದೆ ಹೇಗೆ ಪ್ರಕಾಶಿಸಿಕೊಂಡಿರುವುದೋ, ಪರಮಾತ್ಮನ ಧ್ಯಾನವನ್ನು ಆಚರಿಸುವವನ ಸ್ಥಿತಿಯೂ ಹಾಗೆಯೇ ಇರುವುದು. ಎಂದರೆ ಭಗವದ್ವಿಷಯದಲ್ಲಿ ಚಲನರಹಿತವಾದ ಮನಸ್ಸುಳ್ಳವನಾಗಿರುವನು. ॥ ೧೯ ॥

ಯೋಗಸಂಪನ್ನನ ರೀತಿಯನ್ನೇ ನಿರೂಪಿಸುವನು. ಯೋಗಸೇವೆಯಿಂದ ನಿರುದ್ಧವಾದ ಯಾರ ಮನಸ್ಸು ಸಮಾಧಿಯಲ್ಲಿ ಬಾಹ್ಯವ್ಯಾಪಾರಹೀನವಾಗಿರುತ್ತದೋ ಮತ್ತು ಯಾರು ಸಮಾಧಿಯಲ್ಲಿರುತ್ತಾ ಮನಸ್ಸಿನಿಂದ ಪರಮಾತ್ಮನನ್ನು ನೋಡುತ್ತಾ ದೇಹದಲ್ಲಿ ಸಂತೋಷಪಡೆಯುತ್ತಾ ಇರುತ್ತಾನೋ, ಅವನು ಆಗ ಯೋಗಸಂಪನ್ನನೆಂದು ತಿಳಿಯತಕ್ಕದ್ದು. ॥ ೨೦ ॥

ಯೋಗಸಂಪನ್ನನ ರೀತಿಯನ್ನೇ ಭಗವಂತನು ನಿರೂಪಿಸುವನು. ಯಾವ ಸಮಾಧಿಸ್ಥನು ಯೋಗಾಸಕ್ತನಾಗಿ ಅನುಭವೈಕವೇದ್ಯವಾದ ಮತ್ತು ಇಂದ್ರಿಯಗಳಿಗೆ ಅವಿಷಯವಾದ ಅತ್ಯುತ್ತಮ ಸುಖವನ್ನು ಅನುಭವಿಸಿಕೊಂಡು

ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಽಪಿ ವಿಚಾಲ್ಯತೇ ॥೨೨॥

ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।
ಸ ನಿಶ್ಚಯೇನ ಯೋಕ್ತವ್ಯೋ ಯೋಗೋ ನಿರ್ವಿಣ್ಣಚೇತಸಾ ॥೨೩॥

ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।
ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪ ॥

ಶನೈಶ್ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।
ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ ೨೫ ॥

---

ಭಗವದ್ಧ್ಯಾನ ತದ್ದರ್ಶನವ್ಯತಿರಿಕ್ತವಾದ ಯಾವ ವಸ್ತುವನ್ನೂ ತಿಳಿಯುವುದಿಲ್ಲವೋ ಅವನೇ ಯೋಗಸಂಪನ್ನನು. ॥ ೨೧ ॥

ಯಾವಾತನು ತಾನು ಹೊಂದಿದ ಯೋಗದಿಂದ ಅಧಿಕವಾದ ಇನ್ನಿತರ ಲಾಭವಿಲ್ಲವೆಂದು ತಿಳಿಯುವನೋ ಮತ್ತು ಯೋಗಾರೂಢನಾಗಿರುವಾಗ ಮಹತ್ತರ ದುಃಖಪ್ರಾಪ್ತಿಯಾದರೂ, ಯೋಗದಿಂದ ವಿಮುಖನಾಗಲಾರನೋ, ಆತನೇ ಯೋಗಸಂಪನ್ನನು. ॥ ೨೨ ॥

ಯಾವ ಯೋಗವು ಸಮಸ್ತ ದುಃಖಸಂಬಂಧನಾಶಕವೋ ಅಂತಹ ಧ್ಯಾನರೂಪವಾದ ಯೋಗವನ್ನು ಮೋಕ್ಷೇಚ್ಛೆಯುಳ್ಳವನು ವಿಷಯವಿರಕ್ತವಾದ ಮನಸ್ಸಿನಿಂದ ಮಾಡತಕ್ಕದ್ದು. ॥ ೨೩ ॥

ಮನುಷ್ಯನು ಮೋಕ್ಷವ್ಯತಿರಿಕ್ತವಾದ ಮಾನಸಿಕ ಸರ್ವಕಾಮಗಳನ್ನು ತೊರೆದು ಮನಸ್ಸಿನಿಂದ ಸಕಲೇಂದ್ರಿಯಗಳನ್ನು ಜಯಿಸಿ ಯಾವುದೊಂದು ವಿಷಯದಲ್ಲಿಯೂ ಆಸಕ್ತವಾಗದಿದ್ದವುಗಳನ್ನಾಗಿ ಮಾಡಿಕೊಂಡು ಯೋಗವನ್ನು ಸೇವಿಸಬೇಕು. ॥ ೨೪ ॥

ಯೋಗೇಚ್ಛೆಯುಳ್ಳವನು ಧೈರ್ಯಯುಕ್ತವಾದ ಮನಸ್ಸಿನಿಂದ ಮೆಲ್ಲಮೆಲ್ಲನೆ ವಿಷಯಗಳಲ್ಲಿ ಉಪರಮವನ್ನು ಹೊಂದಿ, ಬೇರೆ ಯಾವುದೊಂದು ವಿಷಯವನ್ನೂ ಚಿಂತಿಸದೆ, ಪರಮಾತ್ಮನಲ್ಲಿಯೇ ಮನಸ್ಸನ್ನು ದೃಢವಾಗಿಟ್ಟುಕೊಳ್ಳಬೇಕು. ॥ ೨೫ ॥

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥
ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭ ॥
ಏವಂ ಯುಂಜನ್ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ ।
ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮ ॥
ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥

---

ಮೊದಲೇ ಧ್ಯಾನದಲ್ಲಿ ಮನಸ್ಸು ದೃಢವಾಗದಿದ್ದಲ್ಲಿ ಯಾವ ಯಾವ ವಿಷಯಗಳನ್ನು ಕುರಿತು ಮನಸ್ಸು ಚಲಿಸುವುದೋ, ಆಯಾವ ವಿಷಯಗಳಿಂದ ಮನಸ್ಸನ್ನು ಪ್ರತ್ಯಾಹಾರದಿಂದ ಹಿಂತಿರುಗಿಸಿ, ಪರಮಾತ್ಮನ ವಶವನ್ನಾಗಿ ಮಾಡಬೇಕು; ಎಂದರೆ ಅವನನ್ನೇ ಧ್ಯಾನಮಾಡತಕ್ಕದ್ದು ॥ ೨೬ ॥

ಇದುವರೆಗೆ ಸಾಂಗವಾದ ಯೋಗವನ್ನು ನಿರೂಪಿಸಿ ಅಂತಹ ಯೋಗವನ್ನು ಧರಿಸುವವನಿಗೆ ಫಲವನ್ನು ವಿಸ್ತಾರವಾಗಿ ಮುಂದಿನ ಶ್ಲೋಕಗಳಿಂದ ಶ್ರೀಕೃಷ್ಣನು ನಿರೂಪಿಸುವನು. ವಿಷಯಗಳಲ್ಲಿ ಪ್ರಯತ್ನವಿಲ್ಲದೆಯೇ ಪ್ರವೃತ್ತವಾಗದಿರುವ ಮನಸ್ಸುಳ್ಳ ಮತ್ತು ರಜೋಗುಣದಿಂದ ಜನ್ಯವಾದ ಕಾಮಾದಿದೋಷಗಳಿಂದ ರಹಿತನಾದ ಯೋಗಿಯು ಉತ್ತಮವಾದ ಸುಖವನ್ನು ಹೊಂದುವನು. ॥ ೨೭ ॥

ಯೋಗಿಯು ಹೊಂದುವ ಸುಖವು ಎಂತಹುದು? ಅದನ್ನು ಯೋಗಿಯು ಹೇಗೆ ಹೊಂದುವನು? ಎಂಬುದನ್ನು ಶ್ರೀಕೃಷ್ಣನು ನಿರೂಪಿಸುವನು. ರಾಗಾದಿ ದೋಷರಹಿತನಾದ ಯೋಗಿಯು ಹಿಂದೆ ನಿರೂಪಿಸಿದಂತೆ ಭಗವಂತನನ್ನು ಧ್ಯಾನಿಸುತ್ತಾ ಭಗವಂತನ ಸಂಬಂಧದಿಂದ ಅನಾಯಾಸವಾಗಿ ಅಭಿವ್ಯಕ್ತವಾದ ಅತಿಶಯ ಸುಖವನ್ನು ಅನುಭವಿಸುವನು. ॥ ೨೮ ॥

ಶ್ರೀಕೃಷ್ಣನು ಅರ್ಜುನನಿಗೆ ಈ ವರೆಗೆ ಧ್ಯಾನದ ಪ್ರಕಾರ ಮತ್ತು ಫಲವನ್ನು ವಿಸ್ತಾರವಾಗಿ ನಿರೂಪಿಸಿ, ಈಗ ಧ್ಯೇಯ (ಧ್ಯಾನಿಸುವ) ವಸ್ತುವನ್ನು ವಿಸ್ತಾರವಾಗಿ ನಿರೂಪಿಸುವನು. ಹಿಂದೆ 5ನೇ ಅಧ್ಯಾಯದಲ್ಲಿ (ಧ್ಯಾನಿಸುವ)

ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।
ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦ ॥
ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।
ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ ೩೧ ॥
ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।
ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥ ೩೨ ॥

---

ಧ್ಯೇಯವಸ್ತು ನಿರೂಪಿಸಿಯಾಗಿದ್ದರೂ ಇಲ್ಲಿ ಉತ್ತಮಾಧಿಕಾರಿಗಳ ಧ್ಯೇಯ ವಸ್ತುವನ್ನು ನಿರೂಪಿಸುವನು. ಉತ್ತಮನಾದ ಯೋಗಿಯು ಸರ್ವ ಪ್ರಾಣಿಗಳಲ್ಲಿಯೂ ಪರಮಾತ್ಮನು ನಿಯಾಮಕನಾಗಿರುತ್ತಾನೆಂದೂ, ಸರ್ವೈಶ್ವರ್ಯ ಸಂಪನ್ನನೆಂದೂ, ಎಂದರೆ ಸರ್ವಪ್ರಾಣಿಗಳಲ್ಲಿಯೂ ಇರುವ ಭಗವದ್ರೂಪವು ದೋಷವಿಲ್ಲದ್ದೆಂದು ಧ್ಯಾನಿಸುತ್ತಾ ನೋಡುವನು. ॥ ೨೯ ॥

ವ್ಯಾಪ್ತವಾದ ಭಗವದ್ರೂಪದ ಧ್ಯಾನವಿಶೇಷಕ್ಕೆ ಫಲವನ್ನು ಶ್ರೀ ಕೃಷ್ಣನು ಹೇಳುವನು. ಬ್ರಹ್ಮನನ್ನು ಮೊದಲುಗೊಂಡು ತೃಣಪರ್ಯಂತ ಪ್ರಾಣಿಗಳಲ್ಲಿ ನಾನು ನಿಯಾಮಕನಾಗಿದ್ದೇನೆಂದೂ, ಅವೆಲ್ಲವೂ ನನ್ನಧೀನ ವೆಂದೂ ಯಾರು ಧ್ಯಾನಿಸುವನೋ, ನಾನು ಅಂತಹವನ ಯೋಗಕ್ಷೇಮ ವನ್ನು ಧರಿಸುವೆನು. ಅವನು ನನ್ನ ಭಕ್ತನಾಗುವನು. ॥ ೩೦ ॥

ಪೂರ್ವಶ್ಲೋಕದ ಅಭಿಪ್ರಾಯವನ್ನು ಇದರಲ್ಲಿ ಶ್ರೀಕೃಷ್ಣನು ಸ್ಪಷ್ಟ ಪಡಿಸುವನು. ಯಾರು ಸರ್ವ ಪ್ರಾಣಿಗಳಲ್ಲಿರುವ ನನ್ನನ್ನು ಒಬ್ಬನನ್ನಾ ಗಿಯೂ, ಯಾವ ರೀತಿಯಲ್ಲಿಯೂ ಭೇದವಿಲ್ಲದವನನ್ನಾಗಿಯೂ ತಿಳಿಯು ತ್ತಾನೋ, ಅವನು ನ್ಯಾಯದಿಂದಿರಲಿ, ಅಥವಾ ಯತ್ಕಿಂಚಿದನ್ಯಾಯಾಚರಣೆ ಯುಳ್ಳವನಾಗಲೀ ಅಪರೋಕ್ಷಜ್ಞಾನಿಯಾಗಿದ್ದ ಪ್ರಯುಕ್ತ (ಮಯಿ ವರ್ತತೇ) ಮುಕ್ತನಾಗುವನು; ಎಂದರೆ ಅಪರೋಕ್ಷಜ್ಞಾನಿಗೆ ನಿಯತವಾದ ಮೋಕ್ಷಕ್ಕೆ ಅನ್ಯಾಯಾಚರಣೆಯಿಂದ ಹಾನಿಯಿಲ್ಲ. ॥ ೩೧ ॥

'ಪಂಡಿತಾಃ ಸಮದರ್ಶಿನಃ' ಎಂಬಲ್ಲಿ ಹೇಳಿದ ಸಮದರ್ಶನವನ್ನು ಭಗವದ್ವಿಷಯದಲ್ಲಿ ನಿರೂಪಿಸಿದರೂ, ಈಗ ಭಗವದ್ಭಕ್ತರಲ್ಲಿಯೂ ಸಮ ದರ್ಶನವು ಆವಶ್ಯಕವಾದ ಕಾರಣ ಆ ಸಮದರ್ಶಿತ್ವವನ್ನು ಇಲ್ಲಿ ಶ್ರೀಕೃಷ್ಣನು

॥ ಅರ್ಜುನ ಉವಾಚ ॥

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥೩೩॥**

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪ ॥**

---

ವಿಶದೀಕರಿಸುವನು. ಯಾರು ತನಗೆ ಸುಖವು ಪ್ರಿಯವೂ, ದುಃಖವು ಅಪ್ರಿಯವೂ ಆಗಿರುವಂತೆ ಭಗವದ್ಭಕ್ತರಿಗೂ ಅವುಗಳು ಹಾಗೆ ಪ್ರಿಯಾಪ್ರಿಯಗಳೆಂದು ತಿಳಿದು ಅವರಿಗೂ ಪ್ರಿಯವಾದ ಸುಖವನ್ನೇ ಅಪೇಕ್ಷಿಸುವನೋ, ಆ ಯೋಗಿಯು ಉತ್ತಮನು. ॥ ೩೨ ॥

ಅರ್ಜುನನು ಶ್ರೀಪರಮಾತ್ಮನಲ್ಲಿ ನೀನು ಹೇಳಿದ ರೀತಿಯ ಯೋಗವು ಸಾಧಿಸಲು ಶಕ್ಯವೋ, ಎಂಬ ತನ್ನ ಸಂಶಯವನ್ನು ಪರಿಹರಿಸೆಂದು ಕೋರುವನು. ಇಲ್ಲಿ ಬ್ರಹ್ಮನಿಗೆ ಕ್ಷೋಭೆಯನ್ನುಂಟುಮಾಡಿದ ಮಧುನಾಮಕ ದೈತ್ಯನನ್ನು ಸಂಹರಿಸಿ ಅವನಿಗೆ ತಪಃಶಾಂತಿಯನ್ನು ಮಾಡಿಕೊಟ್ಟಂತೆ ಪುರುಷಾರ್ಥವಿರೋಧಿಯಾದ ನನ್ನ ಈ ಶಂಕೆಯನ್ನು ಪರಿಹರಿಸಲು ನೀನು ಶಕ್ತನಿದ್ದು ಪರಿಹರಿಸಬೇಕೆಂಬ ಅಭಿಪ್ರಾಯವನ್ನು ಸೂಚಿಸಲಿಕ್ಕಾಗಿ 'ಮಧುಸೂದನ' ಎಂಬ ಪದವನ್ನು ಹೇಳಿದುದು. ಎಲೈ ಮಧುಸೂದನನೇ! ನೀನೇನೋ ಈವರೆಗೆ ಭಗವಂತನಲ್ಲಿಯೂ ತದ್ಭಕ್ತರಲ್ಲಿಯೂ ಸಮದರ್ಶನವನ್ನು ಮಾಡಬೇಕೆಂದು ಹೇಳಿರುವೆ. ಈ ವಿಷಯದಲ್ಲಿ ತತ್ತ್ವನಿಶ್ಚಯವನ್ನು ಚಂಚಲನಾದುದರಿಂದ ನಾನು ಹೊಂದುವುದಿಲ್ಲ. ॥ ೩೩ ॥

ಇದಕ್ಕೆ ಉತ್ತರವಾಗಿ ಮನಸ್ಸು ನಿಗೃಹೀತವಾದರೆ ಯೋಗವು ಸಿದ್ಧಿಸುವುದೆಂದರೆ, ಪುನಃ ಅರ್ಜುನನು ಶಂಕಿಸುವನು. ಮನಸ್ಸು ಚಂಚಲವಾದುದೆಂದು (ಹಿ) ಪ್ರಸಿದ್ಧವಾದುದು. ಮತ್ತು ದೇಹೇಂದ್ರಿಯಾದಿಗಳನ್ನು ಕಳವಳಪಡಿಸುವಂತಹುದು. ವಿವೇಕದಿಂದಲೂ ಜಯಿಸಲು ಕಷ್ಟಸಾಧ್ಯವಾದುದು. ಆದುದರಿಂದ ಆಕಾಶಮಧ್ಯಗತವಾದ ಪ್ರಚಂಡ ಗಾಳಿಯನ್ನು

॥ ಶ್ರೀಭಗವಾನುವಾಚ ॥

ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।
ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥
ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।
ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬ ॥

॥ ಅರ್ಜುನ ಉವಾಚ ॥

ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।
ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭ ॥

---

ವಸ್ತ್ರದಿಂದ ಹಿಡಿಯುವಂತೆ ಈ ಮನೋನಿಗ್ರಹವೂ ಅಶಕ್ಯವೇ ಎಂದು ತಿಳಿಯುವೆನು. ॥ ೩೪ ॥

ಅರ್ಜುನನ ಶಂಕೆಯನ್ನು ಪರಮಾತ್ಮನು ಪರಿಹರಿಸುವನು. ಎಲೈ ಪರಾಕ್ರಮಿಯಾದ ಅರ್ಜುನನೆ! ಮನಸ್ಸು ಚಂಚಲವಾದುದೆಂದೂ, ಜಯಿಸಲಸಾಧ್ಯವೆಂದೂ ನೀನೆನ್ನುವುದು ಸತ್ಯವು. ಆದರೂ ಸತತ ಪ್ರಯತ್ನ ಮತ್ತು ವೈರಾಗ್ಯದಿಂದ ಜಯಿಸಲು ಶಕ್ಯವಿದೆ. ನೀನಾದರೂ ಜಯಿಸಲು ಶಕ್ತನಿದ್ದಿ—ಎಂದು ತಿಳಿಸಲು 'ಕೌಂತೇಯ' ಎಂದು ಸಂಬೋಧಿಸಿದುದು. ಅದು ಹೇಗೆಂದರೆ ದುರ್ವಾಸರು ಜಗತ್ತಿಗೆ ಕ್ರೋಧಮೂರ್ತಿಯಾದ ಮುನಿಯಾಗಿದ್ದರೂ, ಅಂತಹ ದುರ್ವಾಸರನ್ನು ಕುಂತಿಯು ತನ್ನ ಸತತ ವಿರಕ್ತಿ ಪೂರ್ವಕ ಸೇವೆಯಿಂದ ಪ್ರಸನ್ನೀಕರಿಸಿರುವಳು. ಅವಳ ಕುವರನಾದ ನಿನಗಿದು ಶಕ್ಯವೆಂದು ಅಭಿಪ್ರಾಯವು. ॥ ೩೫ ॥

ಮದೋನ್ಮತ್ತವಾದ ಆನೆಯು ಒಂದಾನೊಂದು ಸಮಯ ಬಳಲಿ ತಾನಾಗಿ ದಾರಿಗೆ ಬಂದರೂ ಇಂದ್ರಿಯನಿಗ್ರಹಾದಿರೂಪ ಪ್ರಯತ್ನ ಇಲ್ಲದೆ ಮನಸ್ಸು ದಾರಿಗೆ ಬರಲಾರದು. ಆದುದರಿಂದ ಮನೋನಿಗ್ರಹವಿಲ್ಲದವನಿಂದ ಯೋಗವು ಹೊಂದಲ್ಪಡಲು ಅಶಕ್ಯವೆಂದು ನನ್ನ ಅಭಿಪ್ರಾಯ. ನಿಗ್ರಹಿಸಲ್ಪಟ್ಟ ಮನಸ್ಸುಳ್ಳ ಮತ್ತು ಮನೋನಿಗ್ರಹದಲ್ಲಿ ಪ್ರಯತ್ನಿಸುತ್ತಿರುವ (ಯಜ್ಞಾದಿಸಾಧನವನ್ನು ಮಾಡುತ್ತಿರುವ) ಮನುಷ್ಯನಿಂದ ಈ ಧ್ಯಾನ ಯೋಗವು ಹೊಂದಲ್ಪಡಲು ಶಕ್ಯವಿದೆ. ॥ ೩೬ ॥

ಕಚ್ಚಿನ್ನೋಭಯವಿಭ್ರಷ್ಟಃ ಛಿನ್ನಾಭ್ರಮಿವ ನಶ್ಯತಿ ।
ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥೩೮॥

ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।
ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯ ॥

॥ ಶ್ರೀಭಗವಾನುವಾಚ ॥

ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।
ನಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥ ೪೦ ॥

ಪ್ರಾಪ್ಯ ಪುಣ್ಯಕೃತಾನ್ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥

---

ಅರ್ಜುನನು ಶಂಕಿಸುವನು. ಹೇ ಕೃಷ್ಣ! ಆಸ್ತಿಕ್ಯಬುದ್ಧಿಯಿಂದೊಡಗೂಡಿ ಯೋಗದಿಂದ ಸಂಶಯಯುತ ಮನಸ್ಸುಳ್ಳ ಆತ ಏವ ಪ್ರಯತ್ನವಿಲ್ಲದೆ ಯೋಗದ ಸಿದ್ಧಿಹೊಂದದಿರುವಾತನು ಯಾವ ಗತಿಯನ್ನು ಹೊಂದುವನು? ॥ ೩೭ ॥

ಅಂತಹನು ಐಹಿಕಾಮುಷ್ಮಿಕರೂಪವಾದ ದ್ವಿವಿಧ ಪುರುಷಾರ್ಥದಿಂದ ಭ್ರಷ್ಟನಾಗಿ, ಆದುದರಿಂದಲೇ ಆಶ್ರಯವಿಲ್ಲದವನಾಗಿ, ಬ್ರಹ್ಮಪ್ರಾಪ್ತಿಸಾಧನವಾದ ಮಾರ್ಗದಲ್ಲಿ ಮೋಹಿತನೂ ಆದಪ್ರಯುಕ್ತ ಬಲವತ್ತಾದ ಗಾಳಿಯಿಂದ ಸೀಳಲ್ಪಟ್ಟ ಮೇಘದಂತೆ ನಾಶವನ್ನು ಹೊಂದುವನೋ, ಎಂದರೆ ನರಕಾದ್ಯನರ್ಥವನ್ನು ಭೋಗಿಸುವನೋ ಅಥವಾ ಇಲ್ಲವೋ? ॥ ೩೮ ॥

ಹೇ ಕೃಷ್ಣ! ಈ ಸಂಶಯವನ್ನು ಸಂಪೂರ್ಣವಾಗಿ ಪರಿಹರಿಸಲಿಕ್ಕೆ ನೀನೇ ಸಮರ್ಥನಿರುತ್ತೀಯಲ್ಲದೆ ಇತರರು ಯಾರೂ ಶಕ್ತರಿಲ್ಲ. ॥ ೩೯ ॥

ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣನು ಉತ್ತರವನ್ನೀಯುವನು. ಎಲೈ ಅರ್ಜುನನೇ! ಅಂತಹ ಯೋಗಭ್ರಷ್ಟನಿಗೆ ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ನಾಶವಿಲ್ಲ. ಈ ಲೋಕದಲ್ಲಿ ನಾಶವೆಂದರೆ ಹೀನಯೋನಿಯಲ್ಲಿ ಜನಿಸುವಿಕೆಯು. ಪರಲೋಕದಲ್ಲಿ ನಾಶವೆಂದರೆ ನರಕಾದಿಗಳು. ಇವೆರಡೂ ಯೋಗಭ್ರಷ್ಟನಿಗೆ ಉಂಟಾಗುವುದಿಲ್ಲ. ಏಕೆಂದರೆ ಸ್ವಲ್ಪ

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨ ॥**
**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩ ॥**
**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪ ॥**

---

ಕಾಲದಲ್ಲಿಯಾದರೂ ಧ್ಯಾನರೂಪವಾದ ಶುಭಕರ್ಮವನ್ನು ಮಾಡಿದ ಮನುಷ್ಯನು ದುರ್ಗತಿಯನ್ನು ಹೊಂದುವುದಿಲ್ಲ. ॥ ೪೦ ॥

ಹಾಗಾದರೆ ಆವನಿಗೆ ಯಾವ ದಿಶೆಯು ಪ್ರಾಪ್ತವಾಗುವುದೆಂದರೆ ಪುಣ್ಯದಿಂದ ಸಂಪಾದ್ಯವಾದ ಲೋಕವನ್ನು ಹೊಂದಿ ಆ ಲೋಕದಲ್ಲಿಯೇ ಬಹು ಸಂವತ್ಸರಗಳಲ್ಲಿ ವಾಸಮಾಡಿಕೊಂಡಿದ್ದು ಆ ಮೇಲೆ ಒಳ್ಳೆಯ ಪವಿತ್ರವಾದ ಧನಿಕರ ಮನೆಯಲ್ಲಿ ಆ ಯೋಗಭ್ರಷ್ಟನು ಜನ್ಮವೆತ್ತುವನು. ॥ ೪೧ ॥

ಅಥವಾ ಜ್ಞಾನಸಂಪನ್ನರಾದ ಯೋಗಿಗಳ ವಂಶದಲ್ಲಾಗಲೀ ಜನ್ಮವನ್ನು ತಾಳುತ್ತಾನೆ. ಇಂತಹ ಧನಿಕರ ಅಥವಾ ಯೋಗಿಗಳ ಕುಲದಲ್ಲಿ ಜನ್ಮವು ಸುಲಭಸಾಧ್ಯವಲ್ಲ. ॥ ೪೨ ॥

ಕುರುವಂಶತೋಷಕನಾದ ಅರ್ಜುನ! ಆವೆರಡು ಕುಲಗಳಲ್ಲಿ ಪ್ರಸೂತನು ಪೂರ್ವದೇಹದಲ್ಲಿ ಮಾಡಿದ ಪರಮಾತ್ಮಧ್ಯಾನರೂಪವಾದ ಯೋಗವನ್ನು ಹೊಂದುವನು. ಅದಲ್ಲದೆ ಪೂರ್ವದೇಹದಲ್ಲಿ ಮಾಡಿದುದಕ್ಕಿಂತಲೂ ಅಧಿಕವಾಗಿ ಧ್ಯಾನವನ್ನು ಪೂರ್ತಿಮಾಡುವ ವಿಷಯದಲ್ಲಿ ಯತ್ನವನ್ನು ಮಾಡಲು ಶಕ್ತನಾಗುವನು. ॥ ೪೩ ॥

ಇಂತಹ ಯೋಗಭ್ರಷ್ಟನು ಧ್ಯಾನದಲ್ಲಿ ಬುದ್ಧಿಪೂರ್ವಕವಾದ ಪ್ರವೃತ್ತಿಯಿಲ್ಲದವನಾದರೂ ಪೂರ್ವಜನ್ಮದ ಸಂಸ್ಕಾರಬಲದಿಂದ ಧ್ಯಾನದಲ್ಲಿಯೇ ಪ್ರವೃತ್ತಿಯುಳ್ಳವನಾಗುವನು. ಈ ಧ್ಯಾನಯೋಗವನ್ನು (ಜಿಜ್ಞಾಸುರಪಿ) ಕೇವಲ ತಿಳಿಯಲಿಚ್ಛೆ ಉಳ್ಳವನೂ ಕೂಡಾ ಶಬ್ದಬ್ರಹ್ಮನನ್ನು ಅತಿಕ್ರಮಿಸು

ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।
ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ೪೫ ॥

ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।
ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥

---

ತ್ತಾನೆ; ಎಂದರೆ ವಿಧಿನಿಷೇಧವಿಲ್ಲದವನಾಗುವನು. ಹೀಗಿರಲು ಸ್ವಲ್ಪ ಸಮಯವಾದರೂ ಧ್ಯಾನಮಾಡುವವನಿಗೆ ಉತ್ತಮಲೋಕ ಪ್ರಾಪ್ತಿಯಾಗುವುದೆಂದು ಏನು ಹೇಳುವುದು? ॥ ೪೪ ॥

ಕೇವಲ ಜಿಜ್ಞಾಸುವಿಗೂ ಮೋಕ್ಷವಾಗುವುದಾದರೆ ಧ್ಯಾನಮಾಡುವುದು ವ್ಯರ್ಥವೆಂಬ ಆಕ್ಷೇಪಕ್ಕೆ ಉತ್ತರವನ್ನು ಕೊಡುವನು. ಜಿಜ್ಞಾಸುವಾಗಿ ಇದ್ದವನೂ ಕೂಡಾ ಪ್ರಯತ್ನವನ್ನು ಮಾಡುತ್ತಾ ಧ್ಯಾನಯೋಗವುಳ್ಳವನಾಗಿ ಅದರಿಂದ ಪಾಪಕರ್ಮಗಳನ್ನು ಕಳೆದುಕೊಂಡು ಅನೇಕ ಜನ್ಮಗಳಲ್ಲಿ ಮಾಡಿದ ಧ್ಯಾನದಿಂದ ಅಪರೋಕ್ಷಜ್ಞಾನವನ್ನು ಹೊಂದಿ ಆದರಿಂದ ಮೋಕ್ಷವನ್ನು ಹೊಂದುವನು. ॥ ೪೫ ॥

ಈ ವರೆಗೆ ಹೇಳಿದ ಧ್ಯಾನಯೋಗವನ್ನು ಶ್ರೀಕೃಷ್ಣನು ಪ್ರಶಂಸಾ ಮಾಡುತ್ತಾನೆ. ಎಲೈ ಅರ್ಜುನ! ಧ್ಯಾನವುಳ್ಳವನು ಕೃಚ್ಛ್ರಚಾಂದ್ರಾಯಣಾದಿ ತಪಸ್ಸುಳ್ಳವರಿಗಿಂತ ಉತ್ತಮನು. ಮತ್ತು ಯಜ್ಞಾದಿ ಕರ್ಮವುಳ್ಳವರಿಗಿಂತಲೂ ಉತ್ತಮನು. ಹೀಗೆ ಎಲ್ಲಾ ಸಾಧನಗಳಿಗಿಂತಲೂ ಯೋಗವು ಉತ್ತಮವಾದ ಪ್ರಯುಕ್ತ ನೀನು ಅಂತಹ ಧ್ಯಾನರೂಪಯೋಗವುಳ್ಳವನಾಗು ॥ ೪೬ ॥

ಹೀಗೆ ಯೋಗದ ಉತ್ತಮತ್ವವನ್ನು ಹೇಳಿ ಯೋಗವುಳ್ಳವರಲ್ಲಿ ತಾರತಮ್ಯವನ್ನು ನಿರೂಪಿಸುತ್ತಾನೆ. ಧ್ಯಾನರೂಪಯೋಗವುಳ್ಳವರಲ್ಲಿ ಭಕ್ತಿಯುಳ್ಳವನು ಯುಕ್ತನೆಂದೆನ್ನಿಸಿಕೊಳ್ಳುವನು. ಆದರಲ್ಲಿಯೂ ಭಕ್ತಿಯಿಂದೊಡಗೂಡಿ ನನ್ನ ಸೇವೆಮಾಡುವವನು ಯುಕ್ತತರನೆಂದೂ, ನನ್ನಲ್ಲಿ ಮನಸ್ಸಿಟ್ಟು

ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।
ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ
ಮತಃ ॥ ೪೭ ॥

॥ ಇತಿ ಷಷ್ಠೋಽಧ್ಯಾಯಃ ॥

---

ಎಂದರೆ ಫಲೇಚ್ಛೆಯಿಲ್ಲದವನಾಗಿ ನನ್ನ ಸೇವೆಯನ್ನು ಭಕ್ತಿಪೂರ್ವಕವಾಗಿ ಮಾಡತಕ್ಕವನು ಯುಕ್ತತಮನೆಂದೂ ಎನ್ನಿಸಿಕೊಳ್ಳುವನು. ॥ ೪೭ ॥

# ಸಪ್ತಮೋऽಧ್ಯಾಯಃ

॥ ಶ್ರೀಭಗವಾನುವಾಚ ॥

ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥

ಜ್ಞಾನಂ ತೇऽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।
ಯಜ್ಜ್ಞಾತ್ವಾ ನೇಹ ಭೂಯೋऽನ್ಯಜ್ಜ್ಞಾತವ್ಯಮವಶಿಷ್ಯತೇ ॥ ೨ ॥

---

ಪರಮಾತ್ಮನ ಜ್ಞಾನಕ್ಕೆ ಫಲಕಾಮನಾವನ್ನು ಬಿಟ್ಟು ಮಾಡುವ ಕರ್ಮವೂ ಧ್ಯಾನವೂ ಈ ಎರಡುಪಾಯಗಳನ್ನು ಹಿಂದಿನ 5 ಅಧ್ಯಾಯಗಳಲ್ಲಿ ಕರ್ಮರೂಪ ಉಪಾಯವನ್ನೂ 6ನೇ ಅಧ್ಯಾಯದಲ್ಲಿ ಧ್ಯಾನರೂಪವಾದ ಉಪಾಯವನ್ನೂ ಈ ವರೆಗೆ ನಿರೂಪಿಸಿ ಇನ್ನು ಮೇಲೆ 6 ಅಧ್ಯಾಯಗಳಲ್ಲಿ ಕೇವಲ ಧ್ಯಾನವಾಗಲೀ, ಚೈದ್ಯಾದಿಗಳಂತೆ ದ್ವೇಷಪೂರ್ವಕ ಧ್ಯಾನವಾಗಲೀ ಜ್ಞಾನಕ್ಕೆ ಉಪಾಯವಲ್ಲ. ಕಿಂತು ಭಕ್ತಿಪೂರ್ವಕವಾಗಿ ಮಾಡುವ ಧ್ಯಾನವೇ ಜ್ಞಾನಸಾಧನವು. ಆದಕಾರಣ ಪರಮಾತ್ಮನಲ್ಲಿ ಭಕ್ತಿ ಹುಟ್ಟುವುದಕ್ಕೋಸ್ಕರ ಅವನ ಮಾಹಾತ್ಮ್ಯೆಯು 12 ಅಧ್ಯಾಯಪರ್ಯಂತ ನಿರೂಪಿಸಲ್ಪಡುತ್ತದೆ. ಈ ಅಭಿಪ್ರಾಯದಿಂದ ಕೇಳುವವನನ್ನು ಅಭಿಮುಖನನ್ನಾಗಿ ಮಾಡುವ ಉದ್ದಿಶ್ಯ ಹೇಳಲಿರುವ ವಿಷಯದ ಪ್ರತಿಜ್ಞೆಯನ್ನು ಶ್ರೀಕೃಷ್ಣನು ಮಾಡುವನು—ಎಲೊ ಪಾರ್ಥನೆ, ಶ್ರೀಕೃಷ್ಣನಾದ ನನ್ನಲ್ಲಿ ಅತ್ಯಂತ ಆಸಕ್ತವಾದ ಮನಸ್ಸುಳ್ಳವನಾಗಿ (ಅತಿಸ್ನೇಹದಿಂದ ಕೂಡಿದ ಮನಸ್ಸುಳ್ಳವನು) ಯೋಗವನ್ನು ಅಂದರೆ ಹಿಂದೆ ಹೇಳಿದ ಕರ್ಮ ಧ್ಯಾನರೂಪ ಎರಡು ವಿಧ ಉಪಾಯಗಳನ್ನು ಮಾಡುವವನು, ಹಾಗೆಯೇ ಪರಮಾತ್ಮನೇ ನನ್ನಿಂದ ಎಲ್ಲ ಮಾಡಿಸುತ್ತಾನೆ, ಅವನೇ ನನಗೆ ರಕ್ಷಕನು, ನಾನು ಆತನ ಆಶ್ರಯದಲ್ಲಿರುವವನು, ಹೀಗೆ ಮದಾಶ್ರಯನೂ ಆಗಿ ಸಂದೇಹವಿಲ್ಲದೆ ಪೂರ್ಣವಾಗಿ ನನ್ನನ್ನು ಯಾವ ಪ್ರಕಾರದಿಂದ ತಿಳಿಯುತ್ತೀಯೋ, ಹಾಗೆ ನನ್ನ ಜ್ಞಾನದಾಯಕವಾದ ನನ್ನ ವಚನವನ್ನು ಕೇಳು. ॥ ೧ ॥

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥
ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥
ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್

---

ಪಾರ್ಥನೆ, ನಾನು ನಿನಗೋಸ್ಕರ ಈ ನನ್ನ ಸಂಬಂಧಿಯಾದ ವಿಶೇಷ ವಿಷಯಗಳಿಂದ ಕೂಡಿದ, ಮಾಹಾತ್ಮ್ಯರೂಪ ಸಾಮಾನ್ಯ ಜ್ಞೇಯವನ್ನು ಪೂರ್ಣವಾಗಿ ಹೇಳುತ್ತೇನೆ. ಸಾಮಾನ್ಯ ವಿಶೇಷರೂಪವಾಗಿ ತಿಳಿಯಲು ಯೋಗ್ಯವಾದ ಮಾಹಾತ್ಮ್ಯವನ್ನು ತಿಳಿಸುವೆನೆಂದರ್ಥ. ವಿಶ್ವಾಸ ಹುಟ್ಟುವುದಕ್ಕೋಸ್ಕರ ಮುಂದೆ ಹೇಳುವ ವಿಷಯವನ್ನು ಸ್ತುತಿಸುವನು. ಯಾವ ಮಾಹಾತ್ಮ್ಯವನ್ನು ತಿಳಿದುಕೊಂಡರೆ ನಾನು ಹೇಳಿದ ಅರ್ಥದಲ್ಲಿ ತಿಳಿಯಲು ಯೋಗ್ಯವಾದದ್ದು ಬೇರೆ ಉಳಿಯುವದಿಲ್ಲ. ॥ ೨ ॥

ತಾನು ಹೇಳುವುದರಲ್ಲಿ ಆದರ ಹುಟ್ಟುವುದಕ್ಕೋಸ್ಕರ ಆ ಜ್ಞಾನವೆಂಬುದು ದುರ್ಲಭವೆಂತ ಹೇಳುತ್ತಾನೆ. ಸಹಸ್ರಾರು ಮನುಷ್ಯರುಗಳಲ್ಲಿ ಯಾರಾದರೂ ಒಬ್ಬ ಪುಣ್ಯಪುರುಷನು ಜ್ಞಾನಸಂಪಾದನೆಗೋಸ್ಕರ ಯತ್ನಿಸುವನು. ಹಾಗೆ ಯತ್ನಿಸಿ ಜ್ಞಾನವನ್ನು ಹೊಂದಿದವರ ಮಧ್ಯದಲ್ಲಿ ಮಹಾಭಾಗ್ಯಶಾಲಿಯಾದ ಒಬ್ಬನು ನನ್ನನ್ನು ಯಥಾರ್ಥವಾಗಿ ತಿಳಿಯುವನು. ॥೩॥

ಪ್ರತಿಜ್ಞಾತವಾದ ಮಾಹಾತ್ಮ್ಯೆಯನ್ನು ಮುಂದಿನ 4 ಶ್ಲೋಕಗಳಲ್ಲಿ ನಿರೂಪಿಸುವನು. ಪೃಥಿವ್ಯಾದಿ ಪಂಚ ಮಹಾಭೂತಗಳೂ, (ಪೃಥಿವಿ-ಜಲ ತೇಜಸ್ಸು-ವಾಯು-ಆಕಾಶ) ಮನಸ್ತತ್ವ ಬುದ್ಧಿತತ್ವಗಳೂ ಅಹಂಕಾರ ತತ್ವವೂ, ಈ ಪ್ರಕಾರ 8 ವಿಧವಾಗಿ ಭಿನ್ನವಾದ ಪ್ರಕೃತಿಯು ನನ್ನ ಅಧೀನವಾದದ್ದು. ॥ ೪ ॥

ತನ್ನ ಕಾರ್ಯಗಳಿಂದ ಕೂಡಿದ ಜಡಪ್ರಕೃತಿಯೂ ಬ್ರಹ್ಮಾದಿಜಗತ್ತಿಗೆ ಮಾತೃಸ್ಥಾನಳಾದ ಚಿತ್ಪ್ರಕೃತಿಯೂ ಕೂಡಾ ನನ್ನ ಅಧೀನವೆಂತ

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥

ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥

ರಸೋಽಹಮಪ್ಸು ಕೌಂತೇಯ ಪ್ರಭಾಽಸ್ಮಿ ಶಶಿಸೂರ್ಯಯೋಃ ।
ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥

---

ಹೇಳುತ್ತಾನೆ. ಈಗ ಹೇಳಿದ ಈ ಜಡಪ್ರಕೃತಿಯು ಅಪರಾ ಅಂದರೆ ಅಧಮವಾದದ್ದು. ಇದರಿಂದ ಭಿನ್ನವಾದ ಸಕಲ ಜೀವರ ದೇಹದಲ್ಲಿ ಪ್ರಾಣ ಧಾರಕಳಾಗಿ ಸರ್ವದಾ ಇರುವ ಉತ್ತಮ ಚಿತ್ಪ್ರಕೃತಿಯನ್ನು ಕೂಡ ನನ್ನ ಅಧೀನಳನ್ನಾಗಿ ತಿಳಿ. ಯಾಕೆಂದರೆ ಯಾವ ಚಿತ್ಪ್ರಕೃತಿಯಿಂದ (ಲಕ್ಷ್ಮಿಯಿಂದ) ಬ್ರಹ್ಮಾದಿ ಸಕಲ ಜಗತ್ತು ಧರಿಸಲ್ಪಡುತ್ತದೋ. ॥ ೫ ॥

ಇನ್ನೂ ಅನೇಕ ಪದಾರ್ಥಗಳಿದ್ದರೂ ಅವೆಲ್ಲವುಗಳೂ ಈ ಎರಡು ಪ್ರಕೃತಿಗಳ ಕಾರ್ಯಗಳಾದ ಕಾರಣ ಈ ಎರಡರಲ್ಲಿಯೇ ಸೇರಿಸಿ ಎರಡನ್ನು ಪರಮಾತ್ಮನ ಅಧೀನವೆಂತ ಹೇಳಿದ್ದು ಎಂಥ ತಿಳಿಸುವುದಕ್ಕೋಸ್ಕರ ಮೇಲಿನ ಶ್ಲೋಕವು ಹೊರಟಿದೆ. ಎಲ್ಲಾ ಭೂತಗಳೂ ಈ ಪ್ರಕೃತಿಗಳ ಕಾರಣವಾಗಿ ಉಳ್ಳವುಗಳು. ಅಂದರೆ ಅವುಗಳಿಂದ ಸೃಷ್ಟವೆಂತ ತಿಳಿ. ಅವುಗಳ ದ್ವಾರಾ ಸಕಲ ಜಗತ್ತಿನ ಉತ್ಪತ್ತಿಗೂ ನಾಶಕ್ಕೂ ಕಾರಣನು ನಾನೇ. ಅಂದರೆ ಸರ್ವ ಜಗತ್ಕರ್ತೃ ನಾಶಕನೂ ತಾನೇ ಎಂದರ್ಥ. ನನ್ನಕ್ಕಿಂತ ಉತ್ತಮವಾದ ವಸ್ತು ಅನ್ಯವಾದದ್ದಿಲ್ಲ. ॥ ೬ ॥

ರಜ್ಜುವಿನಲ್ಲಿ ಮಣಿಗಳು ಆಶ್ರಯಿಸಿಕೊಂಡಿರುವಂತೆ ಈ ಸಮಸ್ತ ಜಗತ್ತು ನನ್ನಲ್ಲಿಯೇ, ಸಂಬದ್ಧವಾಗಿದೆ. ಅಂದರೆ ಉತ್ಪತ್ತಿ ಸಂಹಾರಕರ್ತೃ ಮಾತ್ರ ನಾನೆಂದರ್ಥವಲ್ಲ, ಪಾಲಕನೂ ನಾನೇ ಎಂದರ್ಥ. ॥ ೭ ॥

ಹೀಗೆ ಸಾಮಾನ್ಯವಾದ ಜ್ಞಾತವ್ಯವನ್ನು ತಿಳಿಸಿ ವಿಶೇಷ ಜ್ಞಾತವ್ಯವನ್ನು ಅಂದರೆ ಪರಮಾತ್ಮನ ಅಲೌಕಿಕವಾದ ವಿಶೇಷ ಮಹಿಮೆಯನ್ನು ಶ್ರೀ ಕೃಷ್ಣನು ನಿರೂಪಿಸುತ್ತಾನೆ, ಜಲಗಳಲ್ಲಿ ರಸಾಖ್ಯಗುಣವೂ, ಚಂದ್ರ

ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥

ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥ ೧೦ ॥

---

ಸೂರ್ಯರಲ್ಲಿರುವ ಪ್ರಭೆಯೂ, ಸರ್ವ ವೇದಗಳಲ್ಲಿ ಸಾರಭೂತವಾದ ಪ್ರಣವ (ಓಂಕಾರ) ಶಬ್ದವು ಆಕಾರದಲ್ಲಿಯೂ ಮನುಷ್ಯರಲ್ಲಿರುವ ಪುರುಷತ್ವವೂ, ಪೃಥಿವಿಯಲ್ಲಿರುವ ಶುಭ ಗಂಧವೂ, ಸೂರ್ಯನಲ್ಲಿರುವ ದಾಹಕತ್ವರೂಪವಾದ ಶಕ್ತಿಯೂ, ಸರ್ವ ಪ್ರಾಣಿಗಳಲ್ಲಿರುವ ಜೀವನವೂ. ತಪಸ್ವಿಗಳಲ್ಲಿರುವ ಕೃಚ್ಛ್ರ ಚಾಂದ್ರಾಯಣಾದಿತಪಸ್ಸೂ ಇವುಗಳೆಲ್ಲಾ ನಾನೇ ಆಗಿದ್ದೇನಾಗಿ ತಿಳಿ. ॥ ೮ ॥

ಇಲ್ಲಿ ಜಲದಲ್ಲಿ ಪ್ರಧಾನಗುಣವಾದ ರಸವು ಪರಮಾತ್ಮನೂ ಒಂದೇ ಎಂದರ್ಥವಲ್ಲ. ಮತ್ತೆ ರಾಷ್ಟ್ರವು ರಾಜನಿಂದ ನಿಯಮಿಸಿಕೊಳ್ಳುವ ಪ್ರಯುಕ್ತ "ರಾಜಾ ರಾಷ್ಟ್ರಂ"ಎಂತ ವ್ಯವಹಾರವಿದ್ದಂತೆ ಜಲದಲ್ಲಿ ರಸಗುಣವಿರಲಿಕ್ಕೂ, ಜಲಗುಣಗಳಲ್ಲಿ ರಸವು ಮುಖ್ಯವಾಗಲಿಕ್ಕೂ, ಆ ಗುಣದಲ್ಲಿ ರಸತ್ವವು ಬರಲಿಕ್ಕೂ, ಅಂದರೆ ಅದು ರಸವೆಂತಾಗಲಿಕ್ಕೂ, ಪರಮಾತ್ಮನೇ ಕಾರಣನಾದ ಪ್ರಯುಕ್ತ ರಸನೆಂತ ಅನಿಸಿಕೊಂಡಿದ್ದಾನೆ. ಹೀಗೆಯೇ ಚಂದ್ರ ಸೂರ್ಯರಲ್ಲಿ ಅತಿಶಯಿತ ಪ್ರಭೆಯು ಬರಲಿಕ್ಕೂ, ಚಂದ್ರ ಸೂರ್ಯರಲ್ಲಿರುವ ಗುಣಗಳಲ್ಲಿ ಪ್ರಭೆಯು ಮುಖ್ಯವಾಗಲಿಕ್ಕೂ, ಆ ಗುಣವು ಪ್ರಭೆಯೆಂತ ಆಗಲಿಕ್ಕೂ, ಪರಮಾತ್ಮನೇ ಕಾರಣನಾದ ಪ್ರಯುಕ್ತ ನಾನೇ ಪ್ರಭೆಯು ಆಗಿದ್ದೇನೆ ಎಂತ ಹೇಳಿದ್ದು ಹೊರತು ಪ್ರಭೆಗೂ ಪರಮಾತ್ಮನಿಗೂ ಅಭೇದವಲ್ಲ. ಇದೇ ರೀತ್ಯಾ ಮೇಲಿನ ವಾಕ್ಯಗಳಿಗೂ ಅರ್ಥವನ್ನು ಮಾಡಿಕೊಳ್ಳಬೇಕು. ಗ್ರಂಥದ ವಿಸ್ತಾರಭೀತಿಯಿಂದ ಪ್ರತಿಯೊಂದನ್ನೂ ಬಿಡಿಸುವುದಿಲ್ಲ. ॥ ೯ ॥

ಎಲೋ ಪಾರ್ಥನೇ, ಸರ್ವಭೂತಗಳಿಗೂ ವ್ಯಂಜಕನನ್ನಾಗಿ ನನ್ನನ್ನು ತಿಳಿ. ಜ್ಞಾನಿಗಳಲ್ಲಿ ಇರುವ ಬುದ್ಧಿಯೂ, ತೇಜಸ್ಸುಳ್ಳ ಪದಾರ್ಥಗಳಲ್ಲಿರುವ ತೇಜಸ್ಸೂ ನಾನೇ ಎಂತ ತಿಳಿ. ॥ ೧೦ ॥

**ಬಲಂ ಬಲವತಾಮಸ್ಮಿ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥**
**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥**

---

ಬಲವುಳ್ಳ ಪದಾರ್ಥಗಳಲ್ಲಿ ಕಾಮರಾಗರಹಿತವಾದ ಬಲವೂ, ಭೂತಗಳಲ್ಲಿರುವ ಧರ್ಮಕ್ಕೆ ಅವಿರೋಧಿಯಾದ ಕಾಮನಾವೂ ನಾನೇ ಆಗಿದ್ದೇನೆ. ಪರಮಾತ್ಮನು ಬಲ ಕಾಮ ಎಂತೆಂದರೆ ಅವುಗಳಿಗೆ ನಿಯಾಮಕನು ಇತ್ಯಾದ್ಯರ್ಥಗಳನ್ನು ಹಿಂದೆ ಹೇಳಿರುವೆವು. ಹಾಗಾದರೆ ಕಾಮರಾಗಸಹಿತವಾದ ಬಲಕ್ಕೂ ಧರ್ಮ ವಿರುದ್ಧವಾದ ಕಾಮನಾಕ್ಕೂ ಪರಮಾತ್ಮನು ನಿಯಾಮಕನಲ್ಲವೋ ಎಂತ ಶಂಕೆಯು ಉದಿಸೀತು. ಆದರೆ ಹಾಗೆ ಸರ್ವಾತ್ಮನಾ ತಿಳಿಯಬಾರದು ಪರಮಾತ್ಮನು ಸರ್ವಪದಾರ್ಥಕ್ಕೂ ನಿಯಾಮಕನೆ. ಆದ್ದರಿಂದಲೇ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಯಲ್ಲಿ ಸಂಕೋಚವಿಲ್ಲದೆ ಸರ್ವಂ ಬ್ರಹ್ಮ ಎಂತ ಹೇಳಿಯದೆ. ಹೀಗಿರುವಲ್ಲಿ ಗೀತಾದಲ್ಲಿ ಪುಣ್ಯಗಂಧ ಕಾಮರಾಗವರ್ಜಿತ ಬಲ ಧರ್ಮಾವಿರುದ್ಧಕಾಮ ಎಂತ ವಿಶಿಷ್ಯ ಹೇಳಿದ್ದು. ಪರಮಾತ್ಮನು ಸರ್ವಗತನಾದರೂ ಉಪಾಸನಾಮಾಡುವಾಗ ಶುಭಪದಾರ್ಥಗಳಲ್ಲಿದ್ದಾನೆಂತಲೇ ಉಪಾಸನಾಮಾಡಬೇಕು, ಹೊರತು ಅಶುಭವೃತ್ತಿತ್ವೇನ ಉಪಾಸನಾಮಾಡಬಾರದು, ಎಂಬುವ ಅಭಿಪ್ರಾಯದಿಂದ. ॥ ೧೧ ॥

ಹೀಗೆ ರಸಾದಿ ಧರ್ಮಗಳಿಗೆ ಮಾತ್ರ ನಾನು ಪ್ರೇರಕನಲ್ಲ. ಕಿಂತು ಜಲಾದಿ ಸರ್ವಗುಣಾಶ್ರಯ ವಸ್ತುಗಳಿಗೂ ನಾನೇ ಪ್ರೇರಕನೆಂತ ಹೇಳುತ್ತಾನೆ. ಸಾತ್ವಿಕವಾಗಲೀ ರಾಜಸ ತಾಮಸವಾಗಲೀ ಯಾವ ಪದಾರ್ಥಗಳಿದ್ದಾವೋ ಅವುಗಳೆಲ್ಲವನ್ನೂ ನನ್ನಿಂದಲೇ ಸೃಷ್ಟಗಳನ್ನಾಗಿ ತಿಳಿ. ನನ್ನಲ್ಲಿಯೇ ಆಶ್ರಯಿಸಿಕೊಂಡಿದ್ದಾವೆಂತಲೂ ತಿಳಿ. ನಾನು ಅವುಗಳನ್ನು ಆಶ್ರಯಿಸಿಕೊಂಡಿಲ್ಲ ಕುಲಾಲಾದಿಗಳಿಗೆ ಘಟಾದಿಗಳನ್ನು ನಿರ್ಮಾಣಮಾಡುವುದರಲ್ಲಿ ಮಾತ್ರ ವ್ಯಾಪಾರವದೆ. ಅದರಲ್ಲಿರುವ ರಸ, ಗಂಧ, ರೂಪ, ಕ್ರಿಯಾ ಇತ್ಯಾದಿ ಧರ್ಮಗಳಲ್ಲಿ ಕುಲಾಲನ ವ್ಯಾಪಾರವಿಲ್ಲ. ಅವುಗಳು ದೈವಾಯತ್ತವಾಗಿ ಹ್ಯಾಗೆ ಬೇಕಾದರೂ ತಾನಾಗಿ ನಡಿಯುತ್ತವೆ. ಹಾಗೆ ಜಲಾದಿ

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್॥೧೩॥**
**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ॥೧೪**

---

ಗಳನ್ನು ನಮ್ಮ ಈಶ್ವರನು ಸೃಷ್ಟಿಮಾಡುವುದಲ್ಲ. ಅಂದರೆ ಜಲಾದಿಗಳನ್ನು ಈಶ್ವರನು ಸೃಷ್ಟಿಮಾಡುತ್ತಾನೆ. ಅವುಗಳಲ್ಲಿರುವ ಧರ್ಮಗಳೂ ತಾನಾಗಿಯೇ ಉಂಟಿಬಂದಂತೆ ಉತ್ಪತ್ತಿಹೊಂದುತ್ತಾವೆಂತಲ್ಲ. ಮತ್ತೆ ಜಲದಲ್ಲಿಯೂ ಜಲದಲ್ಲಿರುವ ರಸಾದಿಧರ್ಮಗಳಲ್ಲಿಯೂ ಈಶ್ವರನ ವ್ಯಾಪಾರವದೆ. ಇವನ ಇಚ್ಛೆಯಂತೆಯೇ ಕ್ಲೃಪ್ತವಾಗಿ ಆಗುತ್ತವೆ. ಆದಕಾರಣವೇ ಜಲಂ ಅಹಮಸ್ಮಿಎಂತ ಹೇಳದೆ ರಸೋಽಹಮಸ್ಮಿ ಎಂತ ಹೇಳಿದ್ದು. ಹೀಗೆ ಅಲ್ಲಲ್ಲಿ ವಿಶಿಷ್ಯ ಹೇಳಿದಲ್ಲಿ ಅಭಿಪ್ರಾಯ ವಿಶೇಷಗಳನ್ನು ಊಹಿಸಿಕೊಳ್ಳತಕ್ಕದ್ದು. ॥ ೧೨ ॥

ಹೀಗೆ ಈ ಗುಣಗಳಿಂದ ನಾನು ದೂರನಾಗಿದ್ದರೂ ಹಿಂದೆ ಹೇಳಿದ ರಾಜಸ ತಾಮಸಾದಿ ಈ ಮೂರು ಪದಾರ್ಥಗಳಿಂದ ಮೋಹಿತವಾದ ಈ ಜಗತ್ತು ಅಂದರೆ ಅಜ್ಞ ಜನವು ನನ್ನನ್ನು ಈ ಗುಣಮಯ ಪದಾರ್ಥಗಳಿಂದ ಭಿನ್ನನಾದವನನ್ನು ಅತ ಏವ ನಾಶರಹಿತನನ್ನು ತಿಳಿಯುವುದಿಲ್ಲ ॥ ೧೩ ॥

ಅವರಿಗೆ ಹಾಗೆ ಮೋಹ ಬರಲಿಕ್ಕೆ ಸೃಷ್ಟ್ಯಾದಿಕರ್ತೃ ಪರಮಾತ್ಮನಿಗೆ ಅತಿಪ್ರಿಯಳಾದ ದುರ್ಗಾದೇವಿಯು ಕಾರಣಳಾದ ಪ್ರಯುಕ್ತ ಈ ಮೋಹವು ಸಹಸಾ ನಾಶಹೊಂದುವುದಿಲ್ಲವೆಂತ ಹೇಳುವನು. ಈ ಪ್ರಮಾಣಸಿದ್ಧವಾದ ಗುಣಾತ್ಮಕ ಪದಾರ್ಥಗಳಿಗೆ ನಿಯಾಮಕಳಾದ ನನ್ನ ಅಧೀನಳಾದ ದುರ್ಗೆಯು ದುರತ್ಯಯಳು ಅಂದರೆ ಇವಳಿಂದ ಮಾಡಲ್ಪಟ್ಟ ಮೋಹವನ್ನು ಯಾರೂ ಅತಿಕ್ರಮಿಸಲು ಶಕ್ತರಲ್ಲ. ಹಾಗಾದರೆ ಈ ಮೋಹವು ಯಾವಾಗಲೂ ಹೋಗುವದಲ್ಲವೆಂತಾಯಿತಷ್ಟೆ! ಅಂದರೆ–ಹಾಗೂ ತಿಳಿಯಕೂಡದು. ಎಲ್ಲವನ್ನೂ ಬಿಟ್ಟು ನನ್ನನ್ನೇ ಯಾರು ಮರೆಯಾಗಿ ಹೊಂದುವರೋ, ಅವರು ಈ ಮಾಯೆಯನ್ನು ಅತಿಕ್ರಮಿಸುವರು. ಅಂತಹವರು ನನ್ನ ಅನುಗ್ರಹದಿಂದಲೇ ಈ ಮಾಯಾದಿಂದ ಕೃತವಾದ ಮೋಹವನ್ನು ದಾಟಲು ಸಮರ್ಥರಾಗುತ್ತಾರೆ. ॥ ೧೪ ॥

ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।
ಮಾಯಯಾಽಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥

ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।
ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥

ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ೧೭

ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ॥

---

ನಿನ್ನನ್ನು ಆಶ್ರಯಿಸಿದರೆ ಮಾಯಾತರಣವಾಗುವುದಾದರೆ ಯಾಕೆ ಎಲ್ಲರೂ ನಿನ್ನನ್ನು ಆಶ್ರಯಿಸಿ ಮಾಯೆಯನ್ನು ದಾಟಲಿಲ್ಲವೆಂಬ ಶಂಕೆಯನ್ನು ಪರಿಹರಿಸುವನು. ದುಷ್ಕೃತಿ ಉಳ್ಳವರು, ಅಂದರೆ ಪಾಪಶೀಲರು, ಆದ್ದರಿಂದಲೇ ಮೂಢರು, ವಿವೇಕಹೀನರು, ಇಂಥಾ ನರಾಧಮರು, ಭಗವದಿಚ್ಛೆಯಿಂದ ಅಪಹೃತವಾದ ಯಥಾರ್ಥಜ್ಞಾನ ಉಳ್ಳವರು, ಅತ ಏವ ಆಸುರ ಭಾವವನ್ನು ಎಂದರೆ ಅಸುರತ್ವವನ್ನು ಹೊಂದಿದವರಾಗಿ ನನ್ನನ್ನು ಹೊಂದುವದಿಲ್ಲ. ಅಂದರೆ ನನ್ನ ಶರಣಾಗತಿಯನ್ನು ಹೊಂದುವುದಿಲ್ಲ. ॥ ೧೫ ॥

ಆಸುರಸ್ವಭಾವವುಳ್ಳ ಜನರು ತನ್ನನ್ನೂ ಶರಣಾಗತರಾಗುವದಿಲ್ಲವೆಂದು ನಿರೂಪಿಸಿ ಪುಣ್ಯವಿಶೇಷವುಳ್ಳವರೇ ತನ್ನನ್ನು ಹೊಂದುವರು. ಅವರಲ್ಲಿಯೂ ತಾರತಮ್ಯ ಉಂಟೆಂದು ಶ್ರೀಕೃಷ್ಣನು ನಿರೂಪಿಸುವನು. ನನ್ನನ್ನು ಸೇವಿಸುವ ಜನರು ರೋಗಾದ್ಯುಪದ್ರವದಿಂದ ಕೂಡಿದವರು. ಪರಮಾತ್ಮವಿಷಯಕ ಜ್ಞಾನೇಚ್ಛಾ ಉಳ್ಳವರು, ಧನಾದಿ ಕಾಮನಾದಿಂದ ಕೂಡಿದವರು, ಆತ್ಮತತ್ವವನ್ನು ತಿಳಿದವರು, ಹೀಗೆ ನಾಲ್ಕು ಪ್ರಭೇದದಿಂದ ಕೂಡಿದವರು. ॥ ೧೬ ॥

ಆ ನಾಲ್ವರಲ್ಲಿಯೂ ಸದಾ ನನ್ನ ಧ್ಯಾನನಿರತನಾದ ಮತ್ತು ನನ್ನಲ್ಲಿ ಮುಖ್ಯವಾದ ಭಕ್ತಿಯಿಂದೊಡಗೂಡಿದ ಜ್ಞಾನಿಯೇ ಶ್ರೇಷ್ಠನು. ಯಾಕೆಂದರೆ ಜ್ಞಾನಿಯು ನನಗೆ ಅತಿಪ್ರಿಯನು, ನಾನು ಆತನಿಗೆ ಅತಿಪ್ರಿಯನು. ॥ ೧೭ ॥

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**
**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ॥೨೦॥**

---

ಜ್ಞಾನಿಗೆ ಅತಿಪ್ರಿಯತ್ವ ಹೇಳಿದ ಪ್ರಯುಕ್ತ ಇತರರನ್ನು ನಿಂದಿಸಿದಂತಾ ಯಿತೆಂಬ ಶಂಕೆಯನ್ನು ಪರಿಹರಿಸುವನು. ನನ್ನನ್ನು ಭಜಿಸುವ ಈ ನಾಲ್ವರೂ ಶ್ರೇಷ್ಠರೇ, ಆದರೂ ಜ್ಞಾನಿಯು ನಾನೇ ಎಂದು ನನ್ನ ಅಭಿಪ್ರಾಯ. ಅದು ಹೇಗೆಂದರೆ ಲೋಕದಲ್ಲಿ ಸ್ವಾಮಿಯಾದವನು ಅತಿಪ್ರಿಯನಾದ ಭೃತ್ಯನನ್ನು ನೀನು ಬೇರೆ ನಾನು ಬೇರೆಯಲ್ಲ ಒಂದೇ ಎಂತ ಅತಿಪ್ರೀತಿ ತೋರಿಸಲಿಕ್ಕೆ ಅನ್ನುವನೋ, ಹಾಗೆಯೇ ಇಲ್ಲಿ ಹೇಳಿದ್ದು ಅತಿಪ್ರೀತಿ ತೋರಿಸಲಿಕ್ಕೆ ಹೊರತು ಅಭೇದದ ಅಭಿಪ್ರಾಯದಿಂದಲ್ಲ. ಯಾವ ಕಾರಣದಿಂದ ಆ ಜ್ಞಾನಿಯು ಸರ್ವೋತ್ತಮವಾದ ಮೋಕ್ಷರೂಪ ಫಲವನ್ನು ಉದ್ದೇಶೀಕರಿಸಿ ಕೊಂಡು ಸಮಾಧಿಯಿಂದ ಕೂಡಿದ ಮನಸ್ಸುಳ್ಳವನಾಗಿ ನನ್ನನ್ನು ಹೊಂದಿ ದ್ದಾನೆ. ಇತರರಿಗೆ ಅಂತಹ ಏಕಮನಸ್ತ್ವ ಅಂದರೆ ಪರಮಾತ್ಮನಲ್ಲಿ ಚಿತ್ತೈಕಾಗ್ರ್ಯವು ಜ್ಞಾನಿಗೆ ಇದ್ದಷ್ಟು ಇಲ್ಲ. ಎಂದರ್ಥ. ॥ ೧೮ ॥

ಜ್ಞಾನಿಗೆ ಹೇಳಿದ ಉತ್ತಮತ್ವವನ್ನು ಕಾರಣಕೊಟ್ಟು ನಿರೂಪಿಸುವನು. ಜೀವನು ಬಹು ಜನ್ಮಗಳನ್ನು ಹೊಂದಿ ಸ್ವಲ್ಪಸ್ವಲ್ಪ ಪುಣ್ಯಮಾಡಿ ಕೊನೆಗೆ ನನ್ನ ಜ್ಞಾನವುಳ್ಳವನಾಗಿ ನನ್ನನ್ನು ಹೊಂದುವನು. ಸರ್ವಜಗತ್ತು ಪರ ಮಾತ್ಮನ ಅಧೀನವಾದದ್ದೆಂಬ ಜ್ಞಾನವುಳ್ಳ ಅತ ಏವ ನಿಶ್ಚಿತವಾದ ಜ್ಞಾನ ವುಳ್ಳವನಾದುದರಿಂದಲೇ ನಿಯತವಾದ ಮೋಕ್ಷವುಳ್ಳ ಈ ಮಹಾಮಹಿಮೋ ಪೇತ ಜ್ಞಾನಿಯು ಉತ್ತಮನು, ಆದುದರಿಂದಲೇ ಅಂತಹವನು ದುರ್ಲಭನು. ॥ ೧೯ ॥

ಲೋಕದಲ್ಲಿ ಭಗವಜ್ಞಾನಿಗಳು ಬಹಳವಾಗಿ ತೋರುವ ಕಾರಣ ಅವರಿಗೆ ದೌರ್ಲಭ್ಯವು ಯಾಕೆಂದರೆ ಕಾರಣ ನಿರೂಪಿಸುವನು. ಜ್ಞಾನವನ್ನು ಹೊಂದ ಬೇಕೆಂದು ಇಚ್ಛಿಸಿದವರಲ್ಲಿ ಎಷ್ಟೋ ಜನರು ಸಹಜಸಿದ್ಧವಾದ ತತ್ತತ್ಸ್ವಭಾ ವಾನುಗುಣವಾಗಿ ಕಾಮಾದಿಗಳಿಂದ ಅಪಹೃತವಾದ ಜ್ಞಾನವುಳ್ಳವರಾಗಿ

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತು-**
**ಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥೨೧॥**
**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿತಾನ್ ॥ ೨೨ ॥**
**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥**

---

ಅಂದರೆ ಕಾಮಾದ್ಯಧೀನರಾಗಿ ತಮಗಿಷ್ಟವಾದ ಫಲದ ಉದ್ದಿಶ್ಯ ಅನ್ಯಾಗಮ ಗಳಲ್ಲಿ ಹೇಳಿದ ನಿಯಮಗಳನ್ನು ಮಾಡಿ ಅನ್ಯದೇವತೆಗಳನ್ನು ಹೊಂದುವರು. ಅಂಥಹ ಕಾಮಾಧೀನನಾಗದೆ ಕೇವಲ ಭಗವನಿಷ್ಠ ಬುದ್ಧಿಯುಳ್ಳವನು ವಿರಲನು. ॥ ೨೦ ॥

ಇತರ ದೇವತೆಗಳನ್ನು ಸೇವಿಸುವವರು ಕ್ರಮೇಣ ನಿನ್ನ ಭಕ್ತರು ಯಾಕಾಗುವುದಿಲ್ಲವೆಂಬುವ ಶಂಕೆಯನ್ನು ಮೇಲಿನ ಶ್ಲೋಕಗಳಿಂದ ಪರಿಹರಿಸುವನು. ಯಾರು ಭಕ್ತಿಯಿಂದ ಇತರ ಯಾವ ಯಾವ ದೇವತೆಗಳನ್ನು ಪೂಜಿಸಲು ಇಚ್ಛಿಸುವನೋ, ನಾನು ಆ ಆ ಜನರಿಗೆ ಇತರ ದೇವತೆಗಳಲ್ಲಿ ಆಸ್ತಿಕ್ಯಬುದ್ಧಿಯನ್ನು ದೃಢವನ್ನಾಗಿ ಮಾಡುತ್ತೇನೆ. ॥ ೨೧ ॥

ಅದೇ ಆಸ್ತಿಕ್ಯಬುದ್ಧಿಯಿಂದ ಕೂಡಿದವನಾಗಿ ಆಯಾಯ ದೇವತೆಯ ಆರಾಧನೆಯನ್ನೂ ಮಾಡುವನು. ಅಭಿಲಷಿತ ಫಲವನ್ನೂ ಹೊಂದುವನು. ಹೀಗಿದ್ದರೂ, ಆ ದೇವತೆಗಳು ಫಲಕೊಡಲು ಶಕ್ತರೆಂದು ತಿಳಿಯತಕ್ಕದ್ದಲ್ಲ. ಮತ್ತೆ ಆಯಾಯ ದೇವತೆಗಳ ದ್ವಾರಾ ನನ್ನಿಂದಲೇ ಕೊಡಲ್ಪಟ್ಟ ಫಲವನ್ನು ಹೊಂದುತ್ತಾನೆ. ॥ ೨೨ ॥

ಅನ್ಯದೇವತೋಪಾಸಕರಿಗೂ ಫಲವು ನಿನ್ನಿಂದಲೇ ಸಿಗುವದಾದರೆ, ನಿನ್ನ ಉಪಾಸನಾ ಮಾಡದೆ ಇತರರ ಉಪಾಸನಾ ಯಾಕೆ ಮಾಡುವರು ಎಂಬ ಶಂಕೆಯನ್ನು ಪರಿಹರಿಸುವನು. ಅಲ್ಪಬುದ್ಧಿಯುಳ್ಳವರು (ಅಂದರೆ ಅಲ್ಪಫಲದಲ್ಲಿಯೇ ಮನಸ್ಸಿದ್ದವರು) ಅವರಿಗಾಗುವ ಫಲವೂ ನಾಶವುಳ್ಳದ್ದು. ಯಾಕೆಂದರೆ ಇತರ ದೇವತೆಗಳನ್ನು ಪೂಜಿಸುವವರು, ಇತರ ದೇವತೆಗಳನ್ನು ಹೊಂದುತ್ತಾರೆ.

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್॥೨೪॥**
**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಂ**

---

ಆದ್ದರಿಂದಲೇ ಅವರಿಗಾಗುವ ಫಲವೂ ಅಂತವತ್=ನಾಶವುಳ್ಳದ್ದು. ನನ್ನ ಭಕ್ತರಾದರೂ, ದೇವತೆಗಳನ್ನು ಹೊಂದಿದರೂ, ಅಂತ್ಯದಲ್ಲಿ ನನ್ನನ್ನೇ ಹೊಂದುತ್ತಾರೆ. ಆದ್ದರಿಂದ ಅವರಿಗಾಗುವ ಫಲವು ಅನಂತವು. ಇಲ್ಲಿ ಇತರ ದೇವತೆಗಳನ್ನು ಹೊಂದಿಯೂ, ಅಂತ್ಯದಲ್ಲಿ ನನ್ನನ್ನೇ ಹೊಂದುವರೆಂದು ಹೇಳಿದ ಪ್ರಯುಕ್ತ ಹಿಂದೆ ಇತರ ದೇವತೆಗಳನ್ನು ಭಜಿಸುವವರು ಎಂಬಲ್ಲಿ ಯೋಗ್ಯರು ಮತ್ತು ಅಯೋಗ್ಯರೆಂದಿಬ್ಬರನ್ನಿಟ್ಟುಕೊಂಡು ಅಯೋಗ್ಯರು ಅಂತ್ಯವುಳ್ಳ ಫಲವನ್ನು ಮಾತ್ರ ಹೊಂದುವರು. ಯೋಗ್ಯರು ಪೂರ್ವದಲ್ಲಿ ಜ್ಞಾನವಿಲ್ಲದೆ ಇತರ ದೇವತೆಗಳನ್ನು ಸೇವಿಸಿದರೂ, ಮತ್ತೆ ಜ್ಞಾನವನ್ನು ಸಂಪಾದಿಸಿ ನನ್ನನ್ನು ಹೊಂದಿ ಅನಂತವಾದ ಫಲವನ್ನು ಭೋಗಿಸುತ್ತಾರೆ. ಆದ್ರಿಂದ ಮುಖ್ಯವಾಗಿ ನನ್ನನ್ನೇ ಪೂಜಿಸಬೇಕು. ಫಲಾರ್ಥಿಗಳಾದವರು ಇತರರನ್ನು ನನ್ನ ಪರಿವಾರರನ್ನಾಗಿ ಪೂಜಿಸಬಹುದು. ॥ ೨೩ ॥

ಇತರ ದೇವತೆಗಳಿಂದ ನಿನ್ನಲ್ಲಿ ಏನು ವಿಶೇಷವದೆ? ಯಾವುದರಿಂದ ನಿನ್ನನ್ನು ಹೊಂದುವವರಿಗೆ ಅನಂತಫಲವು? ಇತರರನ್ನು ಹೊಂದಿದವರಿಗೆ ಅಲ್ಪ ಫಲವೆಂಬುದು ಸಮಂಜಸವಾದೀತು ಎಂಬ ಶಂಕೆಯನ್ನು ಪರಿಹರಿಸುವನು. ಬುದ್ಧಿಯಿಲ್ಲದವರು ಈ ನಾಶಶೂನ್ಯವಾದ ಇದಕ್ಕಿಂತ ಬೇರೆ ಉತ್ತಮ ವಸ್ತು ಇಲ್ಲದಿರುವ ಸರ್ವ ವಿಲಕ್ಷಣವಾದ ನನ್ನ ತತ್ವವನ್ನು ತಿಳಿಯದೆ ಆದ್ರಿಂದಲೇ ಉತ್ಪತ್ತಿನಾಶವುಳ್ಳದೇಹವಿಲ್ಲದ ನನ್ನನ್ನು ಅಂತಹದೇಹವುಳ್ಳವನೆಂತ ತಿಳಿಯುತ್ತಾರೆ. ಇತರ ದೇವತೆಗಳಿಗೆ ಉತ್ಪತ್ತಿನಾಶವುಳ್ಳದೇಹವದೆ. ನನಗೆ ಅಂಥಾದ್ದಿಲ್ಲ. ಇದೇ ನನಗೆ ಅವರಿಂದಿರುವ ವಿಶೇಷ. ॥ ೨೪ ॥

ನಿನ್ನವಿಷಯದ ವಿಪರೀತಜ್ಞಾನದಿಂದ ಅವರಿಂದ ಮಾಡಲ್ಪಡುವ ನಿಂದೆಯಿಂದ ನಿನಗೆ ಖೇದ ಉಂಟೋ, ಎಂಬ ಶಂಕೆಯನ್ನು ಪರಿಹರಿಸುವನು ನಾನು ಸರ್ವ ಜನರ ಜ್ಞಾನ ವಿಷಯನಲ್ಲ. ಈ ಮೂಢರು ನನ್ನ ಸಾಮರ್ಥ್ಯ

ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥
ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।
ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥

---

ಮತ್ತು ಮಾಯೆಯಿಂದ ನನ್ನನ್ನು ತಿಳಿಯುವುದಿಲ್ಲ ಅವರಿಗಿರುವ ಅಜ್ಞಾನವು ನನ್ನಿಂದಲೇ ಉತ್ಪನ್ನವಾದ್ದರಿಂದ ಅವರೂ ನನ್ನ ನಾಶವಿಲ್ಲದ ಮತ್ತು ಉತ್ಪತ್ತಿ ಇಲ್ಲದ ಮಹಿಮೆಯನ್ನು ತಿಳಿಯದವರು. ಅವರ ಅಜ್ಞಾನವು ನನ್ನ ಅಧೀನ ಇರುವುದರಿಂದಲೂ ಅವರು ಬೇಕಾದ ಹಾಗೆ ತಿಳಿದುಕೊಳ್ಳಲಿಕ್ಕೆ ಅಸ್ವತಂತ್ರ ರಾಗಿದ್ದದ್ದರಿಂದಲೂ ಅವರ ಆ ತಿಳುವಳಿಕೆಯಿಂದ ನನಗೆ ಖೇದವಿಲ್ಲ. ॥೨೫॥

ಯಾವದಾದರೊಂದು ವಸ್ತುವಿಗೆ ಆಚ್ಛಾದಕವಾಗಿ ಪರದಿ ಮಧ್ಯ ಇದ್ದರೆ ಆ ಪರದೆಯ ಆಚೆ ಇರುವವರಿಗೆ ಪರದೆಯಿಂದೀಚೆಗಿರುವ ವಸ್ತುವಿನ ಜ್ಞಾನವು ಇರುವದಿಲ್ಲವಷ್ಟೆ! ಹಾಗೆಯೇ ನಿನ್ನ ಜ್ಞಾನವು ಜೀವರಿಗೆ ಹೇಗಿಲ್ಲವೋ ಹಾಗೆ ನಿನಗೂ ಜೀವರ ಜ್ಞಾನವಿಲ್ಲದಿರಲಿ, ಎಂಬ ಶಂಕೆಗೆ ಮಾಯೆಯು ಪರದೆಯ ಸ್ಥಾನವಾದರೂ ಸ್ವತಂತ್ರನಾದ ನನಗೆ ಪ್ರತಿಬಂಧಕವಲ್ಲವೆನ್ನುವನು. ನಾನು ಹಿಂದಾಗಿ ಹೋದ ಹಾಗೆಯೇ ಈಗ ಇರುವ ಇನ್ನು ಮುಂದೆ ಬರುವ ಪ್ರಾಣಿ ಸಮುದಾಯವನ್ನು ತಿಳಿದಿರುವೆನು. ನನ್ನನ್ನು ಮಾತ್ರ ಯಾರೂ ಸಮಗ್ರ ತಿಳಿದವರಿಲ್ಲ. ॥ ೨೬ ॥

ಹಿಂದೆ 'ದೈವೀ ಹ್ಯೇಷಾ ಗುಣಮಯೀ' ಎಂಬ ಶ್ಲೋಕದಲ್ಲಿ ಜೀವರಿಗೆ ಇರುವ ಅಜ್ಞಾನಕ್ಕೆ ಮಾಯಾ ಕಾರಣವೆಂದು ನಿರೂಪಿಸಿರುವನು. ಈಗ ಅಮುಖ್ಯ ಇತರ ಕಾರಣಗಳೂ ಉಂಟೆಂತ ನಿರೂಪಿಸುತ್ತಾನೆ. ಈ ರಾಗ ದ್ವೇಷಾಧಿಕ್ಯದಿಂದ ಉತ್ಪನ್ನವಾದ ದ್ವಂದ್ವವಿಷಯಕ ಮಿಥ್ಯಾಜ್ಞಾನದಿಂದ ಅಂದರೆ ಸುಖದುಃಖ, ಲಾಭ ಅಲಾಭಗಳು, ದ್ವಂದ್ವಗಳು, ಅವುಗಳಲ್ಲಿ ದುಃಖವು ಹೇಗೆ ಹೇಯವೋ, ಹಾಗೆಯೇ ವೈಷಯಿಕ ಸುಖವೂ ಹೇಯವೇ. ಅಂತಹ ಹೇಯವಾದ ಸುಖವನ್ನು ಅಹೇಯವೆಂದು ತಿಳಿಯುವುದೇ ದ್ವಂದ್ವ ಮೋಹವೆಂದರೆ. ಆದರಿಂದ ಸರ್ವಪ್ರಾಣಿಗಳೂ ಸೃಷ್ಟಿಕಾಲವನ್ನಾರಂಭಿಸಿ

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ೨೮**
**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ೨೯**

---

ಕೊಂಡು ಪರಮಾತ್ಮನ ವಿಷಯದಲ್ಲಿ ಮಿಥ್ಯಾಜ್ಞಾನವನ್ನು ಹೊಂದುವವು. ಇಲ್ಲಿ ಅರ್ಜುನನಲ್ಲಿ ಅತಿಪ್ರೀತಿ ತೋರಿಸಲಿಕ್ಕೆ ಪೂರ್ವಾರ್ಧದಲ್ಲಿ ಭಾರತ ಎಂತಲೂ, ಉತ್ತರಾರ್ಧದಲ್ಲಿ ಪರಂತಪ ಎಂತಲೂ ಎರಡಾವರ್ತಿ ಸಂಬೋಧಿಸಿದ್ದು. ಹೀಗೆ ಅನ್ಯತ್ರವೂ ಅನೇಕ ಸಂಬೋಧನೆ ಇದ್ದಲ್ಲಿ ತಿಳಿಯತಕ್ಕದ್ದು. ॥ ೨೭ ॥

ಸಮಸ್ತರೂ ನಿನ್ನ ವಿಷಯಕ ಮೋಹವುಳ್ಳವರಾದರೆ ಮೋಕ್ಷಮಾರ್ಗವೇ ಲೋಪ ಹೊಂದಬೇಕಾಯಿತಷ್ಟೆ? ಎಂಬ ಶಂಕೆಗೆ ಶ್ರೀಕೃಷ್ಣನು ಪುಣ್ಯಕರ್ಮವುಳ್ಳ ಸಜ್ಜೀವರು ಪುಣ್ಯಪ್ರಭಾವದಿಂದಲೇ ನಾಶಹೊಂದಿದ ಪಾಪವುಳ್ಳವರಾಗಿ, ಆದರಿಂದಲೇ ನಿಶ್ಚಿತವಾದ ನಿಯಮವುಳ್ಳವರಾಗಿ, ದ್ವಂದ್ವಜನ್ಯ ಮೋಹವಿಲ್ಲದೆ ನನ್ನನ್ನು ಭಜಿಸಿ ಮುಕ್ತಿ ಹೊಂದುವವರಾಗುವರೆಂದು ನಿರೂಪಿಸುವನು. ॥ ೨೮ ॥

ಪರಮಾತ್ಮನ ಭಜನೆಗೆ ಜ್ಞಾನರೂಪ ಫಲವನ್ನು ಹೇಳುತ್ತಾನೆ. ಯಾವ ಸಾಧುಸ್ವಭಾವದ ಜನರು ಜರಾಮರಣಗಳ ನಿವೃತ್ತಿಗೋಸ್ಕರ ಅಂದರೆ ಸ್ವರ್ಗಾದಿ ಕಾಮನಾ ನಿವೃತ್ತ್ಯರ್ಥವಾಗಿ ನನ್ನನ್ನು ಆಶ್ರಯಿಸಿಕೊಂಡು ಭಜಿಸುತ್ತಾರೋ, ಅಂಥವರು ಬ್ರಹ್ಮನನ್ನು ತಿಳಿಯುತ್ತಾರೆ. ಮಾತ್ರವಲ್ಲ, ಕೃತ್ಸ್ನ ಆಧ್ಯಾತ್ಮವನ್ನೂ, ಅಖಿಲಕರ್ಮವನ್ನೂ, ತಿಳಿಯುವರು. ಹಿಂದೆ 'ಮಾಮೇವ ಯೇ ಪ್ರಪದ್ಯಂತೇ' ಎಂಬ ಶ್ಲೋಕದಲ್ಲಿ ಮಾಯಾತರಣವನ್ನು ಫಲವೆಂತ ಹೇಳಿದ್ದರೂ, ಅದು ಸಾಕ್ಷಾತ್ ಆಗುವುದಿಲ್ಲ. ಜ್ಞಾನದ್ವಾರಾ ಎಂತ ತೋರಿಸಲಿಕ್ಕೆ ಇಲ್ಲಿ ಭಗವದ್ಭಜನೆಗೆ ಜ್ಞಾನಫಲವೆಂದು ಹೇಳಿದ್ದು. ॥ ೨೯ ॥

ಪೂರ್ವಪ್ರಸಕ್ತನಾದ ಬ್ರಹ್ಮನು ತಾನೇ, ಅನ್ಯರಲ್ಲವೆಂದು ಈ ಶ್ಲೋಕದಲ್ಲಿ ನಿರೂಪಿಸುವನು. ಯಾರು ಅಧಿಭೂತ-ಅಧಿದೈವ ಅಧಿಯಜ್ಞ ಸಹಿತ

ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥೩೦॥

॥ ಇತಿ ಸಪ್ತಮೋಽಧ್ಯಾಯಃ ॥

---

ವಾಗಿ ನನ್ನನ್ನು ತಿಳಿಯುವರೋ, ಅಲ್ಲದೆ ಪ್ರಯಾಣಕಾಲದಲ್ಲಿ ಯಾರು ನನ್ನನ್ನು ತಿಳಿಯುವರೋ, ಅವರೇ ಉತ್ತಮವಾದ ಚಿತ್ತೈಕಾಗ್ರ್ಯವುಳ್ಳವರು. ಬ್ರಹ್ಮನನ್ನು ತಿಳಿಯುವರು. ಇಲ್ಲಿ ಅಧಿಯಜ್ಞ ಅಧಿಭೂತಾದಿ ಶಬ್ದಗಳ ಅರ್ಥ ವನ್ನು ಉತ್ತರಾಧ್ಯಾಯದ ಆದಿಯಲ್ಲಿ ಹೇಳುವೆವು. ಯಾರು ಬ್ರಹ್ಮನನ್ನು ತಿಳಿಯುವರೋ, ಅವರು ನನ್ನನ್ನು ತಿಳಿದವರು. ಯಾರು ನನ್ನನ್ನು ಹೀಗೆ ತಿಳಿದವರೋ, ಅವರೇ ಬ್ರಹ್ಮಜ್ಞಾನಿಗಳು, ಎಂತ ಹೇಳಿದ ಕಾರಣ ಬ್ರಹ್ಮನು ನಾನೇ, ಬೇರೆ ಅಲ್ಲ ಎಂತ ಹೇಳಿದ ಹಾಗಾಯಿತು. ॥ ೩೦ ॥

# ಅಷ್ಟಮೋಽಧ್ಯಾಯಃ

॥ ಅರ್ಜುನ ಉವಾಚ ॥

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

॥ ಶ್ರೀಭಗವಾನುವಾಚ ॥

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

---

ಹಿಂದಿದ ಅಧ್ಯಾಯದಲ್ಲಿ "ತೇ ಬ್ರಹ್ಮ ತದ್ವಿದುಃ ಪ್ರಯಾಣಕಾಲೇಽಪಿ ಚ ಮಾಂ" ಎಂತ ಹೇಳಿದ ಪ್ರಮೇಯವನ್ನೇ ಮುಖ್ಯವಾಗಿ ಈ ಅಧ್ಯಾಯದಲ್ಲಿ ವಿವರಿಸುತ್ತಾನೆ. ಅರ್ಜುನನು ಕೇಳುವನು, ನೀನು ಹೇಳಿದ ಬ್ರಹ್ಮ ಯಾವುದು? ಅಧ್ಯಾತ್ಮವೆಂದರೆ ಯಾವುದು? ಎಲೋ ಪುರುಷೋತ್ತಮನೇ ಅಧಿಭೂತವೆಂತ ಯಾವುದನ್ನು ಹೇಳಿದಿ? ಅಧಿದೈವ ಎಂತ ಯಾವುದು ಹೇಳಲ್ಪಡುತ್ತದೆ? ॥ ೧ ॥

ಪರಮಾತ್ಮನು, ಈ ದೇಹದಲ್ಲಿ ಅಧಿಯಜ್ಞನು ಹೇಗೆ? ಅಂತ್ಯಕಾಲದಲ್ಲಿ ನಿಗೃಹೀತವಾದ ಮನಸ್ಸುಳ್ಳವರಿಂದ ಹೇಗೆ ತಿಳಿಯತಕ್ಕವನು? ॥ ೨ ॥

ಶ್ರೀಕೃಷ್ಣನು ಉತ್ತರವನ್ನೀಯುವನು. ಉತ್ತಮ ಅಕ್ಷರ ಶಬ್ದವಾಚ್ಯನಾದವನೇ ಬ್ರಹ್ಮನು. ಜಡಪ್ರಕೃತಿ ಲಕ್ಷ್ಮೀ ಪರಮಾತ್ಮ ಈ ಮೂವರು ಅಕ್ಷರರೆಂದನ್ನಿಸಿಕೊಳ್ಳುವರು. ಅದರಲ್ಲಿ ಜಡಪ್ರಕೃತಿಗೆ ಅಧಮಾಕ್ಷರವೆಂತಲೂ, ಲಕ್ಷ್ಮಿಗೆ ಮಧ್ಯಮಾಕ್ಷರವೆಂತಲೂ, ಪರಮಾತ್ಮನಿಗೆ ಉತ್ತಮಾಕ್ಷರವೆಂತಲೂ, ನಾಮವದೆ ಆದ್ದರಿಂದಲೇ ಪರಮಂ ಅಕ್ಷರಂ ಎಂತ ಹೇಳಿದ್ದು. ಜೀವನನ್ನು ವಿಷಯೀಕರಿಸಿಕೊಂಡು ಇರುವದು ಅಂದರೆ ಜೀವನಿಗೆ ಉಪಕಾರಕವಾದದ್ದು, ದೇಹೇಂದ್ರಿಯಾದಿರೂಪವಾದ ಪದಾರ್ಥವು, ಅಧ್ಯಾತ್ಮ ಎಂತ

ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।
ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥
ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಮ್ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥
ಯಂ ಯಂ ವಾಽಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಮ್ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬ ॥

---

ಅನಿಸಿಕೊಳ್ಳಲ್ಪಡುತ್ತದೆ. ಪ್ರಾಣಿಗಳೂ ಜಡಗಳೂ ಇವುಗಳ ಉತ್ಪತ್ತಿಯನ್ನು ಮಾಡುವ ಪರಮಾತ್ಮನ ಸೃಷ್ಟಿರೂಪವಾದ ವ್ಯಾಪಾರವೇ ಕರ್ಮ ಎಂದೆನಿಸಿಕೊಳ್ಳಲ್ಪಡುತ್ತದೆ. ॥ ೩ ॥

ಈ ನಾಶವುಳ್ಳ ಪದಾರ್ಥವು ಅಧಿಭೂತವೆಂದನ್ನಿಸಿಕೊಳ್ಳಲ್ಪಡುತ್ತದೆ. ಜೀವಾಭಿಮಾನಿ ಚತುರ್ಮುಖನೇ (ಪುರುಷ) ಅಧಿದೈವತೆ ಎಂದನಿಸಿಕೊಳ್ಳಲ್ಪಡುತ್ತಾನೆ. ಈ ದೇಹದಲ್ಲಿ ಧರಿಸುವ ಪ್ರಾಣಿಗಳ ದೇಹದಲ್ಲಿ ನಾನೇ ಅಧಿಯಜ್ಞ ಎಂತ ಅನ್ನಿಸಿಕೊಳ್ಳುತ್ತೇನೆ. ಇಲ್ಲಿ ಅಧಿಯಜ್ಞ ತಾನು ಎಂತ. ಹಿಂದೆ ಸಾಧಿಯಜ್ಞಂ ಮಾಂ ಎಂತ, ಅಧಿಯಜ್ಞಸಹಿತನಾದ ತನ್ನನ್ನೆಂತ ಹೇಳಿದರೂ ಅಧಿಯಜ್ಞನು ನಾನು, ಬೇರೆಯಲ್ಲವೆಂತ ತೋರಿಸಲಿಕ್ಕೆ ಅಹಮೇವಾಧಿಯಜ್ಞ ಎಂತ ಹೇಳಿದ್ದು. ಹಾಗಾದರೆ ಹಿಂದೆ ಅಧಿಯಜ್ಞಸಹಿತ ಎಂತ ಹೇಳಿದ್ದು ಹೇಗೆ ಕೂಡುತ್ತದೆಂದು ಶಂಕಿಸಬಾರದು. ಪರಮಾತ್ಮನ ಅನಂತರೂಪಗಳಲ್ಲಿ ಅಧಿಯಜ್ಞ ಎಂತಲೂ ಒಂದು ಯಜ್ಞಭೋಕ್ತ್ರಾಗಿಯೂ, ಯಜ್ಞನಿಯಾಮಕವಾಗಿಯೂ ಇರುವ ರೂಪವಿಶೇಷದ ಅಭಿಪ್ರಾಯದಿಂದ ಪರಮಾತ್ಮನಿಗೆ ಹಿಂದೆ ಹೇಳಿದ ಸಹಿತತ್ವವು ಕೂಡುವುದು. ॥ ೪ ॥

ಅಂತ್ಯಕಾಲದಲ್ಲಿ ಪರಮಾತ್ಮನ ಸ್ಮರಣೆಮಾಡಬೇಕಾಗಿ ಹಿಂದೆ ಹೇಳಿಯದೆ. ಅದರ ಫಲವನ್ನು ಈಗ ನಿರೂಪಿಸುತ್ತಾನೆ. ಯಾವುದಕ್ಕೆ ಸ್ಮರಣೆ ಮಾಡಬೇಕೆಂಬ ಶಂಕಾಪರಿಹಾರಾರ್ಥವಾಗಿ. ಅಂತಕಾಲದಲ್ಲಿ ನನ್ನನ್ನೇ ಸ್ಮರಿಸಿಕೊಂಡು ಯಾರು ಈ ದೇಹವನ್ನು ಬಿಟ್ಟು ತೆರಳುವರೋ, ಅವರು ನನ್ನಲ್ಲಿ ಭಾವವನ್ನು ಹೊಂದುತ್ತಾರೆ. ನಿರತಿಶಯ ಸುಖಾಭಿವ್ಯಕ್ತಿರೂಪ

**ಶಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸಂಶಯಮ್ ॥ ೭ ॥**

**ಅಭ್ಯಾಸಯೋಗಯುಕ್ತೇನ ಚೇತಸಾಽನನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮ ॥**

---

ಮೋಕ್ಷವನ್ನು ಹೊಂದುವರು. ಈ ವಿಷಯದಲ್ಲಿ ಸಂದೇಹವಿಲ್ಲ. ಇಂಥಾ ಮೋಕ್ಷಲಾಭಕ್ಕೋಸ್ಕರ ಮೃತಿಕಾಲದಲ್ಲಿ ನನ್ನ ಸ್ಮರಣೆ ಬೇಕೆಂದರ್ಥ ॥ ೫ ॥

ಅಂತಃಕಾಲದಲ್ಲಿ ಸ್ಮರಣ ಮಾಡಿದರೆ ಮದ್ಭಾವರೂಪ ಮೋಕ್ಷ ಹೇಗೆ ಸಿಗುವದು? ಎಂತ ಹೇಳುವುದನ್ನು ವಿವರಿಸುವನು. ಯಾವಾತನೇ ಆಗಲಿ ಮೃತಿಕಾಲದಲ್ಲಿ ಯಾವ ಯಾವ ವಸ್ತುವನ್ನು ಸ್ಮರಿಸಿಕೊಂಡು ಶರೀರವನ್ನು ಬಿಡುತ್ತಾನೋ, ಎಲೋ ಕೌಂತೇಯ, ಸರ್ವದಾ ಆದೇ ವಸ್ತುವಿನಲ್ಲಿ ಅಂತರ್ಗತವಾದ ಮನಸ್ಸುಳ್ಳವನಾಗಿ ಅದೇ ವಸ್ತುವನ್ನೇ ಹೋದುತ್ತಾನೆ. ಹಿರಣ್ಯಕಶಿಪು ಭಯಂಕರವಾದ ನೃಸಿಂಹರೂಪವನ್ನು ಮನಸ್ಸಿನಲ್ಲಿ ಧ್ಯಾನಿಸಿಕೊಂಡು ಸತ್ತದ್ದರಿಂದ ಆತನಿಗೆ ಭೀಕರವಾದ ದಶಕಂಠವುಳ್ಳ ರಾಕ್ಷಸಾಕೃತಿಯು ಪ್ರಾಪ್ತವಾಯಿತು. ರಾವಣನು ಈ ಅವತಾರದಲ್ಲಿ ಮೃತಿಕಾಲದಲ್ಲಿ ರಾಮಚಂದ್ರ ದೇವರ ದಿವ್ಯ ರಾಜಮೂರ್ತಿಯನ್ನು ಧ್ಯಾನಿಸಿಕೊಂಡು ಶರೀರ ಬಿಟ್ಟ ಪ್ರಯುಕ್ತ ಶಿಶುಪಾಲನೆಂಬ ರಾಜಪುತ್ರನಾಗಿ ಸುಕುಮಾರ ರೂಪನಾಗಿ ಹುಟ್ಟಿದನೆಂತಲೂ ಹೀಗೆ ಅನೇಕ ಪ್ರಮಾಣಸಿದ್ಧ ವಿಷಯಗಳು ಕೃಷ್ಣನ ಮಾತನ್ನು ಸತ್ಯಮಾಡಲು ಸಾಕ್ಷಿಗಳಾಗುವವು. ॥ ೬ ॥

ಎಲೋ ಪಾರ್ಥನೆ, ಹೀಗಿರುವ ಕಾರಣ ಸರ್ವಕಾಲಗಳಲ್ಲಿಯೂ ನನ್ನನ್ನೇ ಸ್ಮರಿಸಿಕೊಂಡು ನನ್ನಲ್ಲೇ ಅರ್ಪಿಸಲ್ಪಟ್ಟ ಮನಸ್ಸೂ ಬುದ್ಧಿಯೂ ಉಳ್ಳವನಾಗಿ ಯುದ್ಧಮಾಡು. ನಿಶ್ಚಿತವಾಗಿಯೂ ನನ್ನನ್ನು ಹೊಂದುವಿ. ॥ ೭ ॥

ಪುನಃ ಪುನಃ ಆವೃತ್ತಿರೂಪ ಉಪಾಯದಿಂದ ಕೂಡಿದ ಇತರ ವಿಷಯಕವಾಗದಿರುವ ಮನಸ್ಸಿನಿಂದ ಸರ್ವದಾ ಸ್ಮರಿಸಿಕೊಂಡು ಇರುವವನು ಆ ಪರಮಪುರುಷನನ್ನು ಹೊಂದುತ್ತಾನೆ. ॥ ೮ ॥

ಕವಿಂ ಪುರಾಣಮನುಶಾಸಿತಾರ-
ಮಣೋರಣೀಯಾಂಸಮನುಸ್ಮರೇದ್ಯಃ ।
ಸರ್ವಸ್ಯ ಧಾತಾರಮಚಿಂತ್ಯರೂಪ-
ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥
ಪ್ರಯಾಣಕಾಲೇ ಮನಸಾಽಚಲೇನ
ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್
ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥ ೧೦ ॥
ಯದಕ್ಷರಂ ವೇದವಿದೋ ವದಂತಿ
ವಿಶಂತಿ ಯದ್ಯತಯೋ ವೀತರಾಗಾಃ ।
ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ
ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥

---

ಸ್ಮರಣಪ್ರಕಾರವನ್ನು ತಿಳಿಸುವನು. ಸರ್ವಜ್ಞ, ಅನಾದಿ, ಎಲ್ಲರನ್ನು ನಿಯಮನ ಮಾಡುವವ, ಅಣುತರಪದಾರ್ಥಕ್ಕಿಂತಲೂ ಅಣು, ಸರ್ವ ಚರಾಚರಪದಾರ್ಥಗಳ ಧಾರಣ ಪೋಷಣಗಳನ್ನು ಮಾಡುವವನು, ಸಾಕಲ್ಯೇನ ತಿಳಿಯಲು ಅಶಕ್ಯನು, ಸೂರ್ಯಸಮಾನ ಕಾಂತಿಯುಳ್ಳವನು, ಜಡ ಪ್ರಕೃತಿಯನ್ನು ದಾಟಿರುವವನು ಎಂತ ಯಾವ ಪುರುಷನು ಭಕ್ತಿಯಿಂದ ಕೂಡಿಕೊಂಡು ಉಪಾಯ ಸಾಮರ್ಥ್ಯದಿಂದ ಹುಬ್ಬುಗಳ ಮಧ್ಯದಲ್ಲಿ ಪ್ರಾಣ ವಾಯುವನ್ನು ನಿವೇಶಿಸಿಕೊಂಡು ಪ್ರಯಾಣಕಾಲದಲ್ಲಿ ನಿಶ್ಚಲವಾದ ಮನಸ್ಸಿನಿಂದ ಯಾರು ಹಿಂದೆ ಹೇಳಿದ ರೀತ್ಯಾ ಪರಮಾತ್ಮನನ್ನು ಸ್ಮರಿಸುತ್ತಾನೋ ಅವನೇ ಆ ದಿವ್ಯ ಪರಮಪುರುಷನನ್ನು ಹೊಂದುತ್ತಾನೆ. ॥ ೯, ೧೦ ॥

ವೇದಜ್ಞಾನಿಗಳು ಯಾರ ಸ್ವರೂಪವನ್ನು ಸರ್ವಥಾ ನಾಶವಿಲ್ಲದ್ದೆಂತ ಹೇಳುತ್ತಾರೋ, ಹೋಗಲ್ಪಟ್ಟ ರಾಗಾದಿದೋಷವುಳ್ಳ ಯತಿಗಳು ಯಾವದನ್ನು ಪ್ರವೇಶಿಸುವರೋ, ಯಾರನ್ನು ಇಚ್ಛಿಸಿಕೊಂಡು ಜನರು ಬ್ರಹ್ಮಚರ್ಯಾದಿಗಳನ್ನು ಆಚರಿಸುವರೋ, ಅಂಥ ಧ್ಯೇಯ ವಸ್ತುವನ್ನು ಸಂಕ್ಷೇಪತಃ ತಿಳಿಸುತ್ತೇನೆ. ॥ ೧೧ ॥

ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋಯೋಗಧಾರಣಾಂ
ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ ॥೧೩॥
ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥
ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥
ಆಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥

---

ವಾಯು ಸಂಚಾರವಾಗುವ ನಾಡಿಗಳನ್ನು ನಿಗ್ರಹಿಸಿಕೊಂಡು ಮನಸ್ಸನ್ನು ಹೃದ್ಗತ ಪರಮಾತ್ಮನಲ್ಲಿ ನಿಲ್ಲಿಸಿ ಪ್ರಾಣವಾಯುವನ್ನು ಬ್ರಹ್ಮರಂಧ್ರದಲ್ಲಿ ನಿವೇಶಮಾಡಿ ಅಖಂಡಸ್ಮೃತಿರೂಪವಾದ ಯೋಗಧಾರಣೆಯನ್ನು ಹೊಂದಿದವನಾಗಿ ಓಂ ಎಂತ ಒಂದಕ್ಷರವುಳ್ಳ ಮಂತ್ರವನ್ನು ಜಪಿಸುತ್ತಾ ಬ್ರಹ್ಮರೂಪನಾದ ನನ್ನನ್ನು ಸ್ಮರಿಸಿಕೊಂಡು ಯಾವಾತನು ಶರೀರವನ್ನು ಪರಿತ್ಯಾಗ ಮಾಡುತ್ತಾನೋ, ಆತನು ಮುಕ್ತಿಯನ್ನು ಹೊಂದುತ್ತಾನೆ. ॥ ೧೨, ೧೩ ॥

ಅಂತ್ಯಕಾಲದಲ್ಲಿ ಸ್ಮರಣವು ನಿತ್ಯಾಭ್ಯಾಸವುಳ್ಳವನಿಗೆ ಮಾತ್ರ ಆದೀತು. ಅನ್ಯಥಾ ಆಗುವುದಿಲ್ಲವೆಂದು ಸ್ಪಷ್ಟ ಹೇಳುತ್ತಾನೆ. ಯಾವಾಗಲೂ ಅನ್ಯ ವಿಷಯಕ ಮನಸ್ಸಿಲ್ಲದವನಾಗಿ ನಿತ್ಯವೂ ಯಾರು ಸ್ಮರಿಸುತ್ತಾನೋ, ಅಂಥಾ ನಿತ್ಯೋಪಾಯವುಳ್ಳ ಯೋಗಿಗೆ ನಾನು ಸುಲಭನು. ಅಂದರೆ ಮರಣಕಾಲದಲ್ಲಿ ಸ್ಮೃತಿವಿಷಯನಾಗುವೆನೆಂದರ್ಥವು ॥ ೧೪ ॥

ಹಿಂದೆ ಹೇಳಿದ ಪರಮಗತಿಯನ್ನು ವಿವರಿಸುವನು. ನನ್ನನ್ನು ಹೊಂದಿದ ಮಹಾನುಭಾವರು ಈ ದುಃಖಕ್ಕೆ ಕಾರಣವಾದ ಅಶಾಶ್ವತವಾದ ಪುನರ್ಜನ್ಮವನ್ನು ಹೊಂದುವುದಿಲ್ಲ. ನನ್ನ ಪ್ರಾಪ್ತಿರೂಪವಾದ ಮೋಕ್ಷವನ್ನು ಹೊಂದಿದ್ದರಿಂದ ಎಂತ ಇಲ್ಲಿ ಪರಮಾತ್ಮಪ್ರಾಪ್ತಿಯೇ ಪರಮಗತಿ ಎಂತ ವಿವರಿಸಿದಂತಾಯಿತ್ತು. ॥ ೧೫ ॥

**ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ೧೭**
**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

---

ಚತುರ್ಮುಖಾದಿ ದೇವತೆಗಳನ್ನು ಹೊಂದಿದವರಿಗೂ ಪುನರ್ಜನ್ಮ ವಿಲ್ಲದಪ್ರಯುಕ್ತ "ಮಾಮುಪೇತ್ಯ ಪುನರ್ಜನ್ಮ ನ" ಎಂತ ವಿಶಿಷ್ಯ ಹೇಳಲು ಕಾರಣವೇನು? ಎಂಬ ಶಂಕೆಗೆ ಉತ್ತರ ಹೇಳುವನು. ಮೇರು ಪರ್ವತದಲ್ಲಿರುವ ಬ್ರಹ್ಮಸದನವನ್ನಾರಂಭಿಸಿಕೊಂಡು ಅದರ ಕೆಳಗಿನ ಲೋಕ ಗಳಲ್ಲಿರುವ ಜನರು ಪುನಃಪುನಃ ಜನನಮರಣವುಳ್ಳವರು. ಇಲ್ಲಿ ಚತು ರ್ಮುಖಬ್ರಹ್ಮನಿಗೆ ಮೇರುಪರ್ವತದಲ್ಲಿಯೂ ಸತ್ಯಲೋಕದಲ್ಲಿಯೂ ಒಂದು ಸ್ಥಾನವಿದೆ. ಅದರಲ್ಲಿ ಮೇರುವಿನಲ್ಲಿರುವ ಬ್ರಹ್ಮಸದನವನ್ನಾರಂಭಿಸಿಕೊಂಡು ಕೆಳಗಿನ ಲೋಕಗಳಲ್ಲಿರುವವರಿಗೆ ಉತ್ಪತ್ತಿಯುಂಟೆಂದು ಹೇಳಲು ಸತ್ಯಲೋ ಕಾದಿ ಚತುರ್ಮುಖಸ್ಥಾನಗಳಲ್ಲಿ ಇರುವವರಿಗೆ ಪುನರ್ಜನ್ಮ ಇಲ್ಲವೆಂತ ಅರ್ಥಾತ್ ಸಿದ್ಧವಾಗುತ್ತದೆ. ಹೀಗಿರುವಲ್ಲಿ ಪರಮಾತ್ಮನನ್ನು ಹೊಂದಿದವ ರಿಗೆ ಪುನರ್ಜನ್ಮ ಇಲ್ಲವೆಂದು ವಿಶಿಷ್ಯ ಹೇಳಲು ಕಾರಣವೇನು? ಎಂಬುವ ಶಂಕಾಪರಿಹಾರಾರ್ಥವಾಗಿಯೇ, "ಮಾಮುಪೇತ್ಯ ಪುನರ್ಜನ್ಮ ನ ವಿದ್ಯತೇ" ಎಂತ ಈ ಶ್ಲೋಕದಲ್ಲಿಯೂ ಪುನಃ ಹೇಳಿದ್ದು. ಅಂದರೆ, ಮೇರು ವಿನಲ್ಲಿರುವ ಚತುರ್ಮುಖಸದನದಿಂದ ಉಪರಿತನ ಲೋಕಗಳಲ್ಲಿ ಇದ್ದ ಮಾತ್ರದಿಂದ ಪುನರುತ್ಪತ್ತಿ ಇಲ್ಲವೆಂದರ್ಥವಲ್ಲ. ಕಿಂತು ಆ ಲೋಕದಲ್ಲಿರುವ ನನ್ನನ್ನು ಹೊಂದಿದವರಿಗೆ ಪುನಃರ್ಜನ್ಮ ವಿಲ್ಲವೆಂದರ್ಥ. ॥ ೧೬ ॥

ನನ್ನನ್ನು ಹೊಂದಿದವರಿಗೆ ಪುನರಾವರ್ತಿ ಇಲ್ಲವೆಂಬ ವಿಷಯವನ್ನು ದೃಢಮಾಡಲಿಕ್ಕೆ ಸೃಷ್ಟಿಪ್ರಲಯ ಕರ್ತೃತ್ವರೂಪ ಮಹಿಮೆಯನ್ನು ತನಗೆ ಹೇಳಲು ಆರಂಭಿಸುವನು. ಅಹೋರಾತ್ರಿಗಳನ್ನು ತಿಳಿದ ಜನರು ಬ್ರಹ್ಮನ ಒಂದು ಹಗಲನ್ನು ಬಹುಯುಗಪರ್ಯಂತವಾದದ್ದನ್ನು ತಿಳಿಯುತ್ತಾರೆ. ಹೀಗೆ ರಾತ್ರಿಯನ್ನೂ ಬಹುಯುಗಪರಿಮಿತವಾದದ್ದನ್ನು ತಿಳಿಯುವರು ॥೧೭॥

ಭೂತಗ್ರಾಮಃ ಸ ಏವಾಯಂ ಭೂತ್ವಾಭೂತ್ವಾ ಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥
ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥
ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।
ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥

---

ಇದರಿಂದ ಪ್ರಕೃತಕ್ಕೇನು ಬಂತೆಂದರೆ, ಹೇಳುವನು. ಹಗಲು ಬರುತ್ತಲೇ ಅಂದರೆ ಪ್ರಳಯದ ಅಂತ್ಯದಲ್ಲಿ ಅವ್ಯಕ್ತಶಬ್ದವಾಚ್ಯನಾದ ಪರಮಾತ್ಮನಿಂದ ಸಕಲಜನ್ಯಪದಾರ್ಥಗಳೂ ಉತ್ಪನ್ನಗಳಾಗುವವು. ರಾತ್ರಿಯು ಪ್ರಾಪ್ತವಾಗುವಾಗ ಅಂದರೆ ಪ್ರಳಯಕಾಲದಲ್ಲಿ ಅವ್ಯಕ್ತನಾಮಕನಾದ ಪರಮಾತ್ಮನಲ್ಲೇ ಲಯವನ್ನು ಈ ಎಲ್ಲಾ ಪದಾರ್ಥಗಳೂ ಹೊಂದುತ್ತಾವೆ.॥೧೮॥

ಪರಮಾತ್ಮನ ಮಹಾಮಹಿಮೆಯನ್ನು ಹೇಳುವ ಉದ್ದಿಶ್ಯ ಈ ಸೃಷ್ಟಿಪ್ರಲಯಗಳಿಗೆ ಅವಿಚ್ಛೇದವನ್ನು ಹೇಳುವನು. ಜನ್ಮನಾಶವುಳ್ಳ ಈ ಚರಾಚರಸಮುದಾಯವು ಬ್ರಹ್ಮನ ಹಗಲು ಪ್ರಾಪ್ತವಾಗುತ್ತಲೇ (ಪ್ರತಿ ದಿವಸದಲ್ಲೂ) ಹುಟ್ಟುತ್ತದೆ. ಹುಟ್ಟಿದರೂ ಪರಮಾತ್ಮನ ರಾತ್ರಿಯು ಬರುವಾಗಲೇ ಪ್ರಲಯದಲ್ಲಿ ಪರಮಾತ್ಮನ ಅಧೀನವಾಗಿ ಅವನಲ್ಲೇ ಲಯಹೊಂದುತ್ತದೆ. ॥ ೧೯ ॥

ಈ ಪದಾರ್ಥಗಳ ಹಾಗೆ ಪರಮಾತ್ಮನಿಗೆ ಮಾತ್ರ ಉತ್ಪತ್ತಿನಾಶವಿಲ್ಲವೆಂದು ಹೇಳುವನು. ಅವ್ಯಕ್ತನಾಮಕನಾದ ಪರಮಾತ್ಮನು ಚರಾಚರಸಮುದಾಯದಿಂದ ವಿಲಕ್ಷಣನೂ, ಸ್ವತಂತ್ರನೂ,(ಭಾವಃ)ಅನಾದಿಯೂ. ಆಗಿದ್ದಾನೆ. ಯಾವ ಪರಮಾತ್ಮನು ಸರ್ವಭೂತ ನಾಶವಾಗುವಾಗಲೂ ತಾನು ನಾಶ ಹೊಂದುವುದಿಲ್ಲವೋ. ॥ ೨೦ ॥

ಅವ್ಯಕ್ತನಾದ ಪರಮಾತ್ಮನಿಗೆ ಸರ್ವಾತ್ಮನಾ ನಾಶವಿಲ್ಲದ ಪ್ರಯುಕ್ತ "ತಸ್ಮಾದಕ್ಷರಂ ತಸ್ಮಾದಕ್ಷರಂ" ಇತ್ಯಾದಿ ಶ್ರುತಿಯಲ್ಲಿ ಅಕ್ಷರಯೆಂತ ಅನಿಸಿಕೊಂಡಿದ್ದೇನೆ. ಅಂಥ ಅವ್ಯಕ್ತ ಪರಮಾತ್ಮನನ್ನೇ ಪರಮ (ಮುಖ್ಯ)

ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।
ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥೨೨॥
ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।
ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥೨೩॥
ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥

---

ಪ್ರಾಪ್ಯನೆಂತ ಹೇಳುತ್ತಾರೆ. ಯಾಕೆಂದರೆ ಯಾವ ಪರಮಾತ್ಮನನ್ನು ಹೊಂದಿ ಪುನಃ ಸಂಸಾರಕ್ಕೆ ಬರುವುದಿಲ್ಲವೋ. ಅದೇ ನನ್ನ ಸ್ವರೂಪವು. ॥ ೨೧ ॥

ಎಲೋ ಪಾರ್ಥನೇ ಯಾವ ಪರಮಾತ್ಮನ ಒಳಗೆ ಸಕಲ ಭೂತಗಳೂ ಇದ್ದಾವೋ, ಯಾವಾತನಿಂದ ಸರ್ವಜಗತ್ತು ವ್ಯಾಪ್ತವಾಗಿದೋ, ಅಂತಹ ಸರ್ವೋತ್ತಮಪುರುಷನು ಇತರಸಾಧಾರಣವಾದ ಭಕ್ತಿಯಿಂದಲೇ ಲಭ್ಯನು. ಹಿಂದೆ ಪರಮಾತ್ಮನ ಪ್ರಾಪ್ತಿಸಾಧನಗಳು ಬಹಳ ಹೇಳಿದ್ದರೂ ಅವುಗಳಲ್ಲಿ ಭಕ್ತಿಯೇ ಪ್ರಧಾನಕಾರಣವೆಂದು ತೋರಿಸಲಿಕ್ಕೆ ಇಲ್ಲಿ ವಿಶಿಷ್ಯ ಹೇಳಿದ್ದು. ॥ ೨೨ ॥

ಪರಮಾತ್ಮನನ್ನು ಹೊಂದಿದವರಿಗೆ ಪುನರಾವೃತ್ತಿ ಇಲ್ಲವೆಂತಲೂ, ಇತರರನ್ನು ಹೊಂದಿದವರಿಗೆ ಪುನರಾವೃತ್ತಿಯುಂಟೆಂತಲೂ ಹಿಂದೆ ಹೇಳಿರುವರು. ಯಾವ ಮಾರ್ಗದಿಂದ ಹೋದವರಿಗೆ ಹಾಗೆ ಪುನರಾವೃತ್ತಿ ಇರುವದೂ, ಇಲ್ಲದಿರುವದೂ ಎಂಬುವುದನ್ನು ತಿಳಿಯುವ ಉದ್ದಿಶ್ಯ ಆ ದಾರಿಯನ್ನು ಹೇಳುವೆನೆಂದು ಪ್ರತಿಜ್ಞಾಮಾಡುತ್ತಾನೆ. ಯಾವ ಕಾಲದಲ್ಲಿ (ಅಂದರೆ) ಯಾವ ಕಾಲಾಭಿಮಾನಿದೇವತೆಗಳಿಂದ ನಿಯಮಿತಗಳಾದ ಮಾರ್ಗಗಳಲ್ಲಿ ಹೋದ ಯೋಗಿಗಳು ಪುನರಾವೃತ್ತಿಯನ್ನಾಗಲೀ ಅದರ ಅಭಾವವನ್ನಾಗಲೀ ಹೊಂದುತ್ತಾರೋ, ಅಂತಹ ಕಾಲವನ್ನು (ಅಂದರೆ) ಕಾಲಾಭಿಮಾನಿದೇವತೆಗಳನ್ನೂ, ಮಾರ್ಗವನ್ನೂ ಹೇಳುವೆನು. ॥ ೨೩ ॥

ಅಗ್ನಿಯು, ಅಗ್ನಿನಾಮಕದೇವತೆಯೂ, (ಜ್ಯೋತಿಃ) ಅರ್ಚಿರ್ನಾಮಕ ದೇವತೆಯೂ, ಹಗಲಿಗೆ ಅಭಿಮಾನಿಯಾದ ದೇವತೆಯೂ, ಶುಕ್ಲಪಕ್ಷಾಭಿಮಾನಿ ದೇವತೆಯೂ, ಷಣ್ಮಾಸಾಭಿಮಾನಿದೇವತೆಯೂ, ಉತ್ತರಾಯಣಾಭಿ

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ॥೨೫॥**
**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾಽಽವರ್ತತೇ ಪುನಃ ॥ ೨೬ ॥**
**ನೈತೇ ಸೃತೀ ಪಾರ್ಥ ಜಾನನ್ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ೨೭**

---

ಮಾನಿದೇವತೆಯೂ, ಈ ದೇವತೆಗಳಿರುವ ದಾರಿಯಲ್ಲಿ ಯಾರು ಹೋಗುವರೋ, ಅಂತಹ ಬ್ರಹ್ಮಜ್ಞಾನಿಗಳಾದ ಜನರು ಬ್ರಹ್ಮನನ್ನು ಹೊಂದುತ್ತಾರೆ. ॥ ೨೪ ॥

ಹೀಗೆ ಧೂಮ-ರಾತ್ರಿ-ಕೃಷ್ಣಪಕ್ಷ-ದಕ್ಷಿಣಾಯನ ಇವುಗಳ ಅಭಿಮಾನಿ ದೇವತೆಗಳಿಂದ ಕೂಡಿದ ಮಾರ್ಗದಿಂದ ಹೋಗಿ ಚಂದ್ರನನ್ನು ಹೊಂದಿ ಯೋಗಿಯು ಪುನರಾವೃತ್ತಿಯನ್ನು ಹೊಂದುತ್ತಾನೆ. ಇಲ್ಲಿ ಹೆಚ್ಚಾಗಿ ಕಾಲಾಭಿಮಾನಿ ದೇವತೆಗಳೇ ದಾರಿಯಲ್ಲಿರುವ ಕಾರಣ ಕಾಲವನ್ನೇ ಹೇಳುವದಾಗಿ ಪ್ರತಿಜ್ಞಾ ಮಾಡಿದ್ದು. ಹೀಗೆ ಹಿಂದೆ ಬ್ರಹ್ಮವಿದಃ ಎಂತ ಬ್ರಹ್ಮಜ್ಞಾನಿಗಳನ್ನೂ, ಇಲ್ಲಿ ಯೋಗಿ ಎಂತ ಕರ್ಮಿಯನ್ನೂ ಹೇಳಿದ ಪ್ರಯುಕ್ತ ಈಎರಡು ದಾರಿಗಳು ಜ್ಞಾನ ಮತ್ತು ಕರ್ಮ ಈಎರಡು ಉಪಾಯ ಸಾಧನವೆಂದು ಸೂಚಿಸಿದಂತಾಯ್ತು. ॥ ೨೫ ॥

ಹೀಗೆ ನಾನು ಹಿಂದೆ ಹೇಳಿದ ಶುಕ್ಲ ಕೃಷ್ಣ ಎಂತ ಹೆಸರುಳ್ಳ ಎರಡು ಮಾರ್ಗಗಳು, ಜ್ಞಾನ ಕರ್ಮರೂಪ ಉಪಾಯವುಳ್ಳವರಿಗೆ ಯಾವಾಗಲೂ ಇರುವವುಗಳೇ, ಅವುಗಳಲ್ಲಿ ಒಂದು ಮಾರ್ಗದಿಂದ(ಜ್ಞಾನ ಮಾರ್ಗ)ಹೋದವನು ಅನಾವೃತ್ತಿಯನ್ನು ಹೊಂದುತ್ತಾನೆ. (ಪುನಃ ಸಂಸಾರಿಯಾಗುವುದಿಲ್ಲ.) ॥ ೨೬ ॥

ಈ ಎರಡು ಮಾರ್ಗಗಳನ್ನು ಯಾಕೆ ಹೇಳಿದ್ದೆಂದರೆ ಅದರ ಫಲ ಹೇಳುತ್ತಾನೆ. ಎಲೋ ಪಾರ್ಥನೇ ನಾನು ಹೇಳಿದ ಈ ಎರಡು ದಾರಿಗಳನ್ನು ತಿಳಿದವನು ಯಾರೂ ನನ್ನ ವಿಸ್ಮರಣವುಳ್ಳವನಾಗುವದಿಲ್ಲ. ಆದಕಾರಣ ಸರ್ವಕಾಲಗಳಲ್ಲಿಯೂ, ಜ್ಞಾನ ಕರ್ಮರೂಪ ಉಪಾಯವುಳ್ಳವನಾಗು. ॥ ೨೭ ॥

ವೇದೇಷು ಯಜ್ಞೇಷು ತಪಸ್ಸು ಚೈವ
ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ
ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥ ೨೮ ॥

॥ ಇತಿ ಅಷ್ಟಮೋಽಧ್ಯಾಯಃ ॥

---

ವೇದ ಯಜ್ಞ ತಪಸ್ಸು ದಾನ ಮುಂತಾದ ಶುಭಕರ್ಮಗಳಲ್ಲಿ ಏನು ಫಲವು ಹೇಳಲ್ಪಟ್ಟದೋ, ನಾನು ಹೇಳಿದ ಈ ಎರಡು ಮಾರ್ಗಗಳನ್ನು ತಿಳಿದುಕೊಳ್ಳುವುದು, ಅದಕ್ಕಿಂತಲೂ ಅತಿಶಯಿತ ಫಲವುಳ್ಳದ್ದು. ಯಾಕಂದರೆ, ಈ ಎರಡು ಮಾರ್ಗವನ್ನು ತಿಳಿದುಕೊಂಡು ಯೋಗಿಯು ಪ್ರಥಮವಾದ ಉತ್ತಮವಾದ ವಿಷ್ಣುವಿನ ಸ್ಥಾನವನ್ನು ಹೊಂದುತ್ತಾನೆ. ಆದಕಾರಣ ಈ ಮಾರ್ಗಜ್ಞಾನವು ಮುಖ್ಯವಾದದ್ದು. ಇಲ್ಲಿ ಮಾರ್ಗಜ್ಞಾನ ಮಾತ್ರದಿಂದಲೇ ಪರಮಾತ್ಮನ ಪ್ರಾಪ್ತಿಯಾಗುತ್ತದೆಂತಲ್ಲ. ಮತ್ತು ಈ ಅಧ್ಯಾಯದಲ್ಲಿ ಆದಿಯಿಂದ ಹೇಳಿದ ರೀತ್ಯಾ ಜಗತ್ಕರ್ತೃತ್ವಾದಿ ಮಹಿಮಾ ವಿಶಿಷ್ಟನಾದ ಪರಮಾತ್ಮನನ್ನು ಭಕ್ತಿಪೂರ್ವಕ ತಿಳಿದುಕೊಳ್ಳುವುದು ಅವಶ್ಯ ವೆಂಬುವುದನ್ನು ಮರೆಯಬಾರದು. ॥ ೨೮ ॥

# ನವಮೋಽಧ್ಯಾಯಃ

॥ ಶ್ರೀಭಗವಾನುವಾಚ ॥

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ೧**
**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ೨**

---

ಏಳನೇ ಅಧ್ಯಾಯದಲ್ಲಿ ಹೇಳಿದ ಪರಮಾತ್ಮನ ಮಹಿಮೆಯನ್ನು ಈ ಅಧ್ಯಾಯದಲ್ಲಿ ಬಿಡಿಸಿ ನಿರೂಪಿಸುತ್ತಾನೆ. ಹಾಗಾದರೆ ಏಳನೇ ಅಧ್ಯಾಯ ಮುಗಿದೊಡನೆಯೇ ಈ ವಿಷಯ ನಿರೂಪಿಸಬೇಕಿತ್ತೆಂದರೆ ಈ ಒಂಭತ್ತನೇ ಅಧ್ಯಾಯವೇ ಎಂಟನೆಯ ಸ್ಥಾನದಲ್ಲಿಡಬೇಕಿತ್ತೆಂತ ಶಂಕಿಸಬಾರದು. ಏಳನೇ ಅಧ್ಯಾಯದಲ್ಲಿ ಹೇಳಿದ ಅಧ್ಯಾತ್ಮಾದಿ ಪದಗಳಿಗೆ ಅರ್ಥವಾಗುವ ತನಕ ಬೇರೆ ನಿರೂಪಿಸಲಿಕ್ಕೆ ಮನಸ್ಸಿಲ್ಲದ ಕಾರಣ ಎಂಟರಲ್ಲಿ ಆ ಮನಸ್ಸಿನ ಆಕುಲತೆಯನ್ನು ತೀರಿಸಿ ಆ ವಿಚಾರದಲ್ಲಿ ಬಂದ ಕೆಲವು ವಿಷಯಗಳನ್ನೂ ಹಿಂದೆ ಹೇಳಿದ ರೀತ್ಯಾ ನಿರೂಪಣಮಾಡಿ ಈಗ ಅವಸರ ಬಂದ ಪ್ರಯುಕ್ತ ಮಾಹಾತ್ಮ್ಯವನ್ನು ಇಲ್ಲಿ ನಿರೂಪಿಸಿದ್ದು. ಶ್ರೋತೃಗಳಿಗೆ ಆದರ ಹುಟ್ಟುವ ಉದ್ದಿಶ್ಯ ತಾನು ಹೇಳುವ ವಿಷಯುವನ್ನು ಪ್ರಶಂಸಾಮಾಡುತ್ತಾನೆ. ಅಸೂಯಾದಿದೋಷರಹಿತನಾದ ನಿನಗೋಸ್ಕರ ವಿಶಿಷ್ಯ ತಿಳಿದುಕೊಳ್ಳಲು ಯೋಗ್ಯವಾದ ವಿಷಯದಿಂದ ಕೂಡಿದ ಅತಿಗೋಪ್ಯವಾದ ಜ್ಞೇಯ (ವಿಷಯ)ವನ್ನು ಹೇಳುತ್ತೇನೆ. ಯಾವುದರ ಜ್ಞಾನದಿಂದ ಅಶುಭದಿಂದ ಮುಕ್ತನಾಗುತ್ತೀಯೋ. ॥ ೧ ॥

ವಿದ್ಯೆಗಳಲ್ಲಿ ನಾನು ಹೇಳುವ ವಿದ್ಯೆಯು ಶ್ರೇಷ್ಠವಾದದ್ದು. ಹೀಗೆ ಗೋಪ್ಯಗಳಲ್ಲಿ ಮುಖ್ಯ ಗೋಪ್ಯವಾದದ್ದು ಪಾವಿತ್ರ್ಯಸಂಪಾದಕವಾದದ್ದು. ಇಂದ್ರಿಯಗಳಲ್ಲಿ ನಿಯಾಮಕತಯಾ ಇರುವ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಹೇತುವಾದದ್ದು. ಜಗದ್ಧಾರಕನಾದ ಪರಮಾತ್ಮ ವಿಷಯಕ ಪರೋಕ್ಷಜ್ಞಾನ

ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।
ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩ ॥
ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।
ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥
ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।
ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥

---

ಮೋಕ್ಷಾದಿ ಅಕ್ಷಯ ಫಲಪ್ರದವಾದದ್ದು. ಸಂಪಾದಿಸಿಕೊಳ್ಳಲು ಅತಿ ಸುಲಭವಾದದ್ದು. ಇಂಥಾದ್ದನ್ನು ತಿಳಿಸುತ್ತೇನೆಂದು ಹಿಂದಿನ ಶ್ಲೋಕದಿಂದ ಅನ್ವಯ ಇಟ್ಟುಕೊಳ್ಳತಕ್ಕದ್ದು. ॥ ೨ ॥

ನೀನು ಹೇಳುವದು ಇಷ್ಟು ಸುಲಭವಾಗಿದ್ದರೆ ಎಲ್ಲವರೂ ಇದನ್ನು ಸಂಪಾದಿಸಿ ಮುಕ್ತಿಯನ್ನು ಹೊಂದ್ಯಾರು, ಯಾರೂ ಸಂಸಾರಿಗಳಾಗಲಿಕ್ಕಿಲ್ಲ ಎಂಬ ಶಂಕೆಗೆ ಉತ್ತರವನ್ನು ಹೇಳುತ್ತಾನೆ. ಈ ಪರಮಾತ್ಮವಿಷಯಕವಾದ (ಧರ್ಮಸ್ಯ) ಈ ಜ್ಞಾನಕ್ಕೆ ಮೋಕ್ಷ ಹೇತುತ್ವ ಆದೆಯೆಂತ ವಿಶ್ವಾಸ ಇಲ್ಲದ ಪುರುಷರು ನನ್ನನ್ನು ಹೊಂದದೆ ಈ ನಾಶಕವಾದ ಸಂಸಾರ ಮಾರ್ಗದಲ್ಲಿ ಚೆನ್ನಾಗಿ ಬೀಳುತ್ತಾರೆ. ॥ ೩ ॥

ಹಿಂದೆ ಪ್ರತಿಜ್ಞಾತವಾದ ಮಹಿಮೆಯನ್ನು ಹೇಳುತ್ತಾನೆ. ಅಪ್ರಕಟವಾದ ಮೂರ್ತಿಯುಳ್ಳ ನನ್ನಿಂದ ಈ ಚರಾಚರಾತ್ಮಕವಾದ ಜಗತ್ತು ವ್ಯಾಪ್ತವಾಗಿದೆ. ನಾನು ವ್ಯಾಪ್ತನಾಗಿದ್ದರೂ ಕಣ್ಣಿಗೆ ತೋರುವ ಹಾಗಿಲ್ಲವೆಂತ ತಿಳಿಸಲಿಕ್ಕೆ ಅವ್ಯಕ್ತಮೂರ್ತಿನಾ ಎಂದು ಹೇಳಿದ್ದು. ಜಗತ್ತಿನಲ್ಲಿ ನೀನು ಇರುವದಾದರೆ ನಿನಗೆ ಅವುಗಳು ಆಶ್ರಯಗಳೋ ಎಂದು ಶಂಕಾಬಂದರೆ ಅಲ್ಲವೆಂದು ಹೇಳುತ್ತಾನೆ. ಎಲ್ಲಾ ಭೂತಗಳು ನನ್ನಲ್ಲಿದ್ದಾವೆ. ಅಂದರೆ ನನ್ನನ್ನಾಶ್ರಯಿಸಿಕೊಂಡಿದ್ದಾವೆ. ನಾನು ಅವುಗಳಲ್ಲಿಲ್ಲ ಅಂದರೆ ಅವುಗಳನ್ನಾಶ್ರಯಿಸಿಕೊಂಡಿಲ್ಲ. ॥ ೪ ॥

ಪರಮಾತ್ಮನನ್ನು ನಾವೆಲ್ಲಾ ಆಶ್ರಯಿಸಿಕೊಂಡಿದ್ದರೆ ನಾವು ಭೂಮಿಯಲ್ಲಿದ್ದೇವೆಂತ ತಿಳುವಳಿಕೆ ಬಂದ ಹಾಗೆ ನಾವು ಪರಮಾತ್ಮನಲ್ಲಿದ್ದೇವೆ ಎಂದು ಪ್ರತೀತಿ ಬರಲಿಯೆಂಬ ಶಂಕಾ ಬಾರದ ಹಾಗೆ ಹೇಳುತ್ತಾನೆ. ಈ ಪ್ರಾಣಿಗಳು ನನ್ನಲ್ಲಿಲ್ಲ. ಅಂದರೆ ಭೂಮಿಯಲ್ಲಿರುವಾಗ ಭೂಮಿಯನ್ನು ಮುಟ್ಟಿಕೊಂಡು

**ಯಥಾಽಽಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥**

---

ನೋಡಿಕೊಂಡು ತಿಳುವಳಿಕೆಯಿಂದ ಇರುವ ಹಾಗೆ ಪರಮಾತ್ಮನನ್ನು ಮುಟ್ಟಿಕೊಂಡು ನೋಡಿಕೊಂಡು ತಿಳುವಳಿಕೆಯಿಂದ ಅವನಲ್ಲಿ ನಾವಿಲ್ಲ. ಯಾಕೆಂದರೆ ಅವನು ಚಕ್ಷುರಿಂದ್ರಿಯ ತ್ವಗಿಂದ್ರಿಯಾದಿಗಳಿಗೆ ಆಗೋಚರನು. ಆದ್ದರಿಂದ ನಾವು ಅವನಲ್ಲಿದ್ದರೂ ತಿಳಕೊಳ್ಳದ ಪ್ರಯುಕ್ತ ಭೂಮಿಯಲ್ಲಿದ್ದ ಹಾಗೆ ಇಲ್ಲದಿದ್ದದ್ದರಿಂದ ನಚ ಮತ್ಸ್ಥಾನಿ ಎಂತ ಹೇಳಿದ್ದು. ಅದು ಹ್ಯಾಗೆಂದು ಶಂಕಾ ಬಂದರೆ, ಉತ್ತರವಾಗಿ ನನ್ನ ಈಶ್ವರಸಂಬಂಧಿಯಾದ ಸಾಮರ್ಥ್ಯವನ್ನು ನೋಡು ಎಂತ ಹೇಳಿದ್ದಾನೆ. ತನ್ನ ಹಾಗೆ ತನ್ನ ದೇಹವೂ ಕೂಡ ಅಂಥಾ ಮಹಿಮೆಯುಳ್ಳದ್ದು ಎಂತ ಹೇಳುತ್ತಾನೆ. ಭೂತಭಾವನಃ ಭೂತಗಳ ಉತ್ಪತ್ತಿಕರ್ತೃವಾದ ನನ್ನ ದೇಹವು ಈ ಭೂತಗಳನ್ನು ಧರಿಸಿಕೊಂಡದೆ, ತಾನು ಭೂತಗಳಲ್ಲಿಲ್ಲ. ॥ ೫ ॥

ಆಕಾಶದಲ್ಲಿರುವ ವಾಯುವು ನಿತ್ಯದಲ್ಲಿಯೂ ಸರ್ವಗತವಾಗಿದ್ದರೂ ಹ್ಯಾಗೆ ಇತರ ಪದಾರ್ಥಗಳ ಧರ್ಮಸಂಬಧವುಳ್ಳದ್ದಾಗುವುದಿಲ್ಲವೋ. ಅಂದರೆ ಅಶುಚಿಯಾದ ವಸ್ತುವಿನ ಸ್ಪರ್ಶದಿಂದ ಇದು ಅಶುಚಿಯಾಗಲೀ ಶುಚಿಸ್ಪರ್ಶದಿಂದ ಶುಚಿಯಾಗಲೀ ಹ್ಯಾಗೆ ಅಗುವುದಿಲ್ಲವೋ, ಹಾಗೇನೆ ಸರ್ವಭೂತಗಳೂ ನನ್ನಲ್ಲಿದ್ದಾವೆಯೆಂತ ತಿಳಿ. ॥ ೬ ॥

ಪ್ರಳಯಕಾಲದಲ್ಲಿ ಜಡಾಜಡಾತ್ಮಕ ಸರ್ವಭೂತಗಳೂ ನನ್ನ ಅಧೀನವಾದ ಪ್ರಕೃತಿಯನ್ನು ಹೊಂದುತ್ತವೆ. ಅಂದರೆ ಪ್ರಕೃತಿಯಲ್ಲಿ ಲಯ ಹೊಂದುವವು. ಪುನಃ ಸೃಷ್ಟಿಯ ಆದಿಯಲ್ಲಿ ವಿವಿಧ ರೀತಿಯಿಂದ ನಾನು ಅವುಗಳನ್ನು ಸೃಷ್ಟಿಸುತ್ತೇನೆ. ॥ ೭ ॥

ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।
ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥

ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।
ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦ ॥

ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧ ॥

---

ಹಿಂದೆ ಸೃಷ್ಟಿ ಮಾಡುವಾಗ ಪ್ರಕೃತಿಸಂಬಂಧವನ್ನು ಹೇಳದ ಕಾರಣ ಏನೂ ಇತರ ಸಾಧನಗಳನ್ನು ಬಿಟ್ಟೇ ಪರಮಾತ್ಮನು ಪದಾರ್ಥಗಳನ್ನು ಸೃಷ್ಟಿಸುವನೋ ಎಂಬ ಶಂಕೆಯು ಬಾರದ ಹಾಗೆ ಹಿಂದೆ ಹೇಳಿದ ಸೃಷ್ಟಿಯನ್ನು ಬಿಡಿಸುತ್ತಾನೆ. ಈ ತ್ರಿಗುಣಾತ್ಮಕವಾದ ಸ್ವಾಧೀನ ಪ್ರಕೃತಿಯನ್ನು ಉಪಾದಾನವಾಗಿಟ್ಟುಕೊಂಡು ಅಂಥಾ ಪ್ರಕೃತ್ಯಾದಿಗಳಿಂದ ಈ ಸಮಸ್ತ ಪ್ರಾಣಿಸಮುದಾಯವನ್ನು ಪುನಃಪುನಃ ಸೃಷ್ಟಿಸುವೆನು. ॥ ೮ ॥

ಜೀವನ ಹಾಗೆ ಸೃಷ್ಟಿ ಮಾಡುವ ನನಗೆ ಕರ್ಮಬಂಧವಿಲ್ಲವೆಂದು ಹೇಳುವನು. ಉದಾಸೀನ ಪುರುಷನಂತೆ ಇರುವ ಆಯಾಯ ವ್ಯಾಪಾರಗಳಲ್ಲಿ ಆಸಕ್ತನಾಗದಿರುವ (ಅಂದರೆ ಆದರಾಯಾಸ ಇಲ್ಲದ) ನನ್ನನ್ನು ಕರ್ಮಗಳು ಜೀವನಂತೆ ಬಂಧಿಸುವುದಿಲ್ಲ. ॥ ೯ ॥

ಸರ್ವವನ್ನೂ ಸಾಕ್ಷಾತ್ಕರಿಸಿ ವಿಚಾರಕನಂತಿರುವ ಉದಾಸೀನ ಕರಣನಾದ ನನ್ನಿಂದ ಪ್ರೇರಿತವಾದ ಈ ಪ್ರಕೃತಿಯು ಚರಾಚರಾತ್ಮಕವಾದ ಜಗತ್ತನ್ನು ಸೃಷ್ಟಿಮಾಡುತ್ತದೆ. ಎಲೋ ಕೌಂತೇಯನೆ, ಇದೇ ಕಾರಣದಿಂದ ಈ ಜಗತ್ತು ಪುನಃಪುನಃ ಸೃಷ್ಟಿಸಲ್ಪಡುತ್ತದೆ. ॥ ೧೦ ॥

ನೀನು ಹೀಗೆ ಸೃಷ್ಟಿ ಸ್ಥಿತಿ ಸಂಹಾರಕರ್ತನಾದರೆ ಇಂಥಾ ಮಹಾನುಭಾವನಾದ ನಿನ್ನನ್ನು ಕೆಲವರು ಯಾಕೆ ನಿಂದಿಸುವರು ಎಂಬ ಶಂಕೆಗೆ ಸಮಾಧಾನ ಹೇಳುವನು. ಅಜ್ಞರು ಈ ಮನುಷ್ಯಶರೀರ ಸದೃಶವಾದ ಶರೀರವನ್ನು ಹೊಂದಿದ ನನ್ನನ್ನು ನನ್ನ ಉತ್ತಮವಾದ ಸರ್ವದಾ ಇರುವ ಸ್ವಭಾವವನ್ನು ತಿಳಿಯದೆ ನಿಂದಿಸುವರು. ॥ ೧೧ ॥

ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥೧೨॥
ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥೧೩॥
ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥
ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಂ ॥ ೧೫ ॥

---

ಹಾಗಾದರೆ ನಿನ್ನನ್ನು ನಿಂದಿಸುವವರಿಗೆ ಅನರ್ಥವಿಲ್ಲವೊ ಎಂದರೆ ಉಂಟೆಂದು ನಿರೂಪಿಸುವನು. ವ್ಯರ್ಥವಾದ ಆಶಾವುಳ್ಳವರು. ಅಂದರೆ ಅವರಿಂದ ಕಾಮಿತವಾದದ್ದು ಲಬ್ಧವಾಗುವುದಿಲ್ಲವೆಂದು ಅರ್ಥವು.ಮೋಘವಾದ ಕರ್ಮವುಳ್ಳವರು. ಅಂದರೆ ಯಜ್ಞಾದಿಕರ್ಮಗಳ ಫಲ ಅವರಿಗಿಲ್ಲ. ಅವರ ಜ್ಞಾನವೂ ಮೋಘವೇ. ಅಂದರೆ ವ್ಯರ್ಥವೇ. ಅವರು ವಿರುದ್ಧವಾದ ಮನಸ್ಸುಳ್ಳವರು.ಯಾಕವರ ಮನಸ್ಸು ಹೀಗೆ ವಿಪರೀತವಾಗಿ ಉಂಟೆಂದು ಹೇಳಿದರೆ ಕಾರಣ ನಿರೂಪಿಸುವನು. ಬುದ್ಧಿಭ್ರಂಶಕರವಾದ ಅಸುರಸ್ವಭಾವನನ್ನಾಗಲಿ ರಾಕ್ಷಸಸ್ವಭಾವವನ್ನಾಗಲೀ ಅವರು ಆಶ್ರಯಿಸಿದವರು. ಆ ಸ್ವಭಾವವೇ ಕಾರಣವಾಗಿರುವದು, ಪರಮಾತ್ಮನಿಂದಕರು ತಾಮಸರೆಂದಭಿಪ್ರಾಯ. ॥೧೨॥

ಮುಕ್ತಿಯೋಗ್ಯರಾದ ಉತ್ತಮ ಜೀವರ ಸ್ವಭಾವವುಳ್ಳ ಮಹಾತ್ಮರಾದರೂ ಸಕಲ ಪ್ರಾಣಿಗಳಿಗೆ ಕಾರಣನೆಂತ ನನ್ನನ್ನು ತಿಳಿದುಕೊಂಡು ಅನ್ಯತ್ರ ಮನಸನ್ನಿಡದೆ ನನ್ನನ್ನೇ ಭಜಿಸುವರು. ॥ ೧೩ ॥

ಭಜನೆಯ ಪ್ರಕಾರವನ್ನು ಹೇಳುವನು. ಯಾವಾಗಲೂ ರಾಮ ಕೃಷ್ಣ ಎಂದು ನನ್ನ ನಾಮಕೀರ್ತನ ಮಾಡುತ್ತಾ ಪೂಜಾದಿಗಳಲ್ಲಿ ಪ್ರಯತ್ನಿಸುತ್ತಾ ತಪ್ಪದೆ ಉಪವಾಸಾದಿ ವ್ರತಗಳುಳ್ಳವರಾಗಿ ನನ್ನನ್ನು ಮನಸ್ಸಿನಲ್ಲಿ ಸರ್ವದಾ ಸ್ಮರಿಸುತ್ತಾ ಭಕ್ತಿಪೂರ್ವಕ ನಮಸ್ಕರಿಸುತ್ತಾ ನನ್ನನ್ನು ಉಪಾಸಿಸುವರು. ॥ ೧೪ ॥

**ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥೧೬॥**
**ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ॥ ೧೭ ॥**

---

ಇತರರು ಜ್ಞಾನಯಜ್ಞದಿಂದ ನನ್ನನ್ನು ಯಜಿಸುವವರಾಗಿ ಉಪಾಸನಾಮಾಡುತ್ತಾರೆ. ಅಂದರೆ ಶ್ರವಣಮನನಾದಿಗಳನ್ನು ತಾನು ಮಾಡುತ್ತಾ ಇತರರಿಗುಪದೇಶಿಸುತ್ತಾ ಯಾವಾಗಲೂ ಪರಮಾತ್ಮನ ಜ್ಞಾನಸಂಪಾದನೆಯಲ್ಲಿ ಆಸಕ್ತರಾಗಿದ್ದಾರೆಂದರ್ಥವು. ಹೇಗೆ ತಿಳಕೊಂಡು ಉಪಾಸಿಸುವರೆಂದರೆ, ಬೇರೆ ಪ್ರಮಾಣಗಳಲ್ಲಿ ಹೇಳಿದ ರೀತ್ಯಾ ನಾರಾಯಣಾತ್ಮಕ ಏಕರೂಪವುಳ್ಳವನೆಂದಾಗಲೀ ಪೃಥಕ್ ವಾಸುದೇವಾದಿ ಚತುರ್ಮೂರ್ತಿಯುಳ್ಳವನೆಂದಾಗಲೀ ಹೀಗೆ ದ್ವಾದಶಮೂರ್ತಿಯೆಂದಾಗಲೀ ಇತ್ಯಾದಿ ಬಹುವಿಧದಿಂದ ಬಹುಜನರು ಉಪಾಸಿಸುತ್ತಾರೆ. ॥ ೧೫ ॥

ಈ ವರೆಗೆ ತಿಳಿದುಕೊಳ್ಳಲಿಕ್ಕೆ ಯೋಗ್ಯವಾದ ಸಾಮಾನ್ಯ ವಿಷಯವನ್ನು ಹೇಳಿ ವಿಶಿಷ್ಟ ತಿಳಕೊಳ್ಳಲಿಕ್ಕೆ ಯೋಗ್ಯವಾದ ವಿಷಯಗಳಿಂದ ಸಹಿತವಾಗಿ ಎಂತ ಪ್ರತಿಜ್ಞಾ ಮಾಡಿದ ರೀತ್ಯಾ ವಿಜ್ಞಾನ ಶಬ್ದಾರ್ಥಭೂತವಾದ ವಿಶಿಷ್ಟಜ್ಞೇಯನ್ನು ಹೇಳುವನು. ನಾನೇ ಕ್ರತುವು (ಅಂಗಭೂತವಾದ ಕರ್ಮಕಲಾಪವು.) ಯಜ್ಞವೂ (ಪ್ರಧಾನ ಕರ್ಮವೂ) ನಾನೇ. ಪಿತೃಗಳಿಗೆ ಕೊಡುವ ತಿಲೋದಕಾದಿದಾನವೂ ನಾನೇ, ಔಷಧವೂ ನಾನೇ, ಮಂತ್ರವೂ ನಾನೇ, ಹವಿರ್ಭೂತವಾದ ಆಜ್ಯವೂ ನಾನೇ, ಅಗ್ನಿಯೂ ನಾನೇ ಅಗ್ನಿಯಲ್ಲಿ ಹೋಮಿಸಲ್ಪಟ್ಟ ಪದಾರ್ಥವೂ ನಾನೇ, ಹಿಂದೆ ರಸೋಹಮಪ್ಸು ಎಂಬಲ್ಲಿ ಹೇಳಿದ ರೀತ್ಯಾ ಕರ್ಮಗಳಿಗೆ ನಿಯಾಮಕ ಅವುಗಳ ಭೋಕ್ತೃ ತಾನು ಆದ ಪ್ರಯುಕ ಕ್ರತುಃ ಇತ್ಯಾದಿ ರೀತ್ಯಾ ಹೇಳಿಕೊಳ್ಳುವನೆಂದು ತಿಳಿಯಬೇಕು. ॥ ೧೬ ॥

ಈ ಜಗತ್ತಿನ ಜನಕನೂ ನಾನೇ, ಈ ಜಗತ್ತಿಗೆ ತಾಯಿಯೂ, ಪೋಷಕನೂ, ಪಿತಾಮಹನೂ ನಾನೇ. ಪವಿತ್ರವಾದ ತಿಳಿದುಕೊಳ್ಳಲಿಕ್ಕೆ ಯೋಗ್ಯವಾದ ವಸ್ತುವೂ ನಾನೇ, ಓಂಕಾರ ವಾಚ್ಯನೂ, ಋಕ್‌ಶಬ್ದವಾಚ್ಯನೂ ಹೀಗೆ ನಾನು ಯಜುಃ ಶಬ್ದವಾಚ್ಯನೂ ನಾನೇ. ॥ ೧೭ ॥

ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್
ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥೧೮॥
ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥

ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ
ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ-
ಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥ ೨೦ ॥

---

ಮೋಕ್ಷೇಚ್ಛುಗಳಿಂದ ಗಮ್ಯನಾದ್ದರಿಂದ ನಾನೇ ಗತಿಯು. ಪೋಷಕನೂ ಸ್ವಾಮಿಯೂ ಸಾಕ್ಷಾತ್ ಸರ್ವವನ್ನೂ ನೋಡುವವನೂ, ಸರ್ವಾಶ್ರಯನೂ, ಭೀತರಕ್ಷಕನೂ, ಅನಿಮಿತ್ತವಾಗಿ ಉಪಕಾರಿಯೂ, ಜಗದುತ್ಪತ್ತಿಕರ್ತನೂ, ನಾಶಕಾರಣನೂ, ಪಾಲನೆಗೆ ಕಾರಣನೂ, ಜಗತ್ತನ್ನು ವ್ಯಕ್ತೀಕರಿಸುವವನೂ, ನಾಶ ಇಲ್ಲದವನೂ ನಾನೇ. ॥ ೧೮ ॥

ಸೂರ್ಯನಲ್ಲಿದ್ದುಕೊಂಡು ಸುಡುವವನೂ ನಾನೇ, ಮೇಘ ಚಕ್ರದಲ್ಲಿದ್ದುಕೊಂಡು ವೃಷ್ಟಿಕೊಡುವವನೂ ನಿಲ್ಲಿಸುವವನೂ ನಾನೇ, ಮೃತಿಪರಿಹಾರಕನೂ ಪ್ರಲಯಾದ್ಯನ್ಯಕಾಲಗಳಲ್ಲಿ ನಾಶಕನೂ ನಾನೇ. (ಪ್ರಲಯಕಾಲದ ನಾಶಕನೆಂಬುದನ್ನು ಪ್ರಲಯಃ ಎಂಬ ಶಬ್ದದಿಂದ ಹಿಂದೆ ಹೇಳಿಯಾಗಿದೆ.) ಸಚ್ಛಬ್ದದಿಂದ ಹೇಳಿಸಿಕೊಳ್ಳುವ ಕಾರ್ಯಸಮುದಾಯವೂ, ಅಸಚ್ಛಬ್ದದಿಂದ ಕರಿಸಿಕೊಳ್ಳುವ ಕಾರಣಸಮುದಾಯವೂ ನಾನೇ. ಇಲ್ಲಿಯೂ ಕಾರ್ಯಕಾರಣ ನಿಯಾಮಕನಾದ್ದರಿಂದ ಕಾರ್ಯ ಕಾರಣ ಎಂತ ಹೇಳಿಸಿಕೊಳ್ಳುತ್ತಾನೆಂಬುದನ್ನು ಮರೆಯಬಾರದು. ॥ ೧೯ ॥

ಸರ್ವಯಜ್ಞಭೋಕ್ತ ನೀನೇ ಆದರೆ ಇತರ ದೇವತಾಪ್ರೀತ್ಯರ್ಥವಾಗಿ ಯಜ್ಞ ಮಾಡುವವರಿಗೂ ಕೇವಲ ನಿನ್ನ ಪ್ರೀತ್ಯರ್ಥವಾಗಿ ಯಜ್ಞ ಮಾಡುವವರಿಗೂ ಫಲ ಒಂದೇ ಆಗಲಿ. ಇಬ್ಬರ ಯಜ್ಞಗಳಿಗೂ ಭೋಕ್ತೃ ನೀನೇ ಆದಿಯಷ್ಟೆ ಎಂಬ ಶಂಕೆಯನ್ನು ಪರಿಹರಿಸುವನು. ಋಕ್, ಸಾಮ, ಯಜುಸ್ಸು ಎಂತ ಮೂರು ವಿದ್ಯೆಯುಳ್ಳ ಜನರು ಯಜ್ಞಗಳಿಂದ ನನ್ನನ್ನು ಪೂಜಿಸಿಅಂತ್ಯ

ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ।
ಏವಂ ತ್ರಯೀಧರ್ಮಮನುಪ್ರಪನ್ನಾ
ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥

ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।
ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್॥
ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾಽನ್ವಿತಾಃ।
ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ॥ ೨೩ ॥

---

ದಲ್ಲಿ ಹುತಾವಿಶಿಷ್ಟ ಸೋಮರಸ ಪಾನಮಾಡಿ ಶೋಧಿಸಲ್ಪಟ್ಟ ಪಾಪವುಳ್ಳವರಾಗಿ ಯಾರು ಸ್ವರ್ಗರೂಪ ಪ್ರಾಪ್ಯಸ್ಥಾನವನ್ನು ಅಪೇಕ್ಷಿಸುವರೋ ಅಂತವರು ಪುಣ್ಯಲಭ್ಯವಾದ ಸ್ವರ್ಗರೂಪ ದೇವೇಂದ್ರಲೋಕವನ್ನು ಹೊಂದಿ, ಆ ಲೋಕದಲ್ಲಿ ಅಲೌಕಿಕವಾದ, ದೇವತೆಗಳಿಗೆ ಸಿಗಲಿಕ್ಕೆ ಯೋಗ್ಯಗಳಾದ ಭೋಗಗಳನ್ನು ಭೋಗಿಸುವರು. ॥ ೨೦ ॥

ಹೀಗೆ ಫಲಾಪೇಕ್ಷೆಯಿಂದ ಅನ್ಯದೇವತೆಗಳನ್ನು ಪೂಜಿಸುವ ಕರ್ಮಿಗಳು ವಿಪುಲವಾದ ಸ್ವರ್ಗಸುಖವನ್ನು ಭೋಗಿಸಿ ಆ ಯಜ್ಞದಿಂದುಂಟಾದ ಪುಣ್ಯ ಹ್ರಾಸ ಹೊಂದುತ್ತಿರಲು ಈ ಭೂಮಿಯನ್ನು ಹೊಂದುವರು. ಹೀಗೆ ವೇದೋಕ್ತ ಧರ್ಮವನ್ನು ಫಲಕಾಮನಾದಿಂದ ಮಾಡುವವರು ಸ್ವರ್ಗಕ್ಕೆ ಹೋಗುವುದು, ಪುನಃ ಮನುಷ್ಯ ಲೋಕಕ್ಕೆ ಬರುವುದು, ಹೀಗೆ ಗಮನಾಗಮನವನ್ನು ಹೊಂದುವರೇ ಹೊರತು ಅವರಿಗೆ ಅಪುನರಾವರ್ತಿ ಇಲ್ಲ. ॥೨೧॥

ಇತರರನ್ನು ಚಿಂತಿಸದೆ ನನ್ನನ್ನೇ ಚಿಂತಿಸಿಕೊಂಡು ಯಾವ ಜನರು ಅತಿಶಯ ಭಕ್ತಿಯಿಂದ ನನ್ನನ್ನು ಉಪಾಸನಾ ಮಾಡುವರೋ, ಅಂಥಾ ನಿತ್ಯದಲ್ಲೂ ನನ್ನಲ್ಲಾಸಕ್ತರಾದ ಜನರ ಯೋಗಕ್ಷೇಮವನ್ನು ನಾನೇ ವಹಿಸುವೆನು. ಅವರಿಗೆ ಅಲಭ್ಯವಾದ ಮೋಕ್ಷವನ್ನು ಕೊಟ್ಟು ಅದು ನಷ್ಟವಾಗದಂತೆ ನಾನೇ ನೋಡುವೆನೆಂದರ್ಥವು. ಎರಡು ಕರ್ಮಿಗಳಲ್ಲಿ ಯಜ್ಞಭೋಕ್ತೃ ಪರಮಾತ್ಮನಾಗಿದ್ದು ಫಲಕಾಮನಾದಿಂದ ಅವರು ಯಾಗ ಮಾಡಿದ ಪ್ರಯುಕ್ತ ಅವರಿಗೆ ನಶ್ವರ ಫಲವೂ, ಪರಮಾತ್ಮೈಕಭಕ್ತರಿಗೆ ನಿತ್ಯಫಲವೂ ಎಂದರ್ಥವು. ॥೨೨॥

ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।
ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪ ॥

ಯಾಂತಿ ದೇವವ್ರತಾ ದೇವಾನ್ ಪಿತ್ರ್ಯಾನ್ಯಾಂತಿ ಪಿತೃವ್ರತಾಃ ।
ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಂ

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥

---

ಅನ್ಯದೇವತೆಗಳನ್ನು ಪೂಜಿಸುವವರಿಗೆ ಆಗುವ ಫಲ ಭೇದವನ್ನು ಬಿಡಿಸಿ ಹೇಳುವನು. ಯಾವ ಇತರ ದೇವತಾ ಭಕ್ತರು ಆಸ್ತಿಕ್ಯ ಬುದ್ಧಿಯಿಂದ ಕೂಡಿದವರಾಗಿ ಇತರ ದೇವತೆಗಳನ್ನು ಪೂಜಿಸುವರೋ ಅವರೂ ಕೂಡಾ ಅವಿಧಿಪೂರ್ವಕವಾಗಿ ನನ್ನನ್ನೇ ಪೂಜಿಸುವರು. ನನ್ನ ಉದ್ದೇಶದಿಂದ ಮಾಡುವ ಯಾಗವನ್ನು ಅನ್ಯೋದ್ದೇಶದಿಂದ ಮಾಡಿದ ಪ್ರಯುಕ್ತ ಅದು ಅವಿಧಿಪೂರ್ವಕ ಮಾಡಿದ್ದು. ಆದ್ದರಿಂದಲೇ ಅವರಿಗೆ ಅಲ್ಪ ಫಲವು. ॥೨೩॥

ಸರ್ವ ಯಜ್ಞಗಳಿಗೂ ಭೋಕ್ತನೂ, ಯಜ್ಞ ನಡಿಸುವವನೂ, ಉದ್ದೇಶ್ಯನೂ ನಾನೇ ಆಗಿದ್ದರೂ ನನ್ನನ್ನು ಉದ್ದೇಶ್ಯನನ್ನಾಗಿ ಸರಿಯಾಗಿ ತಿಳಿಯಲಿಲ್ಲ. ಆದ್ದರಿಂದಲೇ ಅವರು ಸ್ವರ್ಗಲೋಕದಿಂದ ಭೂಲೋಕಕ್ಕೆ ಬರುವರು. ॥ ೨೪ ॥

ದೇವತೆಗಳ ನಿಯಮವುಳ್ಳವರು ಅಂದರೆ ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಹೊಂದುವರು. ಹೀಗೆ ಪಿತೃಪೂಜಕರು ಪಿತೃಗಳನ್ನೂ, ಭೂತಪೂಜಕರು ಆ ಭೂತಗಳನ್ನೂ ಹೊಂದುತ್ತಾರೆ. ನನ್ನನ್ನು ಪೂಜಿಸುವವರು ನನ್ನನ್ನು ಹೊಂದುತ್ತಾರೆ. ॥ ೨೫ ॥

ನೀನು ಮಹಾಮಹಿಮನಾದ ಪ್ರಯುಕ್ತ ಫಲಾಧಿಕ್ಯವಿದ್ದರೂ ದುರ್ಬಲರಿಂದ ನಿನ್ನ ಪೂಜಾ ಮಾಡುವುದು ಅಶಕ್ಯವಾದ್ದರಿಂದ ಇತರ ದೇವತೆಗಳನ್ನು ಅವರು ಭಜಿಸತಕ್ಕದ್ದು ಎಂತ ತಿಳಿಯಬಾರದು. ಯಾವಾತನು ಭಕ್ತಿಯಿಂದ ಪತ್ರವನ್ನಾಗಲೀ, ಪುಷ್ಪ ಫಲ, ಜಲವನ್ನಾಗಲಿ ಕೊಡುವನೋ, ಅಂಥಾ ಭಕ್ತಿಯಿಂದ ಜಿತೇಂದ್ರಿಯನಿಂದ ಕೊಡಲ್ಪಟ್ಟದ್ದನ್ನು ನಾನು ಸ್ವೀಕಾರ ಮಾಡು

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥ ೨೭ ॥**
**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸನ್ನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ೨೮**
**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ॥**

---

ತ್ತೇನೆ. ನಾನು ಕೇವಲ ಭಕ್ತಿಯಿಂದಲೇ ಸಂತೋಷಪಡುವವ, ದ್ರವ್ಯಾದಿಗಳಿಂದಲ್ಲ. ಆದಕಾರಣ ದುರ್ಬಲರಿಗೂ ನನ್ನ ಪೂಜಾ ಅಶಕ್ಯವಲ್ಲ. ॥ ೨೬ ॥

ಅತ್ಯಲ್ಪವಾದರೂ ಭಕ್ತಿಯಿಂದ ಕೊಡಲ್ಪಟ್ಟದ್ದು ಪ್ರೀತಿಕರವಾದ ಪ್ರಯುಕ್ತ ನೀನು ಮಾಡುವುದನ್ನೆಲ್ಲಾ ನನಗರ್ಪಿಸೆಂದು ಹೇಳುತ್ತಾನೆ. ಹೇ ಕುಂತೀಪುತ್ರನೇ ನೀನು ಏನನ್ನು ಭುಂಜಿಸುವಿಯೋ, ಹೋಮಿಸುವಿಯೋ, ಕೊಡುವಿಯೋ, ತಪಸ್ಸನ್ನು ಮಾಡುವಿಯೋ ಅದನ್ನೆಲ್ಲಾ ನನಗರ್ಪಿಸು. ॥ ೨೭ ॥

ತನಗೆ ಅರ್ಪಣ ಮಾಡುವುದಕ್ಕೆಫಲವನ್ನು ನಿರೂಪಿಸುವನು. ಹೀಗೆ ಅರ್ಪಣೆ ಮಾಡುವ ನೀನು ಶುಭಾಶುಭ ಫಲವುಳ್ಳ ಕರ್ಮಬಂಧಗಳಿಂದ ಬಿಡಿಸಿಕೊಳ್ಳುವಿ. ಅದನ್ನೇ ಹೇಳುವನು. ಹೀಗೆ ಫಲತ್ಯಾಗ ಕರ್ಮ ಇವುಗಳಿಂದ ಕೂಡಿದ ನೀನು ಸಂಸಾರದಿಂದ ಮುಕ್ತನಾಗಿ ನನ್ನನ್ನು ಹೊಂದುತ್ತಿ. ॥ ೨೮ ॥

ನಾನು ಭಕ್ತಪ್ರಿಯನಾದರೂ ಪ್ರಾಣಿಗಳಲ್ಲಿ ನನಗೆ ವೈಷಮ್ಯವಿಲ್ಲ. ನಾನು ಎಲ್ಲಾ ಭೂತಗಳಲ್ಲಿಯೂ ಸಮನು. ನನಗೆ ದ್ವೇಷಿಯೆಂತಾಗಲೀ ಪ್ರಿಯನೆಂತಾಗಲೀ, ಇಲ್ಲ ಯಾರು ಭಕ್ತಿಯಿಂದ ನನ್ನನ್ನು ಪೂಜಿಸುತ್ತಾರೋ, ಅವರು ಮದಧೀನರು ಎಂತ ತಿಳಿದುಕೊಂಡಿದ್ದಾರೆ. ನಾನು ಅವರ ಅಧೀನ. ಹೇಗೆ ಅವರವರ ಕರ್ಮಾನುಸಾರೇಣ ಫಲವನ್ನು ಕೊಡುವ ಯಮನು ಸಮವರ್ತಿಯೆಂದು ಅನ್ನಿಸಿಕೊಂಡಿದ್ದಾನೆಯೇ ಹೊರತು ವಿಷಮನಲ್ಲ. ಹಾಗೆ ಅವರವರ ಭಕ್ತಿಗನುಸರಿಸಿ ಫಲ ಕೊಟ್ಟರೂ ವಿಷಮನಲ್ಲ. ॥ ೨೯ ॥

ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।
ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಹಿತೋ ಹಿ ಸಃ ॥ ೩೦ ॥
ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।
ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥
ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ॥
ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।
ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ॥ ೩೩ ॥

---

ಭಕ್ತಿಯನ್ನು ಸ್ತುತಿಸುವನು. ಕದಾಚಿತ್ ಒಬ್ಬನು ಚೆನ್ನಾಗಿ ದುರಾಚಾರಿಯಾಗಿದ್ದರೂ ಇತರರನ್ನು ಭಜಿಸದೆ ನನ್ನನ್ನೇ ಭಜಿಸುವನೋ, ಅವನನ್ನೂ ಕೂಡಾ ಸಾಧುವೇ ಎಂದು ತಿಳಿಯಬೇಕು. ಯಾಕೆಂದರೆ ಆತನು ನನ್ನ ವಿಷಯದಲ್ಲಿ ಸರಿಯಾಗಿ ವ್ಯವಸಾಯ ಉಳ್ಳವನು. ಅಂದರೆ ತತ್ವನಿಶ್ಚಯವುಳ್ಳವನು. ॥ ೩೦ ॥

ತತ್ವನಿಶ್ಚಯವಿದ್ದರೂ ದುರಾಚಾರಿಯು ಸಾಧು ಹ್ಯಾಗೆಂದರೆ ಹೇಳುತ್ತಾನೆ. ಹಾಗೆ ತತ್ವನಿಶ್ಚಯವುಳ್ಳವನು ಹಾಗೆಯೇ ಜ್ಞಾನವನ್ನು ಸಂಪಾದಿಸಿಕೊಂಡು ಸ್ಥಿರವಾದ ಶಾಂತಿಯನ್ನು ಅಂದರೆ ಮೋಕ್ಷವನ್ನು ಹೊಂದುತ್ತಾನೆ. ಎಲೋ ಅರ್ಜುನನೇ ನೀನು ಪ್ರತಿಜ್ಞಾ ಮಾಡು. ನನ್ನ ಭಕ್ತನು ಯಾವಾಗಲೂ ನರಕಾದ್ಯನರ್ಥ ಹೊಂದಿ ನಾಶಹೊಂದುವುದಿಲ್ಲವೆಂದು. ನೀನು ನನಗತಿಪ್ರಿಯನು ನಿನಗೆ ನಾನು ಹೇಳುವ ವಿಷಯದಲ್ಲಿ ಅಲ್ಪವೂ ವ್ಯತ್ಯಾಸವಿಲ್ಲವೆಂತ ತೋರಿಸುವ ಉದ್ದಿಶ್ಯ. ಅತ್ಯಾದರ ಪ್ರಕಟನಾರ್ಥವಾಗಿ ನೀನೇ ಪ್ರತಿಜ್ಞೆ ಮಾಡೆಂದು ಹೇಳಿದ್ದು. ॥ ೩೧ ॥

ಎಲೋ ಪಾರ್ಥನೇ, ಸ್ತ್ರೀಯರಾಗಲೀ, ವೈಶ್ಯರಾಗಲೀ. ಶೂದ್ರರಾಗಲೀ ಆದ್ದರಿಂದಲೇ ಪಾಪದಿಂದ ಜನಿಸಿದವರು (ಸ್ವಯಂಯೋಗ್ಯರಾದರೂ ಹೀನ ಯೋನಿ ಹೊಂದುವುದು ಪಾಪದಿಂದ) ನನ್ನನ್ನೇ ಆಶ್ರಯಿಸಿಕೊಂಡು ಇರುವರೋ ಅಂತವರೂ ಕೂಡ ಯೋಗ್ಯ ಗತಿಯನ್ನು ಹೊಂದುತ್ತಾರೆ. ॥ ೩೨ ॥

ಹೀಗಿರುವಾಗ ಪುಣ್ಯಹೇತುಕರಾದ ಬ್ರಾಹ್ಮಣರಾಗಲೀ ರಾಜರ್ಷಿ

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ॥ ೩೪॥

॥ ಇತಿ ನವಮೋऽಧ್ಯಾಯಃ ॥

---

ಗಳಾಗಲೀ ನನ್ನ ಭಕ್ತರು ಉತ್ತಮ ಗತಿ ಹೊಂದುವರೆಂದು ಏನು ಹೇಳ ತಕ್ಕದ್ದು. ಆದಕಾರಣ ಅನಿತ್ಯವಾದ ಸುಖರಹಿತವಾದ ಈ ಭೂಲೋಕ ವನ್ನಾಗಲೀ ಈ ಶರೀರವನ್ನಾಗಲೀ ಹೊಂದಿ ನನ್ನನ್ನೇ ಭಜಿಸು. ॥ ೩೩ ॥

ಭಜನೆ ಪ್ರಕಾರವನ್ನು ಹೇಳುವನು. ನನ್ನಲ್ಲಿ ಮನಸ್ಸುಳ್ಳವನಾಗು. ಅಂದರೆ ಸರ್ವದಾ ನನ್ನನ್ನು ಸ್ಮರಿಸು. ನನ್ನ ವಿಷಯಕ ಭಕ್ತಿಯುಳ್ಳವ ನಾಗು. ನನ್ನ ಉದ್ದೇಶದಿಂದ ಯಾಗ ಮಾಡು. ನನ್ನನ್ನು ನಮಸ್ಕರಿಸು. ಹೀಗೆ ನನ್ನಲ್ಲಿ ಆಸಕ್ತನಾದ ನೀನು ಮನಸ್ಸನ್ನು ನನ್ನಲ್ಲೇ ಕೂಡಿಸಿ ನನ್ನನ್ನೇ ಹೊಂದುವಿ. ॥ ೩೪ ॥

# ದಶಮೋಽಧ್ಯಾಯಃ

॥ ಶ್ರೀಭಗವಾನುವಾಚ ॥

ಓಂ॥ ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ।
ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ॥
ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ।
ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ॥ ೨॥
ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ।
ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ॥ ೩॥

---

ಮನ್ಮನಾ ಭವ ಇತ್ಯಾದಿಯಿಂದ ಸೂಚಿಸಿದ ಭಗವಧ್ಯಾನಕ್ಕೆ ವಿಷಯ ಭೂತವಾದ ಧ್ಯೇಯವನ್ನು ಹಿಂದೆ ಸಂಕ್ಷೇಪತಃ ಹೇಳಿದ್ದರೂ ಉತ್ತಮಾಧಿಕಾರಿಗಳಿಗೆ ಉಪಾಸನಾ ಮಾಡಲು ಯೋಗ್ಯವಾದ ವಿಭೂತಿಗಳನ್ನು (ಮಹಿಮೆ) ಹೇಳುತ್ತಾನೆ. ಎಲೋ ಅರ್ಜುನನೇ ಇನ್ನು ನಾನು ಹೇಳುವ ಮಾತನ್ನು ಕೇಳು. ನನ್ನ ಮಾತನ್ನು ಕೇಳಿ ಸಂತೋಷಪಡುವ ನಿನಗೋಸ್ಕರ ನಿನ್ನ ಹಿತೇಚ್ಛೆಯಿಂದ ನಾನು ಹೇಳುತ್ತೇನೆ. ॥ ೧ ॥

ಪ್ರತಿಜ್ಞಾ ಮಾಡಿದ ಮಹಿಮೆಯನ್ನು ಶ್ರೀಕೃಷ್ಣನು ನಿರೂಪಿಸುವನು. ಸಕಲ ದೇವತೆಗಳೂ ಮಹಾಋಷಿಗಳೂ ನನಗೆ ಉತ್ಪತ್ತಿಯುಂಟೆಂದು ತಿಳಿಯಲಿಲ್ಲ. ಇತರರಿಗೆಲ್ಲಾ ಉತ್ಪತ್ತಿ ಇದ್ದಂತೆ ಪರಮಾತ್ಮನಿಗೂ ಯಾವಾತನೊಬ್ಬನಿಂದ ಉತ್ಪತ್ತಿಯಿದ್ದು ಅದನ್ನು ದೇವಾದಿಗಳು ಅಜ್ಞಾನದಿಂದ ತಿಳಿಯಲಿಲ್ಲವೆಂತಲ್ಲ. ಮತ್ತೆ ನನಗುತ್ಪತ್ತಿ ಇಲ್ಲದ ಪ್ರಯುಕ್ತವೇ ಇಲ್ಲದ್ದನ್ನು ಅವರು ತಿಳಿದುಕೊಂಡಿಲ್ಲ. ಹಾಗೆ ತಿಳಿಯಲು ಅವರು ಭ್ರಾಂತರಲ್ಲ ನಿನಗುತ್ಪತ್ತಿ ಯಾಕೆ ಇಲ್ಲವೆಂದರೆ ಹೇಳುತ್ತಾನೆ. ಮನುಷ್ಯಾದಿ ಸಕಲ ಜಗತ್ತಿಗೆ ನಾನೇ ಕಾರಣನಾದ ಪ್ರಯುಕ್ತ ಎಲ್ಲವೂ ನನ್ನಿಂದಲೇ ಜನಿಸಿದ್ದು. ನನಗೆ ಜನಕನೂ ಇಲ್ಲ. ॥ ೨ ॥

ತನ್ನನ್ನು ತಿಳಿದುಕೊಂಡವರಿಗೆ ಮೋಕ್ಷವಾಗುತ್ತದೆ ಎಂದು ತನ್ನ ಮಹಿಮೆಯನ್ನು ಹೇಳುವನು. ಯಾವ ಅಧಿಕಾರಿಯು ನನ್ನನ್ನು ಉತ್ಪತ್ತಿಯಿಲ್ಲ

ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।
ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ ॥
ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥
ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥

---

ದವ, ಸರ್ವಚೇಷ್ಟಕ, ಉತ್ಪತ್ತಿ, ಕಾರಣ, ಸಕಲ ಲೋಕಗಳಿಗೂ ಪ್ರಧಾನ ಸ್ವಾಮಿಯೆಂದು ತಿಳಿಯುವವನೋ ಅಂಥಾ ಅಧಿಕಾರಿಯು ಸರ್ವ ಮನುಷ್ಯರ ಮಧ್ಯದಲ್ಲಿ ಮೋಹ ಇಲ್ಲದೆ ಪಾಪಗಳಿಂದ ಮುಕ್ತನಾಗುವನು. ಅಂದರೆ ಮೋಕ್ಷವನ್ನು ಹೊಂದುತ್ತಾನೆ. ॥ ೩ ॥

ಹಿಂದೆ ಹೇಳಿದ ಸಕಲ ಕಾರಣತ್ವವನ್ನು ವಿಶೇಷರೂಪೇಣ ಸ್ವಲ್ಪ ಇಲ್ಲಿ ವಿಸ್ತಾರ ಮಾಡುತ್ತಾನೆ. ಇದು ಮಾಡತಕ್ಕದ್ದು ಇದು ಮಾಡುವುದಲ್ಲ ಎಂಬ ನಿಶ್ಚಯಾತ್ಮಕ ಬುದ್ಧಿಯು ಸಾಮಾನ್ಯತಃ ತಿಳುವಳಿಕೆಯೂ, ಆ ಕಾರ್ಯದಲ್ಲಿ ಇಚ್ಛಾ ಇಲ್ಲದಿರುವ ರೂಪವಾದ ಅಸಮ್ಮೋಹವೂ, ಅಪಕಾರಿಗೂ ಕೂಡಾ ಅಪಕಾರ ಮಾಡದಿರೋಣವೆಂಬ ಕ್ಷಮೆಯೂ ಯಥಾರ್ಥ ಅನುಷ್ಠಾನ ಮತ್ತು ವಾಚನರೂಪ ಸತ್ಯವೂ, ಇಂದ್ರಿಯ ನಿಗ್ರಹವೂ, ಬುದ್ಧಿಯನ್ನು ಪರಮಾತ್ಮನಲ್ಲಿಡೋಣವೂ, ಸುಖದುಃಖತ್ರಾಸಮನಸ್ಥೈರ್ಯ ಪರಪೀಡಾಭಾವ ಸುಖದುಃಖಾದಿಗಳಲ್ಲಿ ನಿರ್ವಿಕಾರತನ ವಿಷಯಾಲಂಬುದ್ಧಿರೂಪ ತುಷ್ಟಿಯೂ, ಬ್ರಹ್ಮಚರ್ಯಾದಿ ತಪಸ್ಸೂ, ಧರ್ಮಾರ್ಜಿತವಾದ ಹಣವನ್ನು ವಿಧಿವಿರೋಧವಿಲ್ಲದಂತೆ ವಿನಿಯೋಗಿಸುವುದೂ, ಕೀರ್ತಿ ಮತ್ತು ಅಪಕೀರ್ತಿಯು. ಹೀಗೆ ನಾನಾ ವಿಧಗಳಾದ ಧರ್ಮಗಳು ಪ್ರಾಣಿಗಳಿಗೆ ನನ್ನಿಂದಲೇ ಆಗುತ್ತವೆ. ಧರ್ಮಗಳು ಪ್ರಾಣಿಗಳಲ್ಲಿ ಬರಲು ನಾನೇ ಕಾರಣನೆಂದು ತಾತ್ಪರ್ಯವು. ॥ ೪, ೫ ॥

ಪ್ರಾಣಿಗಳಲ್ಲಿ ಧರ್ಮಗಳನ್ನು ಮಾತ್ರ ನಾನು ಸೃಷ್ಟಿ ಮಾಡುವುದಲ್ಲ ಕಿಂತು ಪ್ರಾಣಿಗಳೂ ನನ್ನಿಂದಲೇ ಸೃಷ್ಟ ಎಂದು ಹೇಳುತ್ತಾನೆ. ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹಕ್ರತು, ವಸಿಷ್ಠ ಹೀಗೆ ನಾಮಧೇಯವುಳ್ಳ

ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥
ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥
ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯ ॥

---

ಪೂರ್ವ ಮನ್ವಂತರದ ಸಪ್ತಮಹರ್ಷಿಗಳೂ, ಬ್ರಹ್ಮನ ಮನಸ್ಸಿನಿಂದ ಉತ್ಪನ್ನರಾದ ಸ್ವಾಯಂಭುವ ಸ್ವಾರೋಚಿಷ ರೈವತ ಈ ಉತ್ತಮ ಮನುಗಳೂ, ನನ್ನಿಂದಲೇ ಉತ್ಪನ್ನರಾಗಿದ್ದಾರೆ. ಯಾವ ಪೂರ್ವ ಹೇಳಿದ ಮನ್ವಾದಿಗಳ ಪುತ್ರ ಪೌತ್ರರೂಪದಿಂದ ಲೋಕದಲ್ಲಿ ಈ ಸಕಲ ಪ್ರಜೆಗಳಿರುವರೋ. ॥ ೬ ॥

ಹೇಳಿದ ಮಾಹಾತ್ಮ್ಯಜ್ಞಾನದ ಫಲವನ್ನು ಹೇಳುವನು. ನಾನು ಹಿಂದೆ ಹೇಳಿದ ವಿಶಿಷ್ಟಭವನರೂಪವಾದ ಅಂದರೆ ಸುರರಿಂದ ತಿಳಿಯದಿರೋಣ ರೂಪವಾದ ಮಹತ್ವವನ್ನೂ, ಬುಧ್ಯಾದಿ ಸೃಷ್ಟೃತ್ವರೂಪ ಸಾಮರ್ಥ್ಯವನ್ನೂ ಯಾರು ತತ್ವತಃ ತಿಳಿಯುವನೋ ಆ ಅಧಿಕಾರಿಯು ನಿಶ್ಚಲ ಧ್ಯಾನರೂಪ ಉಪಾಯದಿಂದ ಕೂಡುವನು. ಈ ಅರ್ಥದಲ್ಲಿ ಸಂಶಯವಿಲ್ಲ. ॥ ೭ ॥

ಹಿಂದೆ ಹೇಳಿದ್ದಲ್ಲಿ ವಿಶ್ವಾಸ ಹುಟ್ಟುವುದಕ್ಕೋಸ್ಕರ ಹೀಗೆ ನನ್ನನ್ನು ತಿಳಿದುಕೊಂಡು ಸೇವಿಸಿಕೊಂಡಿರುವವರು ಇದ್ದಾರೆಂತಲೂ ಅವರಿಗಾಗುವ ಫಲವನ್ನೂ ಹೇಳುತ್ತಾನೆ. ನಾನು ಸಮಸ್ತ ಜಗತ್ತಿಗೆ ಪ್ರವರ್ತಕ ಉತ್ಪತ್ತಿ ಕಾರಣ. ನನ್ನಿಂದಲೇ ಸರ್ವಜಗತ್ತು ಹಿತಾಹಿತಪ್ರಾಪ್ತಿ–ಪರಿಹಾರಾನುಕೂಲ ವ್ಯಾಪಾರ ಹೊಂದುತ್ತದೆ. ಭಕ್ತಿಯಿಂದ ಕೂಡಿದ ಜ್ಞಾನಿಗಳು ಹೀಗೆ ತಿಳಿದುಕೊಂಡು ಅರ್ಚಿಸುವರು, ಧ್ಯಾನಿಸುವರು. ॥ ೮ ॥

ಸೇವಿಸುವ ಕ್ರಮ ಹೇಳುತ್ತಾನೆ. ನನ್ನಲ್ಲೇ ಮನಸ್ಸುಳ್ಳವನಾಗಿದ್ದು ಕೊಂಡು ಸಕಲ ವ್ಯಾಪಾರಗಳನ್ನು ನನ್ನ ಉದ್ದಿಶ್ಯವೇ ನಡಿಸಿಕೊಂಡು ನಿತ್ಯ ದಲ್ಲೂ ಶಿಷ್ಯಾದಿಗಳಿಗೆ ಉಪದೇಶಮಾಡಿಕೊಂಡು ಪರಸ್ಪರ ಕೀರ್ತ

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ೧೦**
**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

॥ ಅರ್ಜುನ ಉವಾಚ ॥

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥ ೧೨ ॥**
**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ॥೧೩॥**

---

ನಾದಿಗಳನ್ನು ಮಾಡಿಕೊಂಡು ಇರುವವರು ವಿಷಯಾಲಂಬುದ್ಧಿ ಉಳ್ಳವರಾಗಿಯೂ ಸುಖಿಗಳಾಗಿಯೂ ಇರುವರು. ॥ ೯ ॥

ಹೀಗೆ ನನ್ನಲ್ಲೇ ಆಸಕ್ತ ಮನಸ್ಸುಳ್ಳವರಾಗಿ ವಿಶ್ವಾಸದಿಂದ ಸೇವಿಸುವವರಿಗೆ ಮುಕ್ತ್ಯುಪಾಯವಾದ ಜ್ಞಾನರೂಪ ಯೋಗವನ್ನು ಕೊಡುವೆನು. ಯಾವ ಉಪಾಯದಿಂದ ಅದನ್ನು ಹೊಂದುವರೋ. ॥ ೧೦ ॥

ಅವರಿಗೆ ಅನುಗ್ರಹ ಮಾಡುವುದಕ್ಕೋಸ್ಕರ ನಾನು ಅವರ ಮನಸ್ಸಿನಲ್ಲಿದ್ದವನಾಗಿ ದೀಪದಂತಿರುವ (ಪ್ರಕಾಶಮಾನವಾದ) ಜ್ಞಾನದಿಂದ ಅಜ್ಞಾನದಿಂದ ಹುಟ್ಟಿದ ಮೋಹವನ್ನು ನಾಶಿಸುವೆನು. ಇದರಿಂದ ನಮ್ಮಂತೆ ಅನಾದಿ ಕಾಲವನ್ನಾರಂಭಿಸಿಕೊಂಡು ಅಜ್ಞಾನಾಖ್ಯ ಬಂಧವಿರುವಾಗ ಜ್ಞಾನೋತ್ಪತ್ತಿ ಹೇಗೆ ಎಂಬ ಶಂಕೆ ನಿರಸ್ತವಾಯಿತು. ಕರ್ತುರ್ಮಕರ್ತುಂ ಅನ್ಯಥಾಕರ್ತುಂ ಶಕ್ತನಾದ ಪರಮಾತ್ಮನೇ ಅನುಗ್ರಹಿಸಿ ಮೋಹಪರಿಹರಿಸುವನೆಂದರೆ ಯಾತರಶಂಕಾ ॥ ೧೧ ॥

ಹೀಗೆ ಕೃಷ್ಣನಿಂದ ಹೇಳಲ್ಪಟ್ಟ ವಿಭೂತಿಯನ್ನೂ (ಮಾಹಾತ್ಮ್ಯೆಯನ್ನು) ಯೋಗವನ್ನೂ (ಉಪಾಯವನ್ನೂ) ಕೇಳಿ ವಿಶದವಾಗಿ ಕೇಳುವ ಅಭಿಪ್ರಾಯ ಉಳ್ಳವನಾಗಿ ಕೃಷ್ಣನ ವಿಭೂತಿಯ ಸ್ತುತಿಪೂರ್ವಕವಾಗಿ ಆ ವಿಭೂತ್ಯಾದಿಗಳನ್ನು ಹೇಳಬೇಕಾಗಿ ಪ್ರಾರ್ಥಿಸುತ್ತಾನೆ. ಎಲೋ ಕೇಶವನೇ ನೀನು ಪರಿಪೂರ್ಣವಾದ ಬ್ರಹ್ಮಸ್ವರೂಪನು. ಉತ್ತಮಾಶ್ರಯನು, ಪರಮಪವಿತ್ರನು. ವಸಿಷ್ಠಾದಿಗಳೂ ನಾರದಾದಿಗಳೂ ನಿನ್ನನ್ನು ಪೂರ್ಣ ಷಡ್ಗುಣನು, ನಿರ್ವಿ

ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।
ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪ ॥
ಸ್ವಯಮೇವಾತ್ಮನಾಽಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।
ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥
ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।
ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬ ॥
ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।
ಕೇಷುಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥ ೧೭ ॥

---

ಕಾರನು, ಲೋಕವಿಲಕ್ಷಣನು, ಸಕಲಕಾರಣನು. ಕ್ರೀಡಾದಿಗುಣವಿಶಿಷ್ಟನು ಸ್ವಯಂ ಉತ್ಪತ್ತಿರಹಿತನು, ಖಿಶಿಷ್ಟೋತ್ಪತ್ತಿಕಾರಣನೆಂತಲೂ ಹೇಳುವರು. ನೀನು ಸಹಾ ಅಹಂ ಸರ್ವಸ್ಯೇತ್ಯಾದಿಯಿಂದ ಹಾಗೆ ಹೇಳುವಿ. ನೀನು ಯಾವುದನ್ನು ಹೇಳುವಿಯೋ ಆ ಸಮಸ್ತವನ್ನು ಸತ್ಯವೆಂದು ತಿಳಿಯುತ್ತೇನೆ. ಎಲೋ ಷಡ್ಗುಣಪೂರ್ಣನಾದ ಶ್ರೀಕೃಷ್ಣನೇ ದೇವತೆಗಳಾಗಲೀ ದೈತ್ಯರಾಗಲಿ ನಿನ್ನ ಸಾಮರ್ಥ್ಯಾತಿಶಯವನ್ನು ತಿಳಿಯುವುದಿಲ್ಲ. ॥ ೧೪ ॥

ಎಲೋ ಭೂತೋತ್ಪತ್ತಿಕಾರಣನೂ, ಭೂತನಿಯಾಮಕನೂ ಜಗತ್ಸ್ವಾಮಿಯೂ ಆದ ದೇವಶ್ರೇಷ್ಠನೇ ನಿನ್ನ ಶಕ್ತಿಯಿಂದ ನಿನ್ನನ್ನು ನೀನೇ ತಿಳಿದುಕೊಂಡಿದ್ದಿ. ಹೀಗೆ ಸ್ತುತಿಮಾಡಿ ನಿನ್ನ ಲೋಕೋತ್ತರಗಳಾದ ಯಾವ ವಿಭೂತಿಗಳಿದ್ದಾವೋ ಯಾವ ವಿಭೂತಿಗಳಿಂದ (ರಾಮ ಕೃಷ್ಣಾದಿರೂಪಗಳಿಂದ) ಈ ಜಗತ್ತನ್ನು ವ್ಯಾಪಿಸಿರುವಿಯೋ ಅಂಥಾ ಸಕಲ ವಿಭೂತಿಗಳನ್ನು ನನಗೆ ತಿಳಿಸಲು ಅರ್ಹನಾಗಿರುತ್ತಿ. ॥ ೧೬ ॥

ಎಲೋ ಅನಂತಶಕ್ತಿವುಳ್ಳವನೆ, ನಾನು ಎಷ್ಟು ಚಿಂತಿಸಿಕೊಂಡಿದ್ದರೂ ನೀನು ಹೇಳದೆ ನಾನು ಹೇಗೆ ತಿಳಿಯಬೇಕು. ಆದಕಾರಣ ಎಲೋ ಗುಣಪೂರ್ಣನೆ, ಯಾವಯಾವ ಪದಾರ್ಥಗಳಲ್ಲಿ ಆತಿಶಯ ಸಂಪಾದಕನಾಗಿ ಇರುತ್ತಿ ಎಂತ ಚಿಂತಿಸಬೇಕೋ, ಅಂತಹ ಆಧಿಕ್ಯ ಸಂಪಾದಕವಾದ ನಿನ್ನ ವಿವಿಧರೂಪಗಳನ್ನು ಬಿಡಿಸಿ ಹೇಳು. ಅಮೃತತುಲ್ಯವಾದ ನಿನ್ನ ಮಾತನ್ನು ಮತ್ತೂ ಮತ್ತೂ ಕೇಳುವ ನನಗೆ ಅಲಂಬುದ್ಧಿಯಿಲ್ಲ. ॥ ೧೮ ॥

ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ ೧೮

॥ ಶ್ರೀಭಗವಾನುವಾಚ ॥

ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।
ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯ ॥
ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥ ೨೦ ॥
ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥

---

ಹೀಗೆ ಅರ್ಜುನನ ಪ್ರಶ್ನೆಗೆ ಉತ್ತರಕೊಡುವ ಶ್ರೀಕೃಷ್ಣನು ಪ್ರಥಮದಲ್ಲಿ ಪ್ರತಿಜ್ಞಾ ಮಾಡುತ್ತಾನೆ. ಎಲೋ ಕುರುಶ್ರೇಷ್ಠನಾದ ಅರ್ಜುನನೇ ಲೋಕೋತ್ತರವಾದ ಯಾವ ಇತರರಿಗೆ ಆಧಿಕ್ಯಸಂಪಾದಕವಾದ ಯಾವ ವಿವಿಧ ನನ್ನ ರೂಪಗಳಿರುವವೋ, ಅವುಗಳಲ್ಲಿ ಮುಖ್ಯಗಳಾದ ಕೆಲವನ್ನು ನಿನಗೆ ಹೇಳುತ್ತೇನೆ. ನನ್ನ ವಿಭೂತಿಗಳಿಗೆ ವಿಸ್ತರಶಃ ಹೇಳುವುದಾದರೆ ಕೊನೆ ಇಲ್ಲ. ಆದುದರಿಂದ ಕೆಲವನ್ನು ಹೇಳುತ್ತೇನೆ ಎಂದರ್ಥ. ॥ ೧೯ ॥

ಎಲೋ ಜಿತನಿದ್ರನಾದ ಪಾರ್ಥನೇ ನಾನು ವ್ಯಾಪ್ತನಾಗಿದ್ದರೂ ಸರ್ವಭೂತಗಳ ಹೃದಯಗುಹಾದಲ್ಲಿದ್ದೇನೆ. ಸಕಲ ಭೂತಗಳಿಗೂ ನಾನೇ ಆದಿ ಮಧ್ಯಾಂತನು, ಅಂದರೆ ಉತ್ಪತ್ತಿ ಪಾಲನೆ ನಾಶಕರ್ತನು. ॥ ೨೦ ॥

ಪರಮಾತ್ಮನ ವಿಭೂತಿರೂಪಗಳು ಎರಡು ವಿಧವಾದವುಗಳು. ಕೆಲವು ಪ್ರತ್ಯಕ್ಷಗಳು ಕೆಲವು ಅಪ್ರತ್ಯಕ್ಷಗಳು. ಆದರಲ್ಲಿ ಪ್ರತ್ಯಕ್ಷಗಳು ಕಪಿಲ ವ್ಯಾಸ ರಾಮ ಕೃಷ್ಣಾದಿಗಳು. ಅಪ್ರತ್ಯಕ್ಷರೂಪಗಳು ಇತರರಲ್ಲಿ ಸನ್ನಿಹಿತಗಳಾಗಿದ್ದು ಅವರಿಗೆ ಆಧಿಕ್ಯ ಕೊಡುವವುಗಳು. ಎರಡು ರೂಪಗಳನ್ನು ಕೂಡಿಸಿ ಉತ್ತರತ್ರ ನಿರೂಪಿಸುವನು. ದ್ವಾದಶಾದಿತ್ಯರ ಮಧ್ಯದಲ್ಲಿ ವಿಷ್ಣುನಾಮಕ ಆದಿತ್ಯನು ನಾನಾಗಿದ್ದೇನೆ. ಪ್ರಕಾಶಕಜ್ಯೋತಿರೂಪಗಳ ಮಧ್ಯದಲ್ಲಿ ರಶ್ಮಿಯುಕ್ತನಾದ ರವಿಯು ನಾನಾಗಿದ್ದೇನೆ. ಅಂದರೆ ಪ್ರಕಾಶಕ ವಸ್ತುಗಳಲ್ಲಿ ಇತರರಿಂದ ರವಿಗೆ ಧಿಕ್ಯವಿದ್ದ ಪ್ರಯುಕ್ತ ಅವನಿಗೆ ಆ ಆಧಿಕ್ಯ ತಂದು

ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।
ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥
ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।
ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥ ೨೩ ॥
ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।
ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ ೨೪ ॥

---

ಕೊಟ್ಟು ಅವನಲ್ಲಿ ನಾನು ಸನ್ನಿಹಿತನಾಗಿದ್ದೇನೆಂದು ತಾತ್ಪರ್ಯ. ಹೀಗೆ ಏಕೋನಪಂಚಾಶತ್ ಮರುತುಗಳಲ್ಲಿ ಅಧಿಕನಾದ ಮರೀಚಿನಾಮಕ ಮರುತು ನಾನು. ಅಂದರೆ ಅವನಿಗೆ ಆಧಿಕ್ಯ ತಂದುಕೊಟ್ಟು ನಾನು ಅವನಲ್ಲಿ ಸನ್ನಿಹಿತನಾಗಿರುವೆನು. ನಕ್ಷತ್ರಗಳಲ್ಲಿ ಅಧಿಕನಾದ ಚಂದ್ರನು ನಾನು. ಇಲ್ಲಿಯೂ ಶಶಿಗೆ ನಕ್ಷತ್ರಗಳಲ್ಲಿ ಆಧಿಕ್ಯ ತಂದುಕೊಟ್ಟು ಅವನಲ್ಲಿ ಸನ್ನಿಹಿತನಾಗಿ ಅದೇ ಹೆಸರಿಂದ ಇದ್ದೇನೆಂದು ತಿಳಿಯಬೇಕು. ಹಾಗೆ ಮುಂದಿನ ಪದಗಳಿಗೂ ಅರ್ಥ ತಿಳಿಯತಕ್ಕದ್ದು. ॥ ೨೧ ॥

ವೇದಗಳಲ್ಲಿ ಸಾಮವೇದ ನಿಯಾಮಕನಾಗಿ ಸಾಮವೇದವೆಂತಲೂ, ದೇವತೆಗಳ ಮಧ್ಯದಲ್ಲಿ ಇಂದ್ರನಲ್ಲಿ ಅವನಿಗೆ ಆಧಿಕ್ಯ ಸಂಪಾದಕನಾಗಿದ್ದುಕೊಂಡು ವಾಸವನೆಂತಲೂ, ಇಂದ್ರಿಯಗಳ ಮಧ್ಯದಲ್ಲಿ ಮನಸ್ಸೆಂತಲೂ, ಪ್ರಾಣಿಗಳಲ್ಲಿ ಬಹುಸ್ಮರಣ ಶಕ್ತಿರೂಪವಾದ ಚೇತನಾ ಎಂತಲೂ, ಅನಿಸಿಕೊಂಡಿದ್ದೇನೆ. ಇಲ್ಲಿಯೂ ಇನ್ನು ಮೇಲೂ ಅರ್ಥ ಹಿಂದಿನಂತೆಯೇ ತಿಳಿಯಬೇಕು. ॥ ೨೨ ॥

ರುದ್ರರಲ್ಲಿ ಸುಖಕರನಾಗಿ ಶಂಕರನೆಂತಲೂ, ಯಕ್ಷರಕ್ಷಸ್ಸುಗಳಲ್ಲಿ ದ್ರವ್ಯನಿಯಾಮಕನಾಗಿ ವಿತ್ತೇಶನೆಂತಲೂ, ಅಷ್ಟ ವಸುಗಳಲ್ಲಿ ಪಾವಕನೆಂತಲೂ, ಪರ್ವತಗಳ ಮಧ್ಯದಲ್ಲಿ ಮೇರು ಎಂತಲೂ, ನಾನು ಹೇಳಿಸಿಕೊಂಡಿದ್ದೇನೆ. ॥ ೨೩ ॥

ಪುರೋಹಿತರುಗಳ ಮಧ್ಯದಲ್ಲಿ ಮುಖ್ಯವಾಗಿ ನನ್ನನ್ನು ಬೃಹಸ್ಪತಿ ಎಂತ ತಿಳಿ. ಸೈನ್ಯನಿಯಾಮಕರಲ್ಲಿ ಸ್ಕಂದ ಎಂತಲೂ ಸರೋವರಗಳಿಗೆ ಸಾಗರನೆಂತಲೂ ಅನಿಸಿಕೊಂಡಿದ್ದೇನೆ. ॥ ೨೪ ॥

ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।
ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥
ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।
ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥
ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।
ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಂ ॥ ೨೭ ॥

---

ಮಹರ್ಷಿಗಳ ಮಧ್ಯದಲ್ಲಿ ಭೃಗುಋಷಿಯೆಂತಲೂ, ಅಕ್ಷರಗಳಲ್ಲಿ ಮುಖ್ಯವಾದ ಪ್ರಣವಸ್ಥನಾಗಿ ಅಕ್ಷರಯೆಂತಲೂ, ಯಜ್ಞಗಳ ಮಧ್ಯದಲ್ಲಿ ಜಪ ಯಜ್ಞಯೆಂತಲೂ, ಗಮನಶೂನ್ಯಗಳಾದವುಗಳ ಮಧ್ಯದಲ್ಲಿ ಹಿಮಾಲಯ ನೆಂತಲೂ ಅನಿಸಿಕೊಂಡಿದ್ದೇನೆ. ॥ ೨೫ ॥

ಸರ್ವ ವೃಕ್ಷಗಳ ಮಧ್ಯದಲ್ಲಿ ಅಶ್ವತ್ಥಯೆಂತಲೂ ದೇವಋಷಿಗಳಲ್ಲಿ ನಾರದನೆಂತಲೂ, ಗಂಧರ್ವರಲ್ಲಿ ಚಿತ್ರರಥನೆಂತಲೂ, ಸಿದ್ಧರಲ್ಲಿ ಕಪಿಲಋಷಿ ಯೆಂತಲೂ ಅನಿಸಿಕೊಂಡಿದ್ದೇನೆ. ॥ ೨೬ ॥

ಅಶ್ವಜಾತಿಗಳಲ್ಲಿ ಅಮೃತಮಥನದಲ್ಲಿ ಕ್ಷೀರಸಮುದ್ರೋತ್ಪನ್ನವಾದ ಉಚ್ಚೈಶ್ರವ ನಾಮಕ ಅಶ್ವವನ್ನು ನನ್ನನ್ನಾಗಿ ತಿಳಿ. ಇಲ್ಲಿ ಉಚ್ಚೈಃ ಶ್ರವಾಃ ಅಂದರೆ ಉಚ್ಚೈಃ ಉತ್ಕೃಷ್ಟವಾದ ಶ್ರವಃ ಅಂದರೆ ಕೀರ್ತಿವುಳ್ಳ ಪ್ರಯುಕ್ತ ನನಗೆ ಉಚ್ಚೈಃಶ್ರವಾ ಎಂತ ಹೆಸರು. ಮಾತ್ರವಲ್ಲ ಇಂದ್ರನ ಈ ಅಶ್ವದಲ್ಲಿ ಇದ್ದುಕೊಂಡು ಅದಕ್ಕೆ ಇತರ ಅಶ್ವಗಳ ಅಪೇಕ್ಷೆಯಿಂದ ಆಧಿಕ್ಯ ತಂದುಕೊಡುವ ಪ್ರಯುಕ್ತವೂ ನನಗೆ ಉಚ್ಚೈಃಶ್ರವಾ ಎಂದು ಹೆಸರು ಬಂದದ್ದು. ಹೀಗೆ ಪ್ರತಿ ಒಂದು ಶಬ್ದಗಳಲ್ಲಿಯೂ ಅವಯವಾರ್ಥ ವನ್ನಿಟ್ಟುಕೊಂಡು ಪರಮಾತ್ಮನು ತತ್ತಚ್ಛಬ್ದವಾಚ್ಯನೆಂತ ತಿಳಿಯತಕ್ಕದು. ಆದರೆ ಹೀಗೆ ಅರ್ಥ ಬಿಡಿಸುತ್ತ ಬರೆದರೆ ನೋಡುವವರಿಗೆ ಆಲಸ್ಯಸಂಪಾದ ಕವೂ ಹೆಚ್ಚಿನ ಜನರಿಗೆ ತಿಳಿಯಲಶಕ್ಯವೂ ಆಗುವ ಪ್ರಯುಕ್ತವಾಗಿ ಪ್ರತಿಶಬ್ದ ಬಿಡಿಸಲು ಹೋಗುವುದಿಲ್ಲ. ಅದುದರಿಂದ ಇದಕ್ಕಿಷ್ಟೇ ಅರ್ಥವೆಂದು ತಿಳಿಯ ಲಾಗದು. ಗಜಶ್ರೇಷ್ಠಗಳ ಮಧ್ಯದಲ್ಲಿ ಐರಾವತನೆಂತಲೂ ಮನುಷ್ಯರ ಮಧ್ಯದಲ್ಲಿ ನರಾಧಿಪನೆಂತಲೂ ನನ್ನನ್ನು ತಿಳಿ. ॥ ೨೭ ॥

ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥
ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।
ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥
ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।
ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಮ್॥
ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।
ಝುಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥ ೩೧ ॥
ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।
ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥ ೩೨ ॥

---

ಆಯುಧಗಳ ಮಧ್ಯದಲ್ಲಿ ವಜ್ರಾಯುಧನೆಂತಲೂ ಗೋವುಗಳ ಮಧ್ಯದಲ್ಲಿ ಕಾಮಧೇನುವೆಂತಲೂ ಪ್ರಕೃಷ್ಟ ಉತ್ಪತ್ತಿಕಾರಣನಾದ ಮನ್ಮಥನಲ್ಲಿದ್ದು ಕೊಂಡು ಕಂದರ್ಪನೆಂತಲೂ ಸರ್ಪಗಳ ಮಧ್ಯದಲ್ಲಿ ವಾಸುಕಿಯೆಂತಲೂ ಅನಿಸಿ ಕೊಂಡಿದ್ದೇನೆ. ॥ ೨೮ ॥

ನಾಗಗಳ ಮಧ್ಯದಲ್ಲಿ ಅನಂತನೆಂತಲೂ ಜಲಚರಗಳಿಗೆ ವರುಣನೆಂತಲೂ ಪಿತೃಗಳಿಗೆ ಅರ್ಯಮನೆಂತಲೂ ಶಿಕ್ಷಿಸುವವರಲ್ಲಿ ಯಮನೆಂತಲೂ ನಾನು ಅನಿಸಿಕೊಂಡಿದ್ದೇನೆ. ಇಲ್ಲಿ ಸರ್ಪ ಎಂದರೆ ಒಂದು ತಲೆಯುಳ್ಳವುಗಳು, ನಾಗ ಎಂದರೆ ಅನೇಕ ತಲೆಯುಳ್ಳವುಗಳೆಂದು ಪ್ರಭೇದ ತಿಳಿಯತಕ್ಕದ್ದು. ॥ ೨೯ ॥

ದೈತ್ಯರ ಮಧ್ಯದಲ್ಲಿ ಪ್ರಹ್ಲಾದ ಎಂತಲೂ, ಬಂಧಾದಿಗಳನ್ನು ಮಾಡು ವವರಲ್ಲಿ ಕಾಲಯೆಂತಲೂ, ಮೃಗಗಳಿಗೆ ಮೃಗೇಂದ್ರ ಎಂತಲೂ, ಪಕ್ಷಿಗಳಿಗೆ ಗರುಡನೆಂತಲೂ ನಾನು ಅನಿಸಿಕೊಂಡಿದ್ದೇನೆ. ॥ ೩೦ ॥

ವೇಗವುಳ್ಳವುಗಳ ಮಧ್ಯದಲ್ಲಿ ಪವನಯೆಂತಲೂ ಶಸ್ತ್ರಧಾರಿಗಳಲ್ಲಿ ದಾಶರಥಿರಾಮನೆಂತಲೂ ಮೀನುಗಳ ಮಧ್ಯದಲ್ಲಿ ಮಕರ ಎಂತಲೂ ನದಿಗಳ ಮಧ್ಯದಲ್ಲಿ ಗಂಗೆಯೆಂತಲೂ ಅನಿಸಿಕೊಂಡಿರುವೆನು. ॥ ೩೧ ॥

ಸೃಷ್ಟವಾದ ಭೂತಗಳಿಗೆ ಸೃಷ್ಟಿ, ಸ್ಥಿತಿ, ಲಯಕಾರಣನು ನಾನೇ. ಬ್ರಹ್ಮವಿದ್ಯೆಗಳಲ್ಲಿ ಜೀವಸ್ವಾಮಿಯಾಗಿಯೂ, ಜ್ಞಾನರೂಪನಾಗಿಯೂ ಇರುವ

ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।
ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥೩೩
ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ॥
ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।
ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ॥
ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।
ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ೩೬

---

ಕಾರಣ ಅಧ್ಯಾತ್ಮವಿದ್ಯ ಎಂತಲೂ ವಾದಜಲ್ಪವಿತಂಡಾದಿಕಥೆಗಳಲ್ಲಿ ವಾಚ್ಯ ನಾಗಿರುವ ಕಾರಣವಾದ ಎಂತ ಅನಿಸಿಕೊಂಡಿದ್ದೇನೆ. ॥ ೩೨ ॥

ಅಕ್ಷರಗಳಲ್ಲಿ ಅಕಾರನಾಮಕನಾಗಿಯೂ ಸಮಾಸಗಳಲ್ಲಿ ದ್ವಂದ್ವನಾಮಕನಾಗಿಯೂ ನಾಶಶೂನ್ಯಕಾಲನಿಯಾಮಕನಾದ್ದರಿಂದ ಕಾಲನಾಮಕನಾಗಿಯೂ ನಾಲ್ಕು ದಿಕ್ಕುಗಳಲ್ಲೂ ಇರುವ ಚತುರ್ಮುಖನ ಮುಖನಿಯಾಮಕನಾಗಿದ್ದ ಪ್ರಯುಕ್ತ ವಿಶ್ವತೋಮುಖನಾಮಕನಾಗಿಯೂ ಧಾರಣ ಪೋಷಣ ಕರ್ತನಾಗಿಯೂ ಇದ್ದೇನೆ. ಸರ್ವಮಾರಕನಾಗಿ ಮೃತ್ಯುಯೆಂತಲೂ ಮುಂದೆ ಹುಟ್ಟುವವುಗಳ ಉತ್ಪತ್ತಿಕಾರಣನಾದ್ದರಿಂದ ಉದ್ಭವಯೆಂತಲೂ ಕೀರ್ತಿ ಶ್ರೀ ವಾಕ್ ಇಷ್ಟನ್ನು ಸ್ತ್ರೀಯರಿಗೆ ತಂದುಕೊಡುವ ಪ್ರಯುಕ್ತ ಕೀರ್ತ್ಯಾದಿ ಹೆಸರುಳ್ಳವನಾಗಿಯೂ ಹೀಗೆ ಸ್ಮೃತಿ ಮೇಧಾಧೃತಿಕ್ಷಮಗುಣಗಳ ನಿಯಾಮಕನಾಗಿ ಸ್ಮೃತ್ಯಾದಿನಾಮಕನೂ ಆಗಿದ್ದೇನೆ. ಸಾಮವೇದಗಳಲ್ಲಿರುವ ರಥಾಂತರ ವೈರೂಪ ವೈರಾಜ ಶಾಕ್ವರ ಇತ್ಯಾದಿ ಸಾಮಗಳ ಮಧ್ಯದಲ್ಲಿ ಆಧಿಕ್ಯ ಸಂಪಾದಕನಾದದ್ದರಿಂದ ಬೃಹತ್ಸಾಮ ಎಂತಲೂ ಛಂದಸ್ಸುಗಳಲ್ಲಿ ಗಾಯತ್ರಿ ಎಂತಲೂ ಮಾಸಗಳಲ್ಲಿ ಮಾರ್ಗಶೀರ್ಷ ಎಂತಲೂ ಋತುಗಳಲ್ಲಿ ಕುಸುಮಾಕರ ಎಂತಲೂ (ವಸಂತ) ಅನಿಸಿಕೊಂಡಿದ್ದೇನೆ. ॥ ೩೩,೩೪,೩೫ ॥

ಕಪಟಾಚಾರಿಗಳ ಮಧ್ಯದಲ್ಲಿ ದ್ಯೂತನಿಯಾಮಕನಾಗಿಕೊಂಡು ದ್ಯೂತ ಎಂತಲೂ ಪ್ರಕಾಶವುಳ್ಳ ಪದಾರ್ಥಗಳ ಮಧ್ಯದಲ್ಲಿ ಪ್ರಕಾಶನಿಯಾಮಕನಾಗಿ ತೇಜಸ್ಸೆಂತಲೂ ಜಯವುಳ್ಳವರಿಗೆ ಜಯಪ್ರದನಾಗಿ ಜಯ ಎಂತಲೂ

ವೃಷ್ಣೀನಾಂ ವಾಸುದೇವೋऽಸ್ಮಿ ಪಾಂಡವಾನಾಂ ಧನಂಜಯಃ ।
ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾಃ ಕವಿಃ ॥ ೩೭ ॥
ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।
ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಮ್ ॥
ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।
ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್॥ ೩೯ ॥
ನಾಂತೋऽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।
ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ॥ ೪೦॥

---

ನಿಶ್ಚಯಾತ್ಮಜ್ಞಾನವುಳ್ಳವರಿಗೆ ನಿಶ್ಚಯಪ್ರದನಾದದ್ರಿಂದ ವ್ಯವಸಾಯ ಎಂತಲೂ ಸಾರರೂಪ ಧರ್ಮವುಳ್ಳವರಿಗೆ ಸಾರಪ್ರದನಾದ್ರಿಂದ ಸತ್ವ ಎಂತ ಅನಿಸಿಕೊಂಡಿರುವೆನು. ॥ ೩೬ ॥

ವೃಷ್ಣಿಗಳ ಮಧ್ಯದಲ್ಲಿ ವಾಸುದೇವನೆಂತಲೂ ಪಾಂಡವರಲ್ಲಿ ಧನಂಜಯನೆಂತಲೂ ಕವಿಗಳ ಮಧ್ಯದಲ್ಲಿ ಉಶನಾಕವಿ ಶುಕ್ರನೆಂತಲೂ ನಾನೇ ಅನಿಸಿಕೊಂಡಿರುವೆನು. ॥ ೩೭ ॥

ದಂಡನಿಯಾಮಕರಿಗೆ ದಂಡನಿಯಾಮಕತ್ವ ಕೊಟ್ಟಕಾರಣ ದಂಡನೆಂತಲೂ ಜಯೇಚ್ಛುಗಳಿಗೆ ನೀತಿಪ್ರದಾಯಕನಾದ್ರಿಂದ ನೀತಿ ಎಂತಲೂ ಗೋಪನೀಯವಸ್ತುಗಳಲ್ಲಿ ಮುನಿ ಸಂಬಂಧಿಯಾದ ಮೌನ ಎಂತಲೂ ಜ್ಞಾನವುಳ್ಳವರಲ್ಲಿ ಜ್ಞಾನದಾತನಾದ ಪ್ರಯುಕ್ತ ಜ್ಞಾನ ಎಂತಲೂ ಅನಿಸಿಕೊಂಡಿದ್ದೇನೆ. ॥ ೩೮ ॥

ಸರ್ವಭೂತಗಳಿಗೆ ಕಾರಣವಾದ್ದು ಏನಿದೆಯೋ, ಹೇ ಅರ್ಜುನ ಅದು ನಾನು ಎಂತ ತಿಳಿ. ಯಾವ ಚರಾಚರ ವಸ್ತುವಾಗಲಿ ನನ್ನನ್ನು ಬಿಟ್ಟಿರುವುದು ಇಲ್ಲವೆಂದು ತಿಳಿ. ನಾನೇ ಸರ್ವಗತನಾಗಿದ್ದ ಪ್ರಯುಕ್ತ ಕಾರಣ ಎಂತ ತಿಳಿ ಎಂದು ತಾತ್ಪರ್ಯ. ॥ ೩೯ ॥

ಇಷ್ಟರಲ್ಲಿ ತನ್ನ ವಿಭೂತಿಕಥನವನ್ನು ಮುಗಿಸುವವನಾಗಿ ಅದಕ್ಕೆ ಕಾರಣವನ್ನು ಹೇಳುವನು. ಎಲೋ ಶತ್ರುತಾಪಕನಾದ ಅರ್ಜುನನೇ ನನ್ನ ಲೋಕೋತ್ತರವಾದ ಮಹಿಮೆಗಳಿಗೆ ಕೊನೆಯೇ ಇಲ್ಲ. ಆದಕಾರಣ ಕೆಲವು

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ ೪೧ ॥
ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್॥ ೪೨ ॥

॥ ಇತಿ ದಶಮೋಽಧ್ಯಾಯಃ ॥

---

ಗಳನ್ನು ಮಾತ್ರ ಹೆಸರು ತೆಗೆದುಕೊಂಡು ಹೇಳಿದ್ದೇನೆ. ಸಾಮಾನ್ಯತಃ ವಿಸ್ತಾರವಾಗಿಯೂ ಮೇಲೆ ನನ್ನಿಂದ ಹೇಳಲ್ಪಡುತ್ತದೆ. ಅಥವಾ ವಿಸ್ತಾರವಾಗಿ ಹಿಂದೆ ಹೇಳಲ್ಪಟ್ಟದೆ ಎಂತಾಗಲೀ ಇಟ್ಟುಕೊಳ್ಳಬೇಕು. ॥ ೪೦ ॥

ಜಗತ್ತಿನಲ್ಲಿ ಸ್ವಜಾತಿಗಳಲ್ಲಿ ಶ್ರೇಷ್ಠವಾದದ್ದೂ ಸಂಪದ್ಯುಕ್ತವಾದದ್ದೂ ಅಭಿವೃದ್ಧಿಯಿಂದ ಕೂಡಿದ್ದೂ ಏನೇನಿದೆಯೋ ಆ ಎಲ್ಲಾ ವಸ್ತುಗಳೂ ನನ್ನ ಪ್ರಕಾಶರೂಪವಾದ ಅಂಶದಿಂದ ಕೂಡಿರುವದು (ಸನ್ನಿಧಿಯಿಂದ ಕೂಡಿದವುಗಳು) ಆದುದರಿಂದಲೇ ಶ್ರೇಷ್ಠಗಳಾಗಿದ್ದಾವೆ ಎಂತ ತಿಳಿ. ॥ ೪೧ ॥

ನೀನು ಉತ್ತಮಾಧಿಕಾರಿಯಾದ ಪ್ರಯುಕ್ತ ನಿನಗೆ ಅಧಿಕಫಲಪ್ರದವಾಗಿರುವ ಹಿಂದೆ ಹೇಳಿದ್ದಕ್ಕಿಂತಲೂ ಅಧಿಕವಾಗಿ ವಿಭೂತಿವಿಸ್ತರವನ್ನು ಹೇಳುತ್ತೇನೆಂಬ ಅಭಿಪ್ರಾಯದಿಂದ ಕೃಷ್ಣನು ಕಲ್ಪಾಂತರವನ್ನು ಹೇಳುತ್ತಾನೆ. ಅರ್ಜುನನೇ ಹಿಂದೆ ನಾನು ಹೇಳಿದ ಪರಿಚ್ಛಿನ್ನ ಅಂದರೆ ಮಿತವಾದ ವಿಭೂತಿ ತಿಳಿದ್ದರಿಂದ ನಿನಗೇನು ಫಲ ಅಂದರೆ ಹಿಂದೆ ಹೇಳಿದ್ದು ವ್ಯರ್ಥವೆಂದಭಿಪ್ರಾಯವಲ್ಲ. ಕಿಂತು ಇದು ಅಲ್ಪ ಫಲಪ್ರದವಾದದ್ದು. ನೀನು ಉತ್ತಮಾಧಿಕಾರಿಯಾದ ಕಾರಣ ಇದಕ್ಕಿಂತಲೂ ಅಧಿಕ ಫಲಕವಾದ ಮಹಿಮಾ ವಿಸ್ತಾರವನ್ನು ನೀನು ತಿಳಿದುಕೊಳ್ಳಲು ಯೋಗ್ಯನೂ ಶಕ್ತನೂ ಎಂಬ ಅಭಿಪ್ರಾಯದಿಂದ ಕೃಷ್ಣನು ಆಕ್ಷೇಪಿಸಿದ್ದೆಂದು ತಿಳಿಯಬೇಕು. ಈ ಪ್ರಮಾಣಸಿದ್ಧವಾದ ಸಕಲ ಜಗತ್ತನ್ನು ಕೂಡಾ ನನ್ನ ಅನಂತಾನಂತ ಅಂಶಗಳ ಪೈಕಿ ಒಂದು ಅಂಶದಿಂದ ವ್ಯಾಪಿಸಿಕೊಂಡು ನಾನಿದ್ದೇನೆ. ನನ್ನ ಸರ್ವಾಂಶಗಳನ್ನು ವ್ಯಾಪಿಸಲಿಕ್ಕೆ ಸಹಸ್ರಾರು ಜಗತ್ತು ಸಾಲದು. ಅಂತಹ ಕೊನೆಯಿಲ್ಲದ ಮಹಿಮೆಯುಳ್ಳವನು ನಾನೆಂದು ಅಭಿಪ್ರಾಯ. ॥ ೪೨ ॥

# ಏಕಾದಶೋಽಧ್ಯಾಯಃ

॥ ಅರ್ಜುನ ಉವಾಚ ॥

ಓಂ ॥ ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಂ ।
ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ॥
ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।
ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಮ್ ॥ ೨ ॥
ಏವಮೇತದ್ಯಥಾಽಽತ್ಥ ತ್ವಮಾತ್ಮಾನಂ ಪರಮೇಶ್ವರ ।
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩ ॥

---

ಹಿಂದಿನ ಅಧ್ಯಾಯಾಂತ್ಯದಲ್ಲಿ ವಿಷ್ಟಭ್ಯಾಹಮಿದಂ ಕೃತ್ಸ್ನಂ ಎಂಬುವ ಶ್ಲೋಕದಲ್ಲಿ ಸಂಕ್ಷೇಪದಿಂದ ವ್ಯಾಪ್ತಸ್ವರೂಪವು ಯೋಗ್ಯ ಅಧಿಕಾರಿಗಳ ಉಪಾಸನಾರ್ಥವಾಗಿ ಹೇಳಲ್ಪಟ್ಟಿದೆ. ಸಂಕ್ಷಿಪ್ತವಾಗಿ ಹೇಳಿದ್ದು ಮನಸ್ಸಿನಲ್ಲಿ ದೃಢವಾಗದಿರುವ ಕಾರಣ ಬುದ್ಧಿ ಸೌಕರ್ಯಾರ್ಥವಾಗಿ ಉಕ್ತವಾದ ವಿಶ್ವರೂಪವನ್ನೇ ವಿಸ್ತಾರದಿಂದ ಈ ಅಧ್ಯಾಯದಲ್ಲಿ ನಿರೂಪಿಸುತ್ತಾನೆ. ಪ್ರಥಮತಃ ವಿಶ್ವರೂಪವನ್ನು ತಿಳಿಯುವ ಉದ್ದೇಶದಿಂದ ಪ್ರಶ್ನೆ ಮಾಡಲು ಇಚ್ಛಾವುಳ್ಳವನಾಗಿ ಹಿಂದೆ ಹೇಳಿದ ಅರ್ಥವನ್ನು ಎರಡು ಶ್ಲೋಕಗಳಿಂದ ಅರ್ಜುನನು ಅನುವಾದ ಮಾಡುತ್ತಾನೆ. ಕಮಲದಂತೆ ವಿಶಾಲ ನೇತ್ರವುಳ್ಳ ಕೃಷ್ಣನೆ ನನ್ನ ಮೇಲೆ ಅನುಗ್ರಹಕ್ಕೋಸ್ಕರ ಗೋಪ್ಯವಾದ ಪರಮಾತ್ಮನನ್ನು ವಿಷಯೀಕರಿಸಿಕೊಂಡು ಇರುವ ಕಾರಣ ಅಧ್ಯಾತ್ಮ ಎಂತ ಹೆಸರುಳ್ಳ ವಚನವು ನಿನ್ನಿಂದ ಹೇಳಲ್ಪಟ್ಟಿತು. ಆದುದರಿಂದ ನನಗೆ ಬಂಧುಸ್ನೇಹಾದಿ ರೂಪವಾದ ಮೋಹವು ಹೋಯಿತು. ಪ್ರಾಣಿಗಳ ಉತ್ಪತ್ತಿ ಸಂಹಾರಗಳೂ ಅಹಂ ಕೃತ್ಸ್ನಸ್ಯ ಜಗತಃ ಇತ್ಯಾದಿಗಳಿಂದ ವಿಸ್ತರದಿಂದ ತಿಳಿಯಲ್ಪಟ್ಟಿತು. ನಾಶಶೂನ್ಯವಾದ ಮಹಿಮೆಯೂ ತಿಳಿಯಲ್ಪಟ್ಟಿತು. ಎಲೋ ಸರ್ವೋತ್ತಮನೇ ನಿನ್ನ ಸ್ವರೂಪವನ್ನು ನೀನು ಹ್ಯಾಗೆ ಹೇಳುವಿಯೋ ಅದು ಹಾಗೆಯೇ ಸತ್ಯವೆ. ನಿನ್ನ ಅಂತಹ ಈಶ್ವರಸಂಬಂಧಿ ರೂಪವನ್ನು ನೋಡಲಿಚ್ಛಿಸುತ್ತೇನೆ ॥ ೧ ॥ ೨ ॥ ೩ ॥

ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।
ಯೋಗೇಶ್ವರ ತತೋ ಮೇ ತ್ವಂ ದರ್ಶಯಾಽಽತ್ಮಾನಮವ್ಯಯಂ ॥

॥ ಶ್ರೀಭಗವಾನುವಾಚ ॥

ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥
ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌ ಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಽಶ್ಚರ್ಯಾಣಿ ಭಾರತ ॥ ೬ ॥
ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭ ॥

---

ನನ್ನಿಂದ ನೋಡಲಿಕ್ಕೆ ಯೋಗ್ಯವೆಂದು ನೀನು ತಿಳಿಯುವದಾದರೆ ಎಲೋ ಸಕಲ ಶಕ್ತಿಸಂಪನ್ನನಾದ ಪರಮಾತ್ಮನೇ ನೀನು ನನಗೋಸ್ಕರ ನಾಶಶೂನ್ಯವಾದ ರೂಪವನ್ನು ತೋರಿಸು. ॥ ೪ ॥

ಶ್ರೀಪರಮಾತ್ಮನು ಇದಕ್ಕುತ್ತರ ಕೊಡುವನು. ಎಲೋ ಪಾರ್ಥನೇ ನನ್ನ ಬಹುಸಂಖ್ಯಾಕಗಳಾದ ನಾನಾ ವಿಧಗಳಾದ ಅನೇಕ ವರ್ಣ ಅನೇಕಾಕಾರಗಳುಳ್ಳ ರೂಪಗಳನ್ನು ನೋಡು. ॥ ೫ ॥

ಇಷ್ಟು ಅಲ್ಲದೆ ದ್ವಾದಶಾದಿತ್ಯರನ್ನೂ, ಅಷ್ಟ ವಸುಗಳನ್ನೂ, ಏಕಾದಶ ರುದ್ರರನ್ನೂ, ಅಶ್ವಿನೀದೇವತೆಗಳನ್ನೂ, ಪಂಚಾಶತ್ ಪ್ರಧಾನವಾಯುವಿನಿಂದ ಕೂಡಿ(50)ಮರುತುಗಳನ್ನೂ, ಹಾಗೆಯೇ ಈ ವರೆಗೆ ನೀನು ನೋಡದಿರುವ ಅನೇಕ ಅತ್ಯಾಶ್ಚರ್ಯಕರಗಳಾದವುಗಳನ್ನೂ ನೋಡು. ॥ ೬ ॥

ಈ ನನ್ನ ದೇಹದಲ್ಲಿ ಚರಾಚರ ವಸ್ತುಗಳಿಂದ ಕೂಡಿದ ಸಕಲ ಜಗತ್ತನ್ನೂ ಈ ದೇಹದ ಏಕದೇಶದಲ್ಲಿದ್ದದ್ದನ್ನು ಈಗ ನೋಡು. ಇಷ್ಟು ಮಾತ್ರವಲ್ಲ, ಇನ್ನೇನೇನು ನೋಡಲಿಚ್ಛೆ ಉಂಟೋ ಅವುಗಳನ್ನೂ ದೇಹದಲ್ಲಿ ನೋಡು. ಇಲ್ಲಿ ಅರ್ಜುನನಿಗೆ ಗುಡಾಕೇಶ ಎಂತ ಸಂಬೋಧನೆ ಉಂಟು. ಅದಕ್ಕೆ ನಿದ್ರೆಯನ್ನು ಜಯಿಸಿದವನೆಂದರ್ಥ. ಪ್ರಕೃತ ನೋಡದೇ ಕೇಳದೇ ಇರುವ ವಸ್ತುಗಳನ್ನು ಕೃಷ್ಣನ ದೇಹದ ಏಕದೇಶದಲ್ಲಿ ನೋಡುವಾಗ ಎಚ್ಚರ ತಪ್ಪ ಬಾರದು. ಜಾಗರೂಕನಾಗಿರಬೇಕೆಂಬ ಅಭಿಪ್ರಾಯದಿಂದ ಈ ಪದವನ್ನು ಕೊಟ್ಟದ್ದು. ॥ ೭ ॥

ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್॥೮॥

॥ ಸಂಜಯ ಉವಾಚ ॥

ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।
ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್॥ ೯ ॥

ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।
ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥ ೧೦ ॥

---

ನಿನಗೆ ನೋಡಲು ಇಚ್ಛಾ ಉಂಟು. ನೋಡೆಂದು ನಾನೂ ಹೇಳುತ್ತೇನೆ. ಆದರೂ ಇದೇ ನಿನ್ನ ಚರ್ಮಚಕ್ಷುಸ್ಸಿನಿಂದ ನನ್ನನ್ನು ನೋಡಲು ಶಕ್ತನಾಗುವುದಿಲ್ಲ. ಆದಕಾರಣ ನಿನಗೆ ಅಲೌಕಿಕವಾದ ಚಕ್ಷುಸ್ಸನ್ನು (ಅಂದರೆ ನೋಡುವ ಶಕ್ತಿಯನ್ನು) ಕೊಡುತ್ತೇನೆ ನನ್ನ ಈಶ್ವರಸಂಬಂಧಿ ಸಾಮರ್ಥ್ಯವನ್ನು ನೋಡು. ॥ ೮ ॥

ಇನ್ನುಮುಂದಾಗುವದನ್ನು ಧೃತರಾಷ್ಟ್ರನನ್ನು ಕುರಿತು ಸಂಜಯನು ಹೇಳುತ್ತಾನೆ. ಎಲೋ ಧೃತರಾಷ್ಟ್ರನೇ! ಮಹಾಸಾಮರ್ಥ್ಯ ಉಳ್ಳವರಿಗೂ ಸಕಲ ಶಕ್ತಿಗಳಿಗೂ ಸ್ವಾಮಿಯಾದ ಕೃಷ್ಣನು ಅನಂತರದಲ್ಲಿ ಹೀಗೆ ಹೇಳಿ, ತನ್ನ ಉತ್ತಮವಾದ ಈಶ್ವರಸಂಬಂಧಿ ಸ್ವರೂಪವನ್ನು ಅರ್ಜುನನಿಗೋಸ್ಕರ ತೋರಿಸಿದನು. ಇಲ್ಲಿ “ಇತೋಪಹೂತಂ ನೀಹೇಷು ಹತಿಭಾಗಂ ಕ್ರತುಷ್ವಹಂ। ವರ್ಣೋ ಮೇ ಹರಿತಃ ಶ್ರೇಷ್ಠಃ ತಸ್ಮಾತ್ ಹರಿರಿತಿ ಸ್ಮೃತ” ಇತಿ ಮೋಕ್ಷಧರ್ಮ ಪ್ರಮಾಣವಿರುವ ಕಾರಣ ಅನಂತ ಪೂಜಾಸ್ಥಾನಗಳಲ್ಲಿ ಅಪಾ ಕೃತ ವಿಗ್ರಹದಿಂದ ಕೂಡಿ ಸಾಕಾರನಾಗಿ ಏಕದಾ ಹವಿರ್ಭಾಗವನ್ನು ಅಪಹರಣ ಮಾಡುವ ತನಗೆ ಯೋಗೇಶ್ವರತ್ವವನ್ನು ಏನು ಹೇಳತಕ್ಕದ್ದು ಎಂತ ತೋರಿಸುವ ಬಗ್ಗೆ ಹರಿಃ ಎಂತ ಕೊಟ್ಟದ್ದು. ॥ ೯ ॥

ಅದು ಎಂತಹ ರೂಪವೆಂದರೆ ಹೇಳುವನು. ಬಹಳಗಳಾದ ಮುಖಗಳೂ ಕಣ್ಣುಗಳೂ ಉಳ್ಳದ್ದು, ಮಾತ್ರವಲ್ಲ, ಅನಂತ ಅದ್ಭುತ ವಸ್ತುಗಳೂ ಯಾವ ಶರೀರದಲ್ಲಿ ನೋಡಲು ಸಿಗುವವೊ. ಅಲೌಕಿಕ ಅನೇಕ ಆಭರಣೋಪೇತ

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ॥ ೧೧ ॥**
**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥**
**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩ ॥**
**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥**

---

ವಾದದ್ದು. ಹೀಗೆಯೇ ಅಲೌಕಿಕ ಅನೇಕ ಆಯುಧಗಳಿಂದ ಯುಕ್ತವಾದದ್ದು. ॥ ೧೦ ॥

ಅನೇಕ ಅಲೌಕಿಕಗಳಾದ ಮಾಲೆ ವಸ್ತ್ರ ಗಂಧಾದಿಗಳಿಂದ ಕೂಡಿದ ಸರ್ವಾಶ್ಚರ್ಯಸ್ವರೂಪವಾದ ಕ್ರೀಡಾದಿಗುಣಯುಕ್ತವೂ, ದೇಶಕಾಲಾದಿ ವ್ಯಾಪ್ತವೂ ಸರ್ವದಿಕ್ಕುಗಳಲ್ಲಿಯೂ ಮುಖಗಳುಳ್ಳ ರೂಪವೆಂದರ್ಥವು.॥೧೧॥

ಈ ಪರಮಾತ್ಮನ ರೂಪದ ಕಾಂತಿಗೆ, ಆಕಾಶದಲ್ಲಿ ಒಮ್ಮೆಯೇ ಸಹಸ್ರ ಸೂರ್ಯೋದಯವಾದರೆ ಅದರ ಕಾಂತಿಯು ಸಮವೆಂದೆನ್ನಬಹುದು.॥ ೧೨ ॥

ಆಗ ಪಾಂಡುತನಯನಾದ ಪಾರ್ಥನು ದೇವಶ್ರೇಷ್ಠನಾದ ಶ್ರೀಕೃಷ್ಣನ ಶರೀರದಲ್ಲಿ ದೇವದಾನವ-ಮನುಷ್ಯಾದಿ-ಅನೇಕ ವಿಧದಿಂದ ವಿಭಾಗ ಹೊಂದಿದ ಸಕಲ ಜಗತ್ತನ್ನೂ ಶರೀರದ ಏಕದೇಶದಲ್ಲಿರುವದನ್ನಾಗಿ ನೋಡಿದನು. ॥ ೧೩ ॥

ಇಂಥಾ ರೂಪದರ್ಶನಾನಂತರದಲ್ಲಿ ಆಶ್ಚರ್ಯಭರಿತನಾದ ಅಪೂರ್ವ ದರ್ಶನದಿಂದ ರೋಮಾಂಚ ಹೊಂದಿದ ಅರ್ಜುನನು ಕೈ ಜೋಡಿಸಿಕೊಂಡು ಶಿರಸಾ ಕೃಷ್ಣಗೆ ನಮಸ್ಕರಿಸಿ ಕೃಷ್ಣನನ್ನು ಕುರಿತು ಮುಂದಿನ ಮಾತನ್ನಾಡಿದನು. ॥ ೧೪ ॥

ಅರ್ಜುನನು ಹೇಳುವನು. ಎಲೋ ಕ್ರೀಡಾದಿಗುಣಯುಕ್ತನಾದ ಪರಮಾತ್ಮನೇ! ನಿನ್ನ ದೇಹದಲ್ಲಿ ಚತುರ್ಮುಖನನ್ನೂ ಅವನ ತೊಡೆಯಲ್ಲಿರುವ ರುದ್ರನನ್ನೂ, ರುದ್ರಾಂಗದಲ್ಲಿರುವ ಇತರ ದೇವತೆಗಳನ್ನೂ, ದಿವ್ಯ ಸರ್ಪ

॥ ಅರ್ಜುನ ಉವಾಚ ॥

ಪಶ್ಯಾಮಿ ದೇವಾಂಸ್ತವ ದೇವ ದೇಹೇ
ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।
ಬ್ರಹ್ಮಾಣಮೀಶಂ ಕಮಲಾಸನಸ್ಥ-
ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥

ಅನೇಕಬಾಹೂದರವಕ್ತ್ರನೇತ್ರಂ
ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ।
ನಾಂತಂ ನ ಮಧ್ಯಂ ನ ಪುನಸ್ತವಾದಿಂ
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪಮ್ ॥ ೧೬ ॥

ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ।
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್
ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ॥ ೧೭ ॥

---

ಗಳನ್ನೂ, ಹಾಗೆ ಸಕಲ ಭೂತಗಳ ಸಮುದಾಯವನ್ನೂ ಋಷಿಗಳನ್ನೂ ನೋಡುವೆನು. ಇಲ್ಲಿ ಸಾಮಾನ್ಯತಃ ಹೇಳಿದ್ದರೂ ವಿಷ್ಣೌ ಸಮಾಶ್ರಿತೋ ಬ್ರಹ್ಮಾ ಬ್ರಹ್ಮಣೋಂಽಕಗತೋ ಹರಃ। ಹರಸ್ಯಾಂಗವಿಶೇಷೇಷು ದೇವಾಃ ಸರ್ವೇ ಸಮಾಶ್ರಿತಾಃ ಎಂತಪಾದ್ಮಪುರಾಣದಲ್ಲಿ ಹೇಳಿದಂತೆ ವಿಶೇಷ ತಿಳಿಯತಕ್ಕದ್ದು.॥೧೫॥

ಆದರ ತೋರಿಸುವ ಬಗ್ಗೆ ಉಕ್ತವಾದ ಪ್ರಮೇಯವನ್ನೇ ಪುನಃ ಅನುವಾದಿಸುವನು. ಸಮಸ್ತ ನಿಯಾಮಕನಾದ ಎಲೋ ಪೂರ್ಣರೂಪನಾದ ಕೃಷ್ಣನೇ ನಿನ್ನ ರೂಪವನ್ನು ಅನೇಕ ವಿಧಗಳಾದ ಬಾಹುಗಳು, ಉದರಗಳು, ಮುಖಗಳು, ನಯನಗಳು. ಇವುಗಳುಳ್ಳದ್ದನ್ನು ಸಕಲ ದೇಶಗಳಲ್ಲಿಯೂ ಅನಂತ ರೂಪವುಳ್ಳ ನಿನ್ನನ್ನು ನೋಡುತ್ತೇನೆ. ಆದ್ದರಿಂದಲೇ ನಿನ್ನ ರೂಪದ ಆದಿ ಮಧ್ಯ ಅಂತ್ಯವನ್ನಾಗಲೀ ನಾನು ನೋಡುವುದಿಲ್ಲ. ॥ ೧೬ ॥

ಒಳ್ಳೇ ಪ್ರಕಾಶಮಾನರಾದ ಅಗ್ನಿ ಸೂರ್ಯ ಇವರ ಕಾಂತಿಯಂತೆ ಕಾಂತಿಯುಳ್ಳ ಆದರೂ ಅಪರಿಮಿತನಾದ ಕಿರೀಟಗದಾಚಕ್ರಗಳಿಂದ ಕೂಡಿದ

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥
ಅನಾದಿಮಧ್ಯಾಂತಮನಂತವೀರ್ಯ-
ಮನಂತಬಾಹುಂ ಶಶಿಸೂರ್ಯನೇತ್ರಮ್ ।
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪಂತಮ್ ॥ ೧೯ ॥
ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।
ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥

---

ಕಾಂತಿಗಳ ಸಮುದಾಯ ಯುಕ್ತನಾದ, ದಶದಿಕ್ಕುಗಳಲ್ಲಿ ಪ್ರಕಾಶಮಾನನಾದ, ಸರ್ವದಿಕ್ಕುಗಳಲ್ಲೂ ನೋಡಲಶಕ್ಯನಾದ ನಿನ್ನನ್ನು ನೋಡುತ್ತೇನೆ. ॥ ೧೭ ॥

ನೀನು ನಾಶವಿಲ್ಲದವನಾಗಿಯೂ, ತಿಳಿಯಲು-ಯೋಗ್ಯ-ವಸ್ತುಗಳಲ್ಲಿ ಮುಖ್ಯ ತಿಳಿಯಲು ಯೋಗ್ಯನಾಗಿಯೂ, ಈ ಜಗತ್ತಿಗೆ ಮುಖ್ಯಾಶ್ರಯನಾಗಿಯೂ, ನಾಶವಿಲ್ಲದ ನೀನು ಅನಾದಿಯಾಗಿ ಬಂದ-ಧರ್ಮರಕ್ಷಕನಾಗಿಯೂ, ಆದ್ಯಂತಶೂನ್ಯ ಪುರುಷನಾಗಿಯೂ ಇದ್ದೀ ಎಂತ ನಾನು ತಿಳಿಯುವವನಾಗುವೆನು. ॥ ೧೮ ॥

ಗುಣದಿಂದ ಆದಿಮಧ್ಯಾಂತಶೂನ್ಯನನ್ನಾಗಿಯೂ, ಅಪರಿಮಿತಶಕ್ತಿಯುಕ್ತನನ್ನಾಗಿಯೂ, ಅಸಂಖ್ಯಾತ ಬಾಹುಗಳುಳ್ಳವನನ್ನಾಗಿಯೂ, ಚಂದ್ರ ಸೂರ್ಯಾಶ್ರಯನೇತ್ರಗಳುಳ್ಳವನನ್ನಾಗಿಯೂ ಅಗ್ನಿ ಜನಕ ಮುಖಉಳ್ಳವನನ್ನಾಗಿಯೂ, ನಿನ್ನ ಸ್ವೀಯತೇಜಸ್ಸಿನಿಂದ ಇಡೀ ಜಗತ್ತನ್ನೇ ಪ್ರಕಾಶಿಸುವ ರೂಪವುಳ್ಳವನನ್ನಾಗಿಯೂ ನಿನ್ನನ್ನು ನೋಡುತ್ತೇನೆ. ॥ ೧೯ ॥

ಈ ಭೂಮಿ ದ್ಯುಲೋಕಗಳ ಮಧ್ಯವು ನಿನ್ನ ಒಂದು ರೂಪದಿಂದ ವ್ಯಾಪ್ತವಾಗಿದೆ. ರೂಪಾಂತರಗಳಿಂದ ಸರ್ವ ದಿಕ್ಕುಗಳೂ ವ್ಯಾಪ್ತಗಳಾಗಿದ್ದಾವೆ.

ಅಮೀ ಹಿ ತ್ವಾಂ ಸುರಸಂಘಾ ವಿಶಂತಿ
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥

ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ
ಗಂಧರ್ವಯಕ್ಷಾಸುರಸಿದ್ಧಸಂಘಾ
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ ೨೨ ॥

---

ಎಲೋ ಮಹಾಪುರುಷನೇ, ಇಂಥಾ ಅತ್ಯದ್ಭುತವಾದ, ಭೂಭಾರ ಸಂಹಾರಾರ್ಥ ವಾಗಿ ಪ್ರಕಟವಾದದ್ರಿಂದ ಉಗ್ರದಂತೆ ತೋರುವ, ನಿನ್ನ ಈ ರೂಪವನ್ನು ನೋಡಿ ಮೂರು ಲೋಕದಲ್ಲಿರುವ ಭಕ್ತವರ್ಗವು ಭಯಾಕ್ರಾಂತವಾಯಿತೆಂದು ನಾನು ತಿಳಿಯುವೆನು. ಇಲ್ಲಿ ಮೂರು ಲೋಕವೂ ಭೀತವಾಗಿದೆಯೆಂದು ಹೇಳಿದ್ದರೂ ಸಕಲರಿಗೆ ರೂಪದರ್ಶನವಿಲ್ಲದ ಕಾರಣ ಲೋಕಸ್ಥ ಭಕ್ತವರ್ಗವೆಂದು ತಿಳಿಯಬೇಕು. ॥ ೨೦ ॥

ಅರ್ಜುನನು ಸ್ವದೃಷ್ಟಗಳಾದ ಇತರ ವಿಷಯಗಳನ್ನು ಹೇಳುವನು. ಮುಕ್ತದೇವತೆಗಳ ಸಮುದಾಯಗಳು ಕೆಲವು ಶ್ರೀಕೃಷ್ಣನ ಶರೀರದಲ್ಲಿ ಪ್ರವೇಶ ಮಾಡುವವು. ಕೆಲವರು ಭೀತರಾಗಿ ಕೈ ಮುಗಿದು ಸ್ತೋತ್ರ ಮಾಡುತ್ತಾರೆ. ಮಹರ್ಷಿಗಳೂ ಸಿದ್ಧರೂ ಇವರ ಸಮುದಾಯಗಳೂ ಗುಣ ಪ್ರತಿಪಾದಕ ಸ್ತುತಿಗಳಿಂದ ಮಂಗಲವಾಗಲೆಂದು ಹೇಳಿ ಸ್ತುತಿಸುತ್ತಾರೆ. (ಪ್ರವೇಶೋ ನಿರ್ಗಮಶ್ಚೈವ ಮುಕ್ತಾನಾಂ ಸ್ವೇಚ್ಛಯಾ ಭವೇತ್ ।) ಎಂಬ ವಚನದಿಂದ ದೇವರ ಶರೀರದಲ್ಲಿ ಪ್ರವೇಶವು ಕೂಡುತ್ತದೆ. ॥ ೨೧ ॥

ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವದೇವತೆಗಳು, ಅಶ್ವಿನಿಗಳು, ಮರುತ್, ಪಿತೃಗಳು, ಗಂಧರ್ವರು, ಯಕ್ಷರು, ಅಸುರರು, ಸಿದ್ಧರು ಯೋಗ್ಯರಾದ ಇವರ ಸಮುದಾಯಗಳು ಅಶ್ಚರ್ಯಭರಿತಗಳಾಗಿ ನಿನ್ನನ್ನು ನೋಡುತ್ತಾವೆ. ॥ ೨೨ ॥

ರೂಪಂ ಮಹತ್ತೇ ಬಹುವಕ್ತ್ರನೇತ್ರಂ
ಮಹಾಬಾಹೋ ಬಹುಬಾಹೂರುಪಾದ ।
ಬಹೂದರಂ ಬಹುದಂಷ್ಟ್ರಾಕರಾಲಂ
ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಽಹಮ್ ॥ ೨೩ ॥

ನಭಃಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥ ೨೪ ॥

ದಂಷ್ಟ್ರಾಕರಾಲಾನಿ ಚ ತೇ ಮುಖಾನಿ
ದೃಷ್ಟ್ವೈವ ಕಾಲಾನಲಸನ್ನಿಭಾನಿ ।
ದಿಶೋ ನ ಜಾನೇ ನ ಲಭೇ ಚ ಶರ್ಮ
ಪ್ರಸೀದ ದೇವೇಶ ಜಗನ್ನಿವಾಸ ॥ ೨೫ ॥

ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ
ಸರ್ವೇ ಸಹೈವಾವನಿಪಾಲಸಂಘೈಃ ।

---

ಎಲೋ ಮಹಾಬಾಹುವಾದ ಶ್ರೀಕೃಷ್ಣನೇ, ನಿನ್ನ ಅನೇಕ ಮುಖ ನಯನ ಬಾಹು ಪಾದ ಉದರಗಳುಳ್ಳ ಅನೇಕ ದಾಡೆಗಳಿಂದ ಭಯಾನಕವಾದ ರೂಪವನ್ನು ನೋಡಿ ಲೋಕದ ಭಕ್ತರೂ ನಾನೂ ವ್ಯಥಿತರಾಗಿದ್ದೇವೆ.॥ ೨೩ ॥

ಎಲೋ ವಿಷ್ಣುವೇ, ಆಕಾಶವನ್ನು ಸ್ಪರ್ಶಮಾಡಿಕೊಂಡು ಪ್ರಕಾಶಮಾನವಾದ, ಅನೇಕ ವರ್ಣಗಳಿಂದ ಕೂಡಿದ, ವಿವೃತಮುಖವುಳ್ಳ (ತೆರದ ಬಾಯಿ) ಪ್ರಕಾಶಮಾನಗಳಾದ ವಿಸ್ತೃತ ನೇತ್ರಗಳುಳ್ಳ ನಿನ್ನನ್ನು ನೋಡಿ ಭಯಗ್ರಸ್ತ ಮನಸ್ಸುಳ್ಳ ನಾನು ಧೈರ್ಯವನ್ನಾಗಲೀ ಮನಃಶಾಂತಿಯನ್ನಾಗಲೀ ಹೊಂದುವುದಿಲ್ಲ. ॥ ೨೪ ॥

ಎಲೋ ದೇವಶ್ರೇಷ್ಠನೇ! ಜಗದಾಧಾರನೇ! ನಿನ್ನ ಈ ದಾಡೆಗಳಿಂದ ವಿಕೃತಗಳಾದ ಪ್ರಳಯಕಾಲದ ಅಗ್ನಿ–ಸದೃಶಗಳಾದ ಮುಖಗಳನ್ನು ನೋಡಿ ನಾನು ದಿಕ್ಕುಗಳನ್ನು ತಿಳಿಯುವದಿಲ್ಲ, ಸುಖವನ್ನೂ ಹೊಂದುವುದಿಲ್ಲ. ॥೨೫॥

ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಽಸೌ
ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬ ॥
ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ
ದಂಷ್ಟ್ರಾಕರಾಲಾನಿ ಭಯಾನಕಾನಿ ।
ಕೇಚಿದ್ವಿಲಗ್ನಾ ದಶನಾಂತರೇಷು
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭ ॥
ಯಥಾ ನದೀನಾಂ ಬಹವೋಽಂಬುವೇಗಾಃ
ಸಮುದ್ರಮೇವಾಭಿಮುಖಾ ದ್ರವಂತಿ
ತಥಾ ತವಾಮೀ ನರಲೋಕವೀರಾ
ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥ ೨೮ ॥

---

ಈ ಎಲ್ಲಾ ಧೃತರಾಷ್ಟ್ರನ ಪುತ್ರರೂ ಹಾಗೆ ಭೀಷ್ಮರು, ದ್ರೋಣಾಚಾರ್ಯರು, ಕರ್ಣನು ಇವರುಗಳು ಎಲ್ಲಾ ರಾಜರ ಸಮುದಾಯಗಳಿಂದಲೂ ನಮ್ಮವರಾದ ಭಟಮುಖ್ಯರಿಂದಲೂ ಕೂಡಿಕೊಂಡು ದಾಡೆಗಳಿಂದ ವಿಕೃತಗಳಾದ ಆತಏವ ಭಯಾನಕಗಳಾದ ನಿನ್ನ ಮುಖಗಳನ್ನು ವೇಗವುಳ್ಳವರಾಗಿ ಪ್ರವೇಶ ಮಾಡುತ್ತಾರೆ. ಇಲ್ಲಿ ಧಾರ್ತರಾಷ್ಟ್ರಾದಿಗಳ ಪ್ರವೇಶವು ಅವರ ಬುದ್ಧಿಪೂರ್ವಕ ವ್ಯಾಪಾರದಿಂದಾಗದಿದ್ದರೂ ಪರಮಾತ್ಮನೇ ಸೇನಾದ್ವಯಸ್ಥ-ಯೋಧರನ್ನು ತನ್ನ ವ್ಯಾಪ್ತ ಮುಖಗ್ರಾಸ ಮಾಡಿರುವುದರಿಂದ ವಿಶಂತಿ ಎಂತ ಹೇಳಿದ್ದೆಂದು ತಿಳಿಯಬೇಕು. ಹೀಗೆ ಮುಂದೆಯೂ, ಕೆಲವರು "ಈಗ್ಯೆ ಸಾಯುವವರು" ನಿನ್ನ ದಂತಗಳ ಮಧ್ಯೇ ಸಿಕ್ಕಿಬಿದ್ದವರಾಗಿ ಚೂರ್ಣಿತಗಳಾದ ಶಿರಸ್ಸುಗಳಿಂದ ಕೂಡಿದವರಾಗಿ ತೋರುತ್ತಾರೆ. ಹೇಗೆ ಸೂಕ್ಷ್ಮವಾಗಿ ಶಿರೆಬಿಟ್ಟ ಘಟವು ಸೂಕ್ಷ್ಮದರ್ಶಕ ಯಂತ್ರದಿಂದ ಶಿರೆಬಿಟ್ಟಂತೆ ತೋರುವದೋ ಹಾಗೆ ಅರ್ಜುನನ ದಿವ್ಯದೃಷ್ಟಿಗೆ, ನಮಗೆ ತೋರದಿದ್ದರೂ ಇವರ ಶಿರಸ್ಸುಗಳು ಭಿನ್ನಗಳಾಗಿದ್ದಾವೆಂತ ತೋರುತ್ತದೆ. ॥ ೨೭ ॥

ಹೇಗೆ ನದಿಗಳ ವೇಗವುಳ್ಳ ಪ್ರವಾಹಗಳು ಸಮುದ್ರಾಭಿಮುಖಗಳಾಗಿ ಹರಿಯುತ್ತವೋ ಹಾಗೆ ಈ ವೀರರಾದ ಮನುಷ್ಯಶ್ರೇಷ್ಠರೂ ಕೂಡ ಪ್ರಕಾಶಮಾನಗಳಾದ ನಿನ್ನ ಮುಖಗಳನ್ನು ಪ್ರವೇಶಮಾಡುತ್ತಾರೆ. ॥ ೨೮ ॥

ಯಥಾ ಪ್ರದೀಪ್ತಂ ಜ್ವಲನಂ ಪತಂಗಾ
ವಿಶಂತಿ ನಾಶಾಯ ಸಮೃದ್ಧವೇಗಾಃ ।
ತಥೈವ ನಾಶಾಯ ವಿಶಂತಿ ಲೋಕಾ-
ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥
ಲೇಲಿಹ್ಯಸೇ ಗ್ರಸಮಾನಃ ಸಮಂತಾತ್
ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ ।
ತೇಜೋಭಿರಾಪೂರ್ಯ ಜಗತ್ಸಮಗ್ರಂ
ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥ ೩೦ ॥
ಆಖ್ಯಾಹಿ ಮೇ ಕೋ ಭವಾನುಗ್ರರೂಪೋ
ನಮೋಽಸ್ತು ತೇ ದೇವವರ ಪ್ರಸೀದ ।
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ
ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ॥ ೩೧ ॥

---

ಹೇಗೆ ಪತಂಗಗಳು ತಮ್ಮ ನಾಶಕ್ಕೋಸ್ಕರವೇ ವಹ್ನಿಯನ್ನು ಪ್ರವೇಶಿಸುವವೋ, ಹಾಗೆ ಈ ಜನರು ಸ್ವನಾಶಕ್ಕೋಸ್ಕರ ನಿನ್ನ ಮುಖಗಳನ್ನು ಪ್ರವೇಶಿಸುತ್ತಾರೆ. ಅತಿ ವೇಗದಿಂದ ಪರಮಾತ್ಮನು ಇವರನ್ನು ಗ್ರಾಸ ಮಾಡುವ ಕಾರಣ ಸಮೃದ್ಧವೇಗಾಃ ಎಂತ ಇಲ್ಲಿ ಹೇಳಿದ್ದು. ॥ ೨೯ ॥

ಎಲೋ ವಿಷ್ಣುವೇ ಪ್ರಕಾಶಮಾನಗಳಾದ ನಿನ್ನ ಮುಖಗಳಿಂದ ಸಕಲ ಲೋಕರನ್ನು ಗ್ರಾಸಿಸುವವನಾಗಿ ಜಿಹ್ವೆಯಿಂದ ರಸಾಸ್ವಾದನವನ್ನು ಮಾಡುತ್ತಿ. ನಿನ್ನ ತೀಕ್ಷ್ಣ ಕಾಂತಿಗಳು ತನ್ನ ಪ್ರಕಾಶನ ಶಕ್ತಿಗಳಿಂದ ಇಡೀ ಜಗತ್ತನ್ನು ವ್ಯಾಪಿಸಿ ಸಕಲ ಪದಾರ್ಥಗಳಲ್ಲಿ ಬಿಸಿಯನ್ನು ತಂದು ಕೊಡುತ್ತವೆ. ॥ ೩೦ ॥

ಪರಮಾತ್ಮನ ಗುಣಕರ್ಮಗಳನ್ನು ಅರ್ಜುನನು ತಿಳಿದವನಾಗಾಗ್ಯೂ ವಿಶೇಷವಾಗಿ ತಿಳಿಯಲಿಚ್ಛೆಯಿಂದ ಹೇಳುವನು. ಎಲೋ ದೇವಶ್ರೇಷ್ಠ ಪರಮಾತ್ಮನೇ ನಿನಗೆ ನಮಸ್ಕಾರವಿರಲಿ. ಪ್ರಸನ್ನನಾಗು. ನೀನು ಎಂಥಾ ಮಾಹಾತ್ಮ್ಯ ಉಳ್ಳವ. ಯಾವದಕ್ಕಾಗಿ ಈ ಉಗ್ರರೂಪಿಯಾಗಿದ್ದಿ ನನಗೆ ಹೇಳು. ಆದಿಪುರುಷನಾದ ನಿನ್ನನ್ನು ನಾನು ತಿಳಿಯಲಪೇಕ್ಷಿಸುವೆನು. ನಿನ್ನ ವ್ಯಾಪಾರವನ್ನು ನಾನು ಸಮಗ್ರ ತಿಳಿಯುವುದಿಲ್ಲ. ಪೃಷ್ಟನಾದ

॥ ಶ್ರೀಭಗವಾನುವಾಚ ॥

ಕಾಲೋऽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ
ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ।
ಋತೇऽಪಿ ತ್ವಾಂ ನ ಭವಿಷ್ಯಂತಿ ಸರ್ವೇ
ಯೇऽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥

ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ
ಜಿತ್ವಾ ಶತ್ರೂನ್ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।
ಮಯೈವೈತೇ ನಿಹತಾಃ ಪೂರ್ವಮೇವ
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥

---

ಕೃಷ್ಣನು ಉತ್ತರ ಕೊಡುವನು. ನಾನು ಪೂರ್ಣ ಸದ್ಗುಣಗಳಿಂದ ಕಲಿತ (ಸಂಬದ್ಧ)ನಾದದ್ರಿಂದ ಕಾಲನಾಗಿರುವೆನು. ಲೋಕಕ್ಷಯವನ್ನೂ ಮಾಡುವವನಾಗಿರುವೆನು. ನೀನು ಎಂಥಾ ಮಾಹಾತ್ಮ್ಯವುಳ್ಳವ, ಈ ರೂಪ ಯಾಕೆ ಧರಿಸಿದ್ದಿ ಎಂಬ ಪ್ರಶ್ನೆಗೆ ಈ ಉತ್ತರ. ದೇಶಕಾಲ ವ್ಯಾಪ್ತನಾದ ನಾನು ಈ ಯುದ್ಧಾಸಕ್ತರಾದವರನ್ನು ಪ್ರತ್ಯಕ್ಷವಾಗಿ ಸಂಹರಿಸಲು ಹೊರಟಿದ್ದೇನೆ. ನಿನ್ನನ್ನೂ, ಅಪಿಪದ ಕೊಟ್ಟ ಪ್ರಯುಕ್ತ ಇತರ ಪಾಂಡವರು ಅಶ್ವತ್ಥಾಮ ಕೃಪ ಕೃತವರ್ಮರನ್ನು ಬಿಟ್ಟು ಈ ಎರಡು ವಿರುದ್ಧ ಸೇನೆಗಳಲ್ಲಿ ಯಾರು ಯೋಧರಾಗಿದ್ದಾರೋ ಅವರು ಮುಂದೆ ಇರುವುದಿಲ್ಲ ॥ ೩೨ ॥

ಹಿಂದೆ ದ್ವಿತೀಯಾಧ್ಯಾಯದಲ್ಲಿ (ಹತೋ ವಾ ಪ್ರಾಪ್ಸ್ಯಸೇ ಸ್ವರ್ಗಂ ಜಿತ್ವಾವಾ ಭೋಕ್ಷ್ಯಸೇ ಮಹೀಂ) ಎಂತ ಸಂದೇಹದಿಂದಾದ್ರೂ ಯುದ್ಧ ಮಾಡೆಂದು ಹೇಳಿದರೂ ಈಗ ನಿನಗೆ ಪರಾಜಯಶಂಕೆ ಇಲ್ಲವಾಗಿ ಸ್ಪಷ್ಟವಾಗಿ ಹೇಳುತ್ತಾನೆ. ನಾನೇ ಇವರನ್ನೆಲ್ಲಾ ಸಂಹರಿಸಲು ಹೊರಟ ಕಾರಣ ಎಲೋ ಅರ್ಜುನನೇ ನೀನು ಯುದ್ಧಕ್ಕೆ ಸನ್ನದ್ಧನಾಗು, ಕೀರ್ತಿ ಸಂಪಾದಿಸು. ಶತ್ರುಗಳನ್ನು ಜಯಿಸಿ ಈ ಸಮೃದ್ಧ ರಾಜ್ಯವನ್ನು ಅನುಭವಿಸು. ಇವರೆಲ್ಲಾ ಪೂರ್ವದಲ್ಲಿಯೇ ಮೃತಪ್ರಾಯರಾದ್ರಿಂದ ಪ್ರತ್ಯಕ್ಷತಃ ಇವರನ್ನು ಕೊಲ್ಲುವುದಕ್ಕೆ ನೀನು ಕೇವಲ ನಿಮಿತ್ತನಾಗು. ॥ ೩೩ ॥

ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ
ಕರ್ಣಂ ತಥಾऽನ್ಯಾನಪಿ ಯೋಧವೀರಾನ್ ।
ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುದ್ಧ್ಯಸ್ವ ಜೇತಾऽಸಿ ರಣೇ ಸಪತ್ನಾನ್ ॥ ೩೪ ॥

॥ ಸಂಜಯ ಉವಾಚ ॥

ಏತಚ್ಛ್ರುತ್ವಾ ವಚನಂ ಕೇಶವಸ್ಯ
ಕೃತಾಂಜಲಿರ್ವೇಪಮಾನಃ ಕಿರೀಟೀ ।
ನಮಸ್ಕೃತ್ವಾ ಭೂಯ ಏವಾऽಹ ಕೃಷ್ಣಂ
ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥

॥ ಅರ್ಜುನ ಉವಾಚ ॥

ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ
ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ
ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥ ೩೬ ॥

---

ಇನ್ನು ದ್ರೋಣಾಚಾರ್ಯರು ವಿದ್ಯಾಗುರುಗಳು, ಭೀಷ್ಮನು ಸ್ವೇಚ್ಛಾ ಮರಣನು, ಸೈಂಧವ ಪಿತೃವರಗರ್ವಿತ, ಕರ್ಣನು ಇಂದ್ರಶಕ್ತಿಯಿಂದ ಬಲಿಷ್ಠನು. ಇವರನ್ನೆಲ್ಲಾ ನಾನು ಹೇಗೆ ಜಯಿಸಲೆಂದು ಶಂಕಿಸಬಾರದೆಂದು ಹೇಳುವನು. ದ್ರೋಣ, ಭೀಷ್ಮ, ಸೈಂಧವ, ಕರ್ಣ ಇವರೇ ಮೊದಲಾದ ಯೋಧರನ್ನು ನನ್ನಿಂದ ಮೃತಪ್ರಾಯರನ್ನು ನೀನು ಸಂಹರಿಸು. ಮನಸ್ಸಿನಲ್ಲಿ ಶಂಕಿಸಬೇಡ. ಯುದ್ಧದಲ್ಲಿ ವೈರಿಗಳನ್ನು ಜಯಿಸುವವನಾಗಿರುತ್ತಿ. ಯುದ್ಧ ಮಾಡು. ॥ ೩೪ ॥

ಅದರ ಮುಂದೆ ಏನಾಯಿತೆಂಬ ಧೃತರಾಷ್ಟ್ರನ ಶಂಕಾಪರಿಹಾರಕ್ಕೆ ಸಂಜಯನು ಹೇಳುತ್ತಾನೆ. ಶ್ರೀಕೃಷ್ಣನ ಈ ಮಾತನ್ನು ಕೇಳಿ ಕೈ ಮುಗಿದು ಕೊಂಡು ಭಯದಿಂದ ಕಂಪಿಸುವ ಅಂಗವುಳ್ಳ ಅರ್ಜುನನು ಅತಿ ಭೀತನಾಗಿ ಶ್ರೀಕೃಷ್ಣನನ್ನು ನಮಸ್ಕರಿಸಿ ಗದ್ಗದಕಂಠನಾಗಿ ಅನ್ನುವನು. ॥ ೩೫ ॥

ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್
ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।
ಅನಂತ ದೇವೇಶ ಜಗನ್ನಿವಾಸ
ತ್ವಮಕ್ಷರಂ ಸದಸತ್ತತ್ಪರಂ ಯತ್ ॥ ೩೭ ॥

ತ್ವಮಾದಿದೇವಃ ಪುರುಷಃ ಪುರಾಣಃ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।
ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ ॥ ೩೮ ॥

ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।

---

ಅರ್ಜುನನ ಮಾತನ್ನು ಸ್ಥಾನೇತ್ಯಾದಿಯಿಂದ ವಿವರಿಸುವನು. ಎಲೋ ಸರ್ವೇಂದ್ರಿಯ ಪ್ರೇರಕನಾದ ಶ್ರೀಕೃಷ್ಣನೇ ನಿನ್ನ ಯಶಸ್ಸಿನಿಂದ ಜಗತ್ತು ಸಂತೋಷವನ್ನು ಹೊಂದುತ್ತದೆ. ಅನುರಾಗವನ್ನು ಹೊಂದುತ್ತದೆ. ರಕ್ಷಸ್ಸುಗಳು ಭಯಗ್ರಸ್ತಗಳಾಗಿ ದಿಕ್ಕು ದಿಕ್ಕಿಗೆ ಓಡುತ್ತಾವೆ. ಸಿದ್ಧರಸಮುದಾಯಗಳು ನಮಸ್ಕರಿಸುತ್ತಾವೆ. ಇದೆಲ್ಲಾ ನ್ಯಾಯವು. ॥ ೩೬ ॥

ಏತಕ್ಕೆ ನ್ಯಾಯವೆಂದರೆ, ಎಲೋ ಪರಿಪೂರ್ಣವಾದ ವಿಷಯಾನುಭವ ಉಳ್ಳವನೇ! ಚತುರ್ಮುಖನಿಗೂ ಆದಿಕಾರಣನಾದ ಗರಿಷ್ಠನಾದ ನಿನಗೆ ಏತಕ್ಕೆ ಎಲ್ಲರೂ ನಮಸ್ಕರಿಸಲಿಕ್ಕಿಲ್ಲ. ನಮಸ್ಕಾರ ಮಾಡ್ಯೇ ಮಾಡಿಯಾರು. ಅಂತ ಶೂನ್ಯನಾದ ದೇವತೆಗಳಿಗೆ ನಿಯಾಮಕನಾದ ಜಗದಾಶ್ರಯನಾದ ಎಲೋ ಶ್ರೀಕೃಷ್ಣನೇ ಯಾವುದೊಂದು ಭಾವಾಭಾವಾತ್ಮಕ ಜಗತ್ತುಂಟೋ, ಅದರಿಂದುತ್ತಮನೂ, ಅಕ್ಷರಶಬ್ದ ವಾಚ್ಯನೂ ನೀನೇ ॥ ೩೭ ॥

ಎಲೋ ವ್ಯಾಪ್ತರೂಪ ಉಳ್ಳವನೇ, ಆದಿದೇವನೂ, ಪುರಾಣ ಪುರುಷನೂ ನೀನೇ. ಈ ಸಮಸ್ತ ಜಗತ್ತಿಗೆ ಮುಖ್ಯಾಶ್ರಯನೂ ನೀನೇ. ಸಕಲವನ್ನು ತಿಳಿದವನೂ, ಸಕಲರಿಂದ ತಿಳಿಯಲು ಯೋಗ್ಯನೂ, ತೇಜೋರೂಪನೂ ನೀನೇ. ವಿಶ್ವಜಗತ್ತು ನಿನ್ನಿಂದ ವ್ಯಾಪ್ತವಾಗಿದೆ. ॥ ೩೮ ॥

ನಮೋನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋನಮಸ್ತೇ ॥ ೩೯ ॥

ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ ।
ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವ ॥ ೪೦ ॥

ಸಖೇತಿ ಮತ್ವಾ ಪ್ರಸಭಂ ಯದುಕ್ತಮ್
ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।

---

ಬಲ ಜ್ಞಾನರೂಪನಾದ ಪ್ರಯುಕ್ತ ವಾಯುವೂ ದೋಷೋ ಪರತಿಯಿದ್ದ ಪ್ರಯುಕ್ತ ಯಮನೂ, ಸ್ವತಃ ಗತಿಶೂನ್ಯವಾದ ಜಗತ್ತಿಗೆ ನಿಯಾಮಕನಾದ ಪ್ರಯುಕ್ತ ಅಗ್ನಿಯೂ, ಭಕ್ತರನ್ನು ಸ್ವೀಕರಿಸುವದ್ರಿಂದ ವರುಣನೂ, ಅತಿಶಯಿತ ಸುಖಾಂಕಿತನಾದ್ರಿಂದ ಶಶಾಂಕನೂ, ಪ್ರಜೆಗಳನ್ನು ಪಾಲಿಸುವುದರಿಂದ ಪ್ರಜಾಪತಿಯೂ, ಸರ್ವ ಜನಕರಿಗೂ ಜನಕನಾದ ಪ್ರಯುಕ್ತ ಪ್ರಪಿತಾಮಹನೂ ನೀನೇ. ಇಂಥಾ ನಿನಗೆ ಸಹಸ್ರಾವರ್ತಿ ಪ್ರಣಾಮವಿರಲಿ. ಪುನರಪಿ ನಮಸ್ಕಾರ. ಅತ್ಯಾದರವಿದ್ದ ಪ್ರಯುಕ್ತ ಅನೇಕಗಳಾದ ವಂದನೆಗಳನ್ನು ಮಾಡಿರುವನು. ॥ ೩೯ ॥

ಹೇ ಪರಿಪೂರ್ಣನಾದ ಕೃಷ್ಣನೇ ಸರ್ವ ವಿಧದಿಂದಲೂ ಅಂದರೆ ದಕ್ಷಿಣೋತ್ತರಾದಿ ಸರ್ವ ಪಾರ್ಶ್ವಗಳಿಂದಲೂ ನಿನಗೆ ನಮಸ್ಕಾರ. ವ್ಯಾಪ್ತವಾದ ಪರಮಾತ್ಮನ ರೂಪವನ್ನು ನೋಡಿ ಹೀಗೆ ಸರ್ವ ದಿಕ್ಕುಗಳಲ್ಲಿಯೂ ನಮಸ್ಕರಿಸಿದ್ದಾನೆ. ಅಪರಿಮಿತವಾದ ಸಾಮರ್ಥ್ಯ ಪರಾಕ್ರಮವುಳ್ಳ ನೀನು ಸರ್ವ ಜಗತ್ತನ್ನೂ ವ್ಯಾಪಿಸಿಕೊಂಡಿರುವ ಪ್ರಯುಕ್ತ ಸರ್ವಯೆಂತ ಅನ್ನಿಸಿಕೊಂಡಿರುವಿ. "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಯಲ್ಲಿ ಸರ್ವೈಕ್ಯವಿರುವ ಪ್ರಯುಕ್ತ ಸರ್ವ ಎಂತ ಹೇಳಿದ್ದಲ್ಲ. ಸರ್ವವ್ಯಾಪಿಯಾದ ಪ್ರಯುಕ್ತ ಸರ್ವ ಎಂತ ಹೇಳಿದ್ದು ಎಂತ ಆ ಶ್ರುತಿಗಳಿಗೆ ಸರಿಯಾದ ವ್ಯಾಖ್ಯಾನ ತೋರಿಸಿದ ಹಾಗಾಯಿತು. ॥ ೪೦ ॥

ಅಜಾನತಾ ಮಹಿಮಾನಂ ತವೇದಂ
ಮಯಾ ಪ್ರಮಾದಾತ್ಪ್ರಣಯೇನ ವಾಽಪಿ ॥ ೪೧ ॥

ಯಚ್ಚಾಪಹಾಸಾರ್ಥಮಸತ್ಕೃತೋಽಸಿ
ವಿಹಾರಶಯ್ಯಾಸನಭೋಜನೇಷು ।
ಏಕೋಽಥ ವಾಽಪ್ಯಚ್ಯುತ ತತ್ಸಮಕ್ಷಂ
ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨ ॥

ಪಿತಾಽಸಿ ಲೋಕಸ್ಯ ಚರಾಚರಸ್ಯ
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ
ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ ೪೩ ॥

---

ಇಂಥಾ ಮಾಹಾತ್ಮ್ಯವುಳ್ಳ ನಿನ್ನನ್ನು ಕುರಿತು ಯೇನಾದರೂ ಅಪರಾಧ ಮಾಡಿದ್ದು ಇದ್ದರೆ ಕ್ಷಮಿಸು ಎಂತ ಪ್ರಾರ್ಥಿಸುವನು. ಎಲೋ ನಾಶಶೂನ್ಯನಾದ ಪರಮಾತ್ಮನೇ ನಿನ್ನ ಈ ಮಹಿಮೆಯನ್ನು ತಿಳಿಯದಿರುವ ನನ್ನಿಂದ ಪ್ರಮಾದದಿಂದಲಾಗಲೀ ಸ್ನೇಹದಿಂದಲಾಗಲೀ ಸಖೀ ಎಂದು ತಿಳಿದು ಬಹುಮಾನ ಕೊಡದೆ ಹೇ ಕೃಷ್ಣ ಹೇ ಯಾದವ ಹೇ ಸಖಿ ಎಂತ ಏನು ಹೇಳಿಸಿಕೊಳ್ಳಲ್ಪಟ್ಟಿರುವಿಯೋ, ಅಪಹಾಸಕ್ಕೋಸ್ಕರ ನೀನು ಅಪಹಾಸಾನರ್ಹನಾಗಿದ್ದರೂ ಕ್ರೀಡಾ ಶಯನ ಭೋಜನಾದಿ ಸ್ಥಿತಿಯಲ್ಲಿ ಅವಮಾನಿತನಾಗಿರುವಿಯೋ, ಅದೆಲ್ಲವನ್ನು ಕುರಿತು ಅಪ್ರಮೇಯನಾದ ನಿನ್ನನ್ನು ನಾನು ನಿನ್ನ ಸನ್ಮುಖದಲ್ಲಿಯೇ ಕ್ಷಮಿಸೆಂದು ಪ್ರಾರ್ಥಿಸುವೆನು. ॥ ೪೨ ॥

ಅಪರಿಮಿತ ಮಾಹಾತ್ಮ್ಯವುಳ್ಳ ಶ್ರೀ ಕೃಷ್ಣನೇ ಈ ಚರಾಚರಾತ್ಮಕ ಜಗತ್ತಿಗೆ ನೀನು ತಂದೆಯೂ ಪೂಜ್ಯನೂ ಅತಿ ಶ್ರೇಷ್ಠ ಗುರುವೂ ಆಗಿರುವಿ. ನಿನ್ನ ಸಮರು ಇಲ್ಲ, ಹೀಗಿರುವಾಗ ಮೂರು ಲೋಕದಲ್ಲೂ ಅಧಿಕರಿಲ್ಲವೆಂದು ಏನು ಹೇಳಬಹುದು. ॥ ೪೩ ॥

ಎಲೋ ಸ್ವಾಮಿಯೇ ಯಾವ ಕಾರಣದಿಂದ ನೀನು ಇಂಥಾ ಮಹಿಮೋಪೇತನಾಗಿದ್ದಿಯೋ, ಆದಕಾರಣ ನನ್ನ ದೇಹವನ್ನು ಭೂಮಿಯಲ್ಲಿಟ್ಟು

ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ
ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್ ॥ ೪೪ ॥
ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ ।
ತದೇವ ಮೇ ದರ್ಶಯ ದೇವ ರೂಪಂ
ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥
ಕಿರೀಟಿನಂ ಗದಿನಂ ಚಕ್ರಹಸ್ತ-
ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವ ವಿಶ್ವಮೂರ್ತೇ ॥ ೪೬ ॥

॥ ಶ್ರೀಭಗವಾನುವಾಚ ॥

ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್ ।

---

ನಾನು ನಮಸ್ಕರಿಸಿ ಸ್ತುತ್ಯನಾದ ಸ್ವಾಮಿಯಾದ ನಿನ್ನನ್ನು ಪ್ರಸನ್ನೀಕರಿಸುತ್ತೇನೆ. ತಂದೆಯು ಮಗನ, ಸಖಿಯು ಸಖಿಯ, ಅಪರಾಧದಂತೆ, ಪ್ರಿಯನಾದ ನೀನು ಪ್ರಿಯನಾದ ನನಗೋಸ್ಕರ ನನ್ನ ಈ ಅಪರಾಧಗಳನ್ನು ಕ್ಷಮಿಸಲು ಯೋಗ್ಯನಾಗುತ್ತಿ. ॥ ೪೪ ॥

ಎಲೋ ಕ್ರೀಡಾದಿಗುಣ ವಿಶಿಷ್ಟನೇ ಈ ವರೆಗೆ ನೋಡದಿರುವ ನಿನ್ನ ರೂಪವನ್ನು ನೋಡಿ ಸಂತುಷ್ಟನಾಗಿರುವೆನು. ಮತ್ತು ನನ್ನ ಮನಸ್ಸು ಭಯಚಕಿತವೂ ಆಗಿದೆ. ಎಲೋ ಸ್ವಾಮಿಯೇ ಜಗದಾಶ್ರಯನೇ ಪ್ರಸನ್ನನಾಗು. ನಿನ್ನ ಪೂರ್ವತನವಾದ ರೂಪವನ್ನೇ ತೋರಿಸು. ॥ ೪೫ ॥

ಎಲೋ ಅಪರಿಮಿತ ಬಾಹುಗಳುಳ್ಳ ಗುಣಪೂರ್ಣ ವಿಗ್ರಹವುಳ್ಳ ಪರಮಾತ್ಮನೇ ನಾಲ್ಕು ಕೈಗಳಿಂದ ಕೂಡಿದ ಮೊದಲಿನ ರೂಪದಿಂದಲೇ ಕೂಡಿರುವ ಕಿರೀಟ ಗದಾ ಚಕ್ರ ಹಸ್ತಗಳುಳ್ಳ ನಿನ್ನನ್ನು ನೋಡಲಿಚ್ಛಿಸುತ್ತೇನೆ. ॥ ೪೬ ॥

ತೇಜೋಮಯಂ ವಿಶ್ವಮನಂತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ॥ ೪೭ ॥
ನ ವೇದಯಜ್ಞಾಧ್ಯಯನೈರ್ನ ದಾನೈಃ
ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ ।
ಏವಂರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥
ಮಾ ತೇ ವ್ಯಥಾ ಮಾ ಚ ವಿಮೂಢಭಾವೋ
ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ ।

---

ಭಕ್ತ್ಯತಿಶಯ ಹುಟ್ಟುವದಕ್ಕೋಸ್ಕರ ವಿಶ್ವರೂಪ ದರ್ಶನವು ದುರ್ಲಭ ವೆಂದು ಶ್ರೀಕೃಷ್ಣನು ಹೇಳುತ್ತಾನೆ. ಎಲೋ ಅರ್ಜುನನೇ ಪ್ರಸನ್ನನಾದ ನನ್ನಿಂದ ಸ್ವರೂಪ ಸಾಮರ್ಥ್ಯ ಬಲದಿಂದ ಈ ಉತ್ತಮ ರೂಪವು ನಿನಗೆ ತೋರಿಸಲ್ಪಟ್ಟಿತು. ತೇಜಃಪ್ರಚುರವಾದ ದೇಶ-ಕಾಲ-ವ್ಯಾಪ್ತವಾದ ಯಾವ ಈ ರೂಪವು ನಿನ್ನ ಹೊರತು ಬೇರೆಯವರಿಂದ ಈ ವರೆಗೆ ನೋಡ ಲ್ಪಡದಿಲಿಲ್ಲವೋ. ಇಲ್ಲಿ ನಿನ್ನನ್ನು ಹೊರತೆಂದು ಹೇಳಿದ್ರಿಂದ ನೀನು ಇಂದ್ರನ ರೂಪದಲ್ಲಿ ಪೂರ್ವದಲ್ಲಿ ನೋಡಿದ್ದೆಂದು ತಿಳಿಯುತ್ತದೆ. ಪ್ರಮಾಣ ಬಲ ದಿಂದ ನಿನಗಿಂತ ಬೇರೆಯವರಿಂದ ಎಂಬಲ್ಲಿ ಅಧಮರಿಂದ ಎಂತ ಅರ್ಥ ಮಾಡಬೇಕು. ಅಧಮರೂ ಕೂಡ ಸ್ವಯೋಗ್ಯತಾನುಸಾರವಾಗಿ ವಿಶ್ವರೂಪ ನೋಡಿದ್ದರೂ ಉತ್ತಮನಾದ ಅರ್ಜುನನಂತೆ ಪೂರ್ವದಲ್ಲಿ ನೋಡಲಿಲ್ಲ ವೆಂದಿಟ್ಟುಕೊಳ್ಳಬೇಕು. ॥ ೪೭ ॥

ಅರ್ಜುನನಿಂದ ಅಧಮರು ಯಾವ ಸಾಧನ ಮಾಡಿದರೂ ಇಂಥಾ ರೂಪ ನೋಡಲರ್ಹರಲ್ಲೆಂದು ಹೇಳುತ್ತಾನೆ. ಎಲೋ ಕುರುಶ್ರೇಷ್ಠನೇ ನಿನಗಿಂತ ಇತರರಿಂದ ಈ ನರಲೋಕದಲ್ಲಿ ಇಂಥಾ ರೂಪವುಳ್ಳ ನಾನು ವೇದ, ಯಜ್ಞ,-ಅಧ್ಯಯನದಾನ-ಅಗ್ನಿಹೋತ್ರಾದಿ-ಕ್ರಿಯಾ, ಕೃಚ್ಛ್ರ, ಚಾಂದ್ರಾಯಣಾದಿ-ತಪೋರೂಪಗಳಾದ ಈ ಎಲ್ಲಾ ಸಾಧನಗಳಿಂದಲೂ ನೋಡಲು ಶಕ್ಯನಲ್ಲ. ॥ ೪೮ ॥

ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ
ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥

॥ ಸಂಜಯ ಉವಾಚ ॥

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ
ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।
ಆಶ್ವಾಸಯಾಮಾಸ ಚ ಭೀತಮೇನಂ
ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥

॥ ಅರ್ಜುನ ಉವಾಚ ॥

ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।
ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥

---

ನಿನಗೆ ಅನಂತ ಬಾಹ್ವಾದಿಗಳುಳ್ಳ ಈ ಭಯಾನಕ ರೂಪ ನೋಡಿ ವ್ಯಥೆಯು ಬೇಡ. ಈ ಮೂಢಭಾವವೂ ಬೇಡ. ನೀನು ಭಯರಹಿತನಾಗಿ ತುಷ್ಟಾಂತಃಕರಣವುಳ್ಳವನಾಗಿ ಇನ್ನೊಮ್ಮೆ ನನ್ನ ಆ ಮೊದಲಿನ ಸೌಮ್ಯ ರೂಪವನ್ನೇ ನೋಡು. ॥ ೪೯ ॥

ಧೃತರಾಷ್ಟ್ರನನ್ನು ಕುರಿತು ಮುಂದಿನ ವ್ಯಾಪಾರವನ್ನು ಸಂಜಯನು ಹೇಳುವನು. ಈ ಪ್ರಕಾರ ಮಹಾ ಮನಸ್ಸುಳ್ಳ ಕೃಷ್ಣನು ಅರ್ಜುನನನ್ನು ಹಿಂದೆ ಹೇಳಿದಂತೆ ಉಪದೇಶಿಸಿ ತನ್ನ ಪೂರ್ವರೂಪವನ್ನು ತೋರಿಸಿದ ಹಾಗೆ ತಾನು ಶಾಂತರೂಪವುಳ್ಳವನಾಗಿ ಭಯಚಕಿತನಾದ ಈ ಅರ್ಜುನನನ್ನು ಸಮಾಧಾನ ಪಡಿಸಿದನು. ॥ ೫೦ ॥

ಈ ವಿಶ್ವರೂಪದ ಅಂತರ್ಧಾನದಿಂದ ಆಶ್ವಾಸನವುಳ್ಳವನಾಗಿದ್ದೆನೆಂದು ಅರ್ಜುನನು ಹೇಳುತ್ತಾನೆ. ಎಲೋ ಜನಾರ್ದನನೇ ಈಗ ಶಾಂತವಾದ ನಿನ್ನ ಈ ಮಾನುಷ ರೂಪವನ್ನು ನೋಡಿ ಪ್ರಸನ್ನಚಿತ್ತವುಳ್ಳವನಾಗಿ ಸ್ವಾಸ್ಥ್ಯ ಹೊಂದಿದವನಾಗಿರುವೆನು. ॥ ೫೧ ॥

ಈ ರೂಪವನ್ನು ಯಾಕೆ ತೋರಿಸಿದಿ ಎಂತ ಅಂದರೆ ಅದು ಅಂಥಾ ಮಾಹಾತ್ಮ್ಯೋಪೇತವಾದದ್ದೆಂದು ಮಾಹಾತ್ಮ್ಯವನ್ನು ಹೇಳುತ್ತಾನೆ. ನೀನು

॥ ಶ್ರೀಭಗವಾನುವಾಚ ॥

ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।
ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨ ॥

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।
ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩ ॥

ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥೫೪॥

---

ಯಾವ ನನ್ನ ರೂಪ ನೋಡಿದಿಯೋ ಕೆಲವರಿಗೆ ಸುಖದಿಂದಲೂ ಕೆಲವರಿಗೆ ದುಃಖದಿಂದಲೂ ಅವರವರ ಯೋಗ್ಯತಾನುಸಾರವಾಗಿ ನೋಡಲರ್ಹವಾದ ಈ ರೂಪವನ್ನು ನೋಡುವ ವಿಷಯದಲ್ಲಿ ದೇವತೆಗಳೂ ಕೂಡಾ ನಿತ್ಯದಲ್ಲಿಯೂ ಅಪೇಕ್ಷೆಯುಳ್ಳವರು. ಇಂಥಾ ರೂಪವನ್ನು ನಿನಗೆ ನಾನು ತೋರಿಸಿದೆನು. ಆದುದರಿಂದ ನೀನು ಶತ್ರು ವಧದಲ್ಲಿ ಕೇವಲ ನಿಮಿತ್ತನೂ ಎಂದು ತಿಳಿಸಲೋಸುಗ ಈ ಮಹಿಮೋಪೇತರೂಪವು ತೋರಿಸಲ್ಪಟ್ಟಿತು. ॥ ೫೨ ॥

ಈ ದರ್ಶನ ದುರ್ಲಭವೆಂದು ಮತ್ತೂ ಹೇಳುವನು. ನೀನು ಹೇಗೆ ನನ್ನನ್ನು ನೋಡಿದಿಯೋ, ಹಾಗೆ ನಾನು ಇದೇ ವಿಶ್ವರೂಪವುಳ್ಳವನಾಗಿ ವೇದ ತಪಸ್ಸು ದಾನ ಯಜ್ಞ ಇವುಗಳಿಂದ ನೋಡಲು ಶಕ್ಯನಲ್ಲ. ॥ ೫೩ ॥

ನಿನ್ನ ರೂಪವನ್ನು ಮತ್ಯಾವ ಸಾಧನದಿಂದ ನೋಡಬೇಕೆಂದರೆ ಎಲೋ ಶತ್ರುತಾಪಕನಾದ ಅರ್ಜುನನೇ ಏವಂವಿಧನಾದ ನಾನು ಇತರ ಅಸಾಧಾರಣ ಭಕ್ತಿಯಿಂದಲೇ ತಿಳಿಯಲಿಕ್ಕೂ ನೋಡಲಿಕ್ಕೂ ಸಾಯುಜ್ಯವನ್ನು ಹೊಂದಲಿಕ್ಕೂ ಶಕ್ಯನು. ॥ ೫೪ ॥

ಭಕ್ತಿಮಾತ್ರದಿಂದ ಇತರರನ್ನು ಪರಿತ್ಯಾಗ ಮಾಡಬೇಕೆಂದು ತಿಳಿಯುಬಾರದೆಂಬ ಅಭಿಪ್ರಾಯದಿಂದ ಹೇಳುತ್ತಾನೆ. ಎಲೋ ಅರ್ಜುನನೇ ನನ್ನ ಭಕ್ತನಾದ ಯಾವಾತನು ಸರ್ವಪ್ರಾಣಿಗಳಲ್ಲಿಯೂ ದ್ವೇಷರಹಿತನಾದಾಗ್ಯೂ ನಾನೇ ಸರ್ವೋತ್ತಮನೆಂದು ತಿಳಿದವನಾಗಿಯೂ ಫಲಕಾಮನಾ ಇಲ್ಲದೇನೇ

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ॥೫೫॥

॥ ಇತಿ ಏಕಾದಶೋಽಧ್ಯಾಯಃ ॥

---

ನನ್ನ ಪ್ರೀತಿಯು ಉದ್ದಿಶ್ಯ ಕರ್ಮ ಮಾಡುವನೋ ಅಂಥಾವನೇ ನನ್ನನ್ನು ಹೊಂದುತ್ತಾನೆ. ॥ ೫೫ ॥

# ದ್ವಾದಶೋಽಧ್ಯಾಯಃ

॥ ಅರ್ಜುನ ಉವಾಚ ॥

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ॥ ೧ ॥**

॥ ಶ್ರೀಭಗವಾನುವಾಚ ॥

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ॥೨॥**

ಪರಮಾತ್ಮನ ಮತ್ತು ಸಕಲಜಗನ್ಮಾತೃ ರಮಾದೇವಿಯ ಉಪಾಸನಗಳಲ್ಲಿ ಪರಮಾತ್ಮನ ಉಪಾಸನಾಕ್ಕೆ ಆಧಿಕ್ಯವನ್ನು ಹೇಳುವದಕ್ಕೋಸ್ಕರ ದೇವಿಯ ಉಪಾಸನೆಯನ್ನು ಈ ಅಧ್ಯಾಯದಲ್ಲಿ ಹೇಳುತ್ತಾನೆ. ಪರಮಾತ್ಮನ ಉಪಾಸನಾಧಿಕ್ಯದಲ್ಲಿ ತಾತ್ಪರ್ಯವಿರುವುದರಿಂದ ಭಗವನ್ಮಾಹಾತ್ಮ್ಯಪರ ಅಧ್ಯಾಯ ಷಟ್ಕದಲ್ಲಿ ಅಂತರ್ಭಾವ ಈ ಅಧ್ಯಾಯಕ್ಕೆ ಕೂಡುತ್ತದೆ. ತಮೇವಂ ವಿದ್ವಾನಮೃತ ಇಹ ಭವತಿ ಇತ್ಯಾದಿ ಶ್ರುತಿಗಳಲ್ಲಿ ಪರಮಾತ್ಮನ ಉಪಾಸಕರಿಗೆ ಮೋಕ್ಷ ಹೇಳಿದ ಹಾಗೆ "ಶ್ರಿಯಂ ವಸಾನಾ ಅಮೃತತ್ವಮಾಯನ್" ಶ್ರೀಉಪಾಸಕರಿಗೂ ಮೋಕ್ಷವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಹೀಗೆ ಪರಕೀಯರ ಸಂಶಯವನ್ನು ಇಟ್ಟುಕೊಂಡು ಅರ್ಜುನನು ತಾನು ತತ್ವ ತಿಳಿದವನಾದಾಗ್ಯೂ—ವಿಶೇಷ ತಿಳಿಯುವ ಇಚ್ಛೆಯಿಂದ ಕೇಳುತ್ತಾನೆ. ಯಾವ ಭಕ್ತರು ಸತತ ಧ್ಯಾನ ಕರ್ಮರೂಪಉಪಾಯವುಳ್ಳವರಾಗಿ ಮತ್ಕರ್ಮಕೃತ್ ಎಂತ ಹಿಂದೆ ಹೇಳಿದ ಪ್ರಕಾರದಿಂದ ನಿನ್ನನ್ನು ಉಪಾಸನಾ ಮಾಡುವರೋ. ಯಾರು ಅವ್ಯಕ್ತ ಶಬ್ದವಾಚ್ಯಳಾದ ಅಕ್ಷರನಾಮಕ ಚಿತ್ಪ್ರಕೃತಿಯನ್ನು (ರಮಾದೇವಿಯನ್ನು) ಭಕ್ತಿಯಿಂದ ಉಪಾಸನಾ ಮಾಡುವರೋ, ಇವರ ಮಧ್ಯೇಮೋಕ್ಷೋಪಾಯ ತಿಳಿದವರಲ್ಲಿ ಯಾರು ಉತ್ತಮರು. ॥ ೧ ॥

ಅವ್ಯಕ್ತೋಪಾಸನಾ ಮಾಡುವವರಿಂದ ನನ್ನ ಉಪಾಸನಾ ಮಾಡುವವರು ಶ್ರೇಷ್ಠರೆಂತ ಶ್ರೀಕೃಷ್ಣನು ಹೇಳುವನು. ಯಾರು ನನ್ನಲ್ಲಿ ಮನಸ್ಸಿಟ್ಟು ನಿತ್ಯದಲ್ಲೂ ಕರ್ಮಧ್ಯಾನರೂಪ ಉಪಾಯವುಳ್ಳವರಾಗಿ ಉತ್ತಮ

ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥ ೩ ॥
ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।
ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥ ೪ ॥
ಕ್ಲೇಶೋಽಧಿಕರತಸ್ತೇಷಾಮವ್ಯಕ್ತಾಸಕ್ತಚೇತಸಾಮ್ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥

---

ಶ್ರದ್ಧೆಯಿಂದ ಕೂಡಿದವರಾಗಿಯೂ ನನ್ನನ್ನು ಉಪಾಸಿಸುವರೋ, ಅವರು ಮೋಕ್ಷೋಪಾಯವುಳ್ಳವರಲ್ಲಿ ಉತ್ತಮರು. ॥ ೨ ॥

ರಮೋಪಾಸಕರಿಗೆ ಮೋಕ್ಷವಿದ್ದರೂ ಆ ಉಪಾಸನಾ ಶ್ರಮಸಾಧ್ಯ. ನನ್ನ ಉಪಾಸಕರಿಗೆ ಅಂಥಾ ಶ್ರಮವಿಲ್ಲ. ಆದಕಾರಣ ಮದುಪಾಸಕರು ಶ್ರೇಷ್ಠ ಎಂತ ಹೇಳಿದ್ದು ಎಂದು ಐದು ಶ್ಲೋಕಗಳಲ್ಲಿ ನಿರೂಪಿಸುತ್ತಾನೆ. ಯಾರು ಅವಿನಾಶಿಯಾದ ಅಪ್ರಸಿದ್ಧವಾದ್ರಿಂದ ಹೀಗೆ ಎಂದು ಹೇಳಲಶಕ್ಯವಾದ ಪ್ರಕೃತ್ಯಭಿಮಾನಿಯಾದ್ರಿಂದ ಅವ್ಯಕ್ತ ನಾಮಿಕೆಯಾದ ವ್ಯಾಪ್ತವಾದ ಗುಣಬಾಹುಲ್ಯವಿದ್ದ ಪ್ರಯುಕ್ತ ಅಚಿಂತ್ಯವು ಆದ ಆಕಾಶದಲ್ಲಿ ಅಭಿಮಾನಿಯಾದ ಕಾರಣ ಕೂಟಸ್ಥ ಎಂದು ಅನಿಸಿಕೊಳ್ಳುವ ಸ್ವಪದದಿಂದ ಪತನವಿಲ್ಲದ ಕಾರಣ ನಿರ್ವಿಕಾರವಾದ ಶ್ರೀತತ್ವವನ್ನು ಇಂದ್ರಿಯ ಸಮುದಾಯಗಳನ್ನು ವಿಷಯಗಳಿಂದ ಉಪಸಂಹರಿಸಿಕೊಂಡು ಷಷ್ಠಾಧ್ಯಾಯದಲ್ಲಿ ಹೇಳಿದಂತೆ ಸಮೀಚೀನ ಬುದ್ಧಿಯುಳ್ಳವರಾಗಿ ಸರ್ವ ಪ್ರಾಣಿಗಳ ಹಿತದಲ್ಲಾಸಕ್ತರಾಗಿ ಉಪಾಸನಾ ಮಾಡುತ್ತಾರೋ, ಅದರಲ್ಲೂ ಹರಿ ಅಂದರೆ ವಿಷ್ಣು ಭಕ್ತಿ ವಿಷ್ಣೂತ್ತಮತ್ವಜ್ಞಾನ ವಿಷ್ಣೂಪಾಸನಾ ಪೂರ್ವಕವಾಗಿ ಉಪಾಸನೆ ಮಾಡುವರೋ ಅವರು ನನ್ನನ್ನೇ ಹೊಂದುವರು. ॥ ೩, ೪ ॥

ಅವ್ಯಕ್ತೋಪಾಸಕರಿಗೂ ನಿನ್ನ ಪ್ರಾಪ್ತಿರೂಪ ಮೋಕ್ಷ ಸಿಗುವದಾದರೆ ನಿನ್ನ ಉಪಾಸಕರಿಗೆ ಹೇಗೆ ಉತ್ತಮತೆ ಎಂದರೆ ಹೇಳುವನು. ಅವ್ಯಕ್ತದಲ್ಲಿ ಚಿತ್ತವನ್ನಿಟ್ಟ ಆ ಉಪಾಸಕರಿಗೆ ದುಃಖವೂ ಅಧಿಕವಾದದ್ದು. ಹೇಗೆಂದರೆ ಅವ್ಯಕ್ತೋಪಾಸನಾದ್ವಾರಾ ಭಗವತ್ಪ್ರಾಪ್ತಿ ಮಾರ್ಗವು ಮನುಷ್ಯರಿಂದ ಬಹು ದುಃಖದಿಂದ ಹೊಂದಲ್ಪಡುತ್ತದೆ. ಇಂದ್ರಿಯಗಳನ್ನು ಅತಿನಿಯಮನ

ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನ ಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ॥ ೭ ॥
ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।
ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥

---

ಮಾಡುವುದು ಷಷ್ಠೋಕ್ತ ಪ್ರಕಾರ ಸರ್ವತ್ರ ಸಮಬುದ್ಧಿತ್ವವೂ ಸರ್ವ ಭೂತಹಿತಕರತ್ವವೂ ಸವಿಾಚೀನ ಆಚಾರಾದಿಗಳನ್ನು ಬಿಟ್ಟು ದೇವಿಯ ಪ್ರಸಾದವಾಗುವುದಿಲ್ಲ, ಅದಿಲ್ಲದೆ ಈಶ್ವರ ಪ್ರಸಾದವಿಲ್ಲ, ಆ ಪ್ರಸಾದವಿಲ್ಲದೆ ಮೋಕ್ಷವಿಲ್ಲ. ಆದಕಾರಣ ಈ ಮಾರ್ಗವು ಕ್ಲೇಶಸಾಧ್ಯವೆಂದು ಹೇಳಿದ್ದು ॥೫॥

ತನ್ನ ಉಪಾಸಕರಿಗೆ ಇಂತಹ ಕ್ಲೇಶವಿಲ್ಲವೆಂದು ಹೇಳುವನು. ಯಾರು ಸರ್ವ ಕರ್ಮಗಳನ್ನು ನನ್ನಲ್ಲರ್ಪಿಸಿ ನನ್ನನ್ನು ತ್ತಮನೆಂತ ತಿಳಿದುಕೊಂಡು ಅನನ್ಯ ಯೋಗದಿಂದ ಅಂದರೆ ಹೇಗೆ ಲಕ್ಷ್ಮೀ ಉಪಾಸಕರಿಗೆ ವಿಷ್ಣೂಪಾಸ ಸಾವೂ ಬೇಕೋ ಹಾಗೆ ನನ್ನ ಉಪಾಸಕರಿಗೆ ಲಕ್ಷ್ಮೀ ಉಪಾಸನೆ ಬೇಡ. ಹೀಗೆ ನನ್ನನ್ನು ಧ್ಯಾನಮಾಡುತ್ತಾ ಉಪಾಸನಾ ಮಾಡುವರೋ, ಇಲ್ಲಿ. ಹಿಂದಿನಂತೆ ಪರ್ಯುಪಾಸನಾ ಅಲ್ಲ. ನನ್ನಲ್ಲೇ ಆವಿಷ್ಟ ಚೇತಸ್ಸುಳ್ಳವ ರನ್ನು ಈ ಮೃತ್ಯು ಎಂಬ ಸಂಸಾರ ಸಾಗರದಿಂದ ಶೀಘ್ರದಲ್ಲಿಯೇ ಉದ್ಧರಿಸು ವವನಾಗುವೆನು. ಈ ಪರಮಾತ್ಮೋಪಾಸಕರಿಗೆ ಅತಿ ಇಂದ್ರಿಯ ನಿಯಮ ಅತಿ ಆಚಾರ ಇಲ್ಲದಿದ್ದರೂ ಅವರಿಗೆ ಬೇಕಾದ್ದನ್ನು ತಾನೇ ದಯಪಾಲಿಸಿ ಶೀಘ್ರದಲ್ಲಿ ಮುಕ್ತಿ ಕೊಡುವ ಕಾರಣ ಈ ಉಪಾಸಕರಿಗೆ ಉತ್ತಮತಾ ಇಲ್ಲಿ ನ ಚಿರಾತ್ ಎಂತ ಹೇಳಿದ್ರಿಂದ ಲಕ್ಷ್ಮೀ ಉಪಾಸಕರಿಗೆ ಭಗವತ್ಪ್ರಾಪ್ತಿ ವಿಲಂಬದಿಂದೆಂತಲೂ ಸೂಚಿಸಿದಂತಾಯ್ತು. ॥ ೬, ೭ ॥

ಹಿಂದೆ ಹೇಳಿದ ರೀತ್ಯಾ ಮದುಪಾಸನಾವೇ ಶ್ರೇಷ್ಠವಾದ್ರಿಂದ ನನ್ನಲ್ಲೇ ಮನಸ್ಸಿಡು ಅಂದರೆ ನನ್ನ ಉಪಾಸನಾ ಮಾಡು. ನನ್ನ ಜ್ಞಾನ ಸಂಪಾದಿ ಸಿಕೊ, ತದನಂತರ ನನ್ನಲ್ಲಿಯೇ ವಾಸ ಮಾಡುತ್ತಿ, ಅಂದರೆ ನಿರ್ದುಃಖಾ ನಂದಾನುಭವವನ್ನು ಹೊಂದುತ್ತಿ. ॥ ೮ ॥

ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।
ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥ ೯ ॥
ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।
ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ ॥ ೧೦ ॥
ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।
ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥
ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ ।
ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ॥ ೧೨ ॥
ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥

---

ನನ್ನಲ್ಲಿ ಸ್ಥಿರವಾಗಿ ಮನಸ್ಸಿಡಲು ಅಸಮರ್ಥನಾಗಿದ್ದರೆ ಎಲೋ ಧನಂಜಯನೇ ಪುನಃ ಪುನರಭ್ಯಾಸರೂಪ ಉಪಾಯದಿಂದ ನನ್ನನ್ನು ತಿಳಿಯಲಿಕ್ಕಾದರೂ ಇಚ್ಛಿಸು. ॥ ೯ ॥

ಇಂಥಾ ಅಭ್ಯಾಸದಲ್ಲೂ ಅಸಮರ್ಥನಾದರೆ ನನ್ನ ಉದ್ದಿಶ್ಯದಿಂದ ಸಕಲ ಕರ್ಮವನ್ನಾದರೂ ಪ್ರಧಾನವಾಗಿ ಇಟ್ಟುಕೊಳ್ಳುವವನಾಗು. ನನ್ನ ಉದ್ದಿಶ್ಯ ಸರ್ವ ಕರ್ಮಗಳನ್ನು ಮಾಡಿದರೂ ಸಿದ್ಧಿಯನ್ನು ಹೊಂದುವಿ. ಹೀಗೆ ಸರ್ವ ಕರ್ಮಗಳನ್ನು ನನ್ನ ಉದ್ದಿಶ್ಯ ಮಾಡಲು ಅಶಕ್ತನಾದರೆ ಯಾವ ದೇವರ ಉದ್ದಿಶ್ಯವಾದರೂ ಕರ್ಮ ಮಾಡಿ ಅಂತ್ಯದಲ್ಲಿ ನನಗರ್ಪಿಸುವ ರೂಪ ಉಪಾಯವನ್ನಾದರೂ ಹೊಂದು. ಇಂಥಾ ಮದ್ಯೋಗದಿಂದ ಸರ್ವ ಕರ್ಮಗಳ ಫಲತಾಗವನ್ನು ಮಾಡು. ॥ ೧೦, ೧೧ ॥

ಉಕ್ತಾರ್ಥವನ್ನು ಸಮರ್ಥನ ಮಾಡುತ್ತಾನೆ. ಉಕ್ತರೂಪ ಅಭ್ಯಾಸಕ್ಕಿಂತ ಜ್ಞಾನವು ಶ್ರೇಷ್ಠವಾದದ್ದು. ಜ್ಞಾನದಿಂದ ತತ್ಪೂರ್ವಕವಾದ ಧ್ಯಾನವು ಶ್ರೇಷ್ಠವಾದದ್ದು. ಅದಕ್ಕಿಂತ ಫಲಕಾಮನಾತ್ಯಾಗ ಪೂರ್ವಕ ಧ್ಯಾನವು ಅಂದರೆ ನಿಷ್ಕಾಮಧ್ಯಾನವು ಶ್ರೇಷ್ಠವಾದದ್ದು. ಅದರಿಂದ ಅಪರೋಕ್ಷಜ್ಞಾನವು ಶ್ರೇಷ್ಠವಾದದ್ದು. ತದನಂತರವೇ ಮೋಕ್ಷವು. ॥ ೧೨ ॥

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮೇ ಭಕ್ತಃ ಸ ಮೇ ಪ್ರಿಯಃ**
**ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ॥ ೧೫ ॥**
**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥**

---

ಯೋತು ಸರ್ವಾಣಿ ಕರ್ಮಾಣಿ ಎಂತ ಹಿಂದೆ ಹೇಳಿದ್ದನ್ನೇ ವಿಶದೀಕರಿಸುವನು. ಸರ್ವ ಭೂತಗಳಿಗೂ ಅಪ್ರಿಯವನ್ನು ಮಾಡದಿರುವವನು. ದುಃಖ ಕಾರಣವನ್ನು ತೋರಿಸಿ ಅದರಿಂದ ರಕ್ಷಿಸುವವನು. (ಮೈತ್ರಃ) ಕೃಪಾ ಉಳ್ಳವನೂ ಸ್ವಾತಂತ್ರ್ಯಬುದ್ಧಿಶೂನ್ಯನೂ ಸ್ವಗುಣಾಭಿಮಾನರೂಪ ಮೋಹ ಶೂನ್ಯನೂ ಹೆಯತ್ವೇನ ದುಃಖಸಮಾನ ವೈಷಯಿಕ ಸುಖ ಉಳ್ಳವನೂ ಸಹನಶೀಲನೂ, ಅಲಂಬುದ್ಧಿಯುಳ್ಳವನೂ, ಕರ್ಮಧ್ಯಾನರೂಪ ಜ್ಞಾನೋಪಾಯವುಳ್ಳವನೂ, ವಿಷಯಗಳಿಂದ ತಿರುಗಿಸಿದ ಮನಸ್ಸುಳ್ಳವನೂ, ಶಂಕಾ ಶೂನ್ಯವಾದ ತತ್ವನಿಶ್ಚಯ ಉಳ್ಳವನೂ, ನನ್ನಲ್ಲೇ ಸಮರ್ಪಿಸಿದ ಮನಸ್ಸು, ಬುದ್ಧಿಯುಳ್ಳವನೂ, ಇಂಥಾ ಯಾವ ನನ್ನ ಭಕ್ತನೋ ಅಂತಹವನು ನನಗೆ ಪ್ರಿಯನು. ॥ ೧೩, ೧೪ ॥

ಕಿಂಚ ಯಾರಿಂದ ಲೋಕರು ಭಯ ಹೊಂದುವದಿಲ್ಲವೋ, ಅಂದರೆ ಯಾರು ಇತರರಿಗೆ ಭಯಜನಕರಲ್ಲವೋ, ಯಾರು ಇತರರಿಂದ ಭಯವನ್ನು ಹೊಂದುವದಿಲ್ಲವೋ, ಸರ್ವವೂ ಈಶಾಧೀನವಾಗಿ ತಿಳಿದು ತಾನು ಯಾತರಿಂದಲೂ ಉದ್ವಿಗ್ನನಾಗುವದಿಲ್ಲವೋ, ಹರ್ಷ, ರೋಷ, ಭಯ, ಮನಃಕಂಪ ಇವುಗಳಿಂದ ಯಾರು ಶೂನ್ಯನೋ, ಅಂತಹ ಭಕ್ತನು ನನಗೆ ಪ್ರಿಯನು. ॥ ೧೫ ॥

ಭಗವತ್ಪ್ರೀತಿ ಹೊರತು ಅನ್ಯತ್ರ ಅಪೇಕ್ಷಾರಹಿತನೂ ಬಾಹ್ಯಾಂತರ ಶುದ್ಧಿ ಉಳ್ಳವನೂ, ಭಗವತ್ಕರ್ಮ ಮಾಡುವುದರಲ್ಲಿ ಸಮರ್ಥನೂ, ಉಪಕಾರಾಪಕಾರಗಳಲ್ಲಿ ಉದಾಸೀನನೂ, ಪರರು ಅಪಕಾರ ಮಾಡಿದರೂ ಮನಃಕ್ಲೇಶ ಇಲ್ಲದವನೂ, ಅವೈಷ್ಣವ ಸರ್ವ ಕರ್ಮಗಳಾರಂಭ ಪರಿತ್ಯಾಗಿಯೂ,

ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।
ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ ॥ ೧೭ ॥

ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।
ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥ ೧೮ ॥

ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನಕೇನಚಿತ್ ।
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥ ೧೯ ॥

---

ಸರ್ವ ಕರ್ಮಗಳಲ್ಲಿ ಅಭಿಮಾನವಿಲ್ಲದವನೂ, ಅದರ ಫಲಾಶಾ ಇಲ್ಲದವನೂ, ಸರ್ವವನ್ನೂ ಪರಮಾತ್ಮನಲ್ಲರ್ಪಣರೂಪ ತ್ಯಾಗ ಉಳ್ಳವನೂ, ಇಂತಹ ಗುಣ ಯಾರಲ್ಲುಂಟೋ ಅಂತಹ ಭಕ್ತನು ನನ್ನ ಪ್ರಿಯನು. ॥ ೧೬ ॥

ಉಕ್ತಾರ್ಥವನ್ನೇ ವಿಶದೀಕರಿಸುತ್ತಾನೆ. ಯಾರು ಯಾವಾಗಲೂ ಹರ್ಷವನ್ನಾಗಲೀ ದ್ವೇಷವನ್ನಾಗಲೀ ಹೊಂದುವುದಿಲ್ಲವೋ ದುಃಖಿಸುವುದಿಲ್ಲವೋ, ಯಾವದನ್ನು ಅಪೇಕ್ಷಿಸುವುದೂ ಇಲ್ಲವೋ, ಜ್ಞಾನ ಭಕ್ತಿ ವಿರಕ್ತಿಗಳನ್ನು ಬಿಟ್ಟು ಶುಭಾಶುಭ ಪರಿತ್ಯಾಗ ಮಾಡಿದವನು ಭಕ್ತನು ನನ್ನ ಪ್ರಿಯನು. ॥ ೧೭ ॥

ಯಾರು ಶತ್ರುವಿನಲ್ಲಾಗಲೀ ಮಿತ್ರನಲ್ಲಾಗಲೀ ಸಮನೋ, ಹಾಗೆ ಮಾನದಲ್ಲಾಗಲೀ ಅಪಮಾನದಲ್ಲಾಗಲೀ ಸಮನೋ, ಶೀತ ಉಷ್ಣಾದಿಗಳಿಂದಾಗುವ ಸುಖದುಃಖಗಳಲ್ಲಿ ಸಮನೋ, ಫಲಸ್ನೇಹ ರಹಿತನೋ, ಹೇಯತ್ವೇನ ನಿಂದಾಸಮಾನ ಸ್ತುತಿಯುಳ್ಳವನೋ, ಅಧಿಕ ಭಾಷಣ ಶೂನ್ಯನೋ ದೈವಾತ್ಪ್ರಾಪ್ತವಾದ್ದರಿಂದಲೆ ಸಂತುಷ್ಟನೋ, ಏಕತ್ರ ನಿಯತವಾಸ ರಹಿತನೋ, ಕುತರ್ಕಗಳಿಂದ ಚಲಿತವಾಗದ ಮನಸ್ಸುಳ್ಳವನೋ, ಇಂತಹ ನನ್ನ ಭಕ್ತನೇ ಪ್ರಿಯನು. ॥ ೧೮, ೧೯ ॥

ಹಿಂದೆ ಹೇಳಿದ ಎಲ್ಲಾ ಧರ್ಮಗಳೂ ಕೂಡಿ ಎಲ್ಲಿ ಅವೆಯೊ ಅಂತಹವನು ನನಗೆ ಪ್ರಿಯನೆಂಬ ಅಭಿಪ್ರಾಯದಿಂದ ಉಕ್ತವಾದ ಪ್ರಮೇಯವನ್ನು ಒಟ್ಟು ಕೂಡಿಸಿ ಹೇಳುತ್ತಾನೆ.

ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥೨೦॥

॥ ಇತಿ ದ್ವಾದಶೋಽಧ್ಯಾಯಃ ॥

---

ಸಕಲಧಾರಕನಾದ ಪರಮಾತ್ಮನ ಉಪಾಸನಕ್ಕೆ ಅಂಗವಾದ ಪ್ರಯುಕ್ತ ಧಾರ್ಮ್ಯವೋ, ಅಮೃತಶಬ್ಧವಾಚ್ಯ ಮುಕ್ತಿಗೆ ಸಾಧನವಾದ್ರಿಂದ ಅಮೃತವೆಂದು ಹೇಳಿಸಿಕೊಳ್ಳುವ ನಾನು ಹಿಂದೆ ಹೇಳಿದ ಇವುಗಳನ್ನು ಹೇಳಿದಂತೆಯೇ ಒಳ್ಳೆ ಆಸ್ತಿಕ್ಯ ಬುದ್ಧಿಯುಳ್ಳ ನನ್ನಲ್ಲಿ ಸರ್ವೋತ್ತಮತ್ವ ಜ್ಞಾನದಿಂದ ಯಾವ ಭಕ್ತರು ಸರಿಯಾಗಿ ಅನುಷ್ಠಾನ ಮಾಡುವರೋ ಅಂತಹವರು ನನಗತ್ಯಂತ ಪ್ರಿಯರು. ॥ ೨೦ ॥

# ತ್ರಯೋದಶೋಽಧ್ಯಾಯಃ

॥ ಅರ್ಜುನ ಉವಾಚ ॥

ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ ।
ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ॥ ೧ ॥

॥ ಶ್ರೀಭಗವಾನುವಾಚ ॥

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೨ ॥

---

ದ್ವಿತೀಯಾಧ್ಯಾಯದಲ್ಲಿ ಹೇಳಿದ ಜೀವಸ್ವರೂಪವೂ ಪ್ರಥಮ ಷಟ್ಕದಲ್ಲಿ ಹೇಳಿದ ಜ್ಞಾನಸಾಧನವೂ ಸಪ್ತಮದಲ್ಲಿ ಹೇಳಿದ ಭಗವದಾವಾಸಸ್ಥಾನವೂ ದ್ವಿತೀಯ ಷಟ್ಕದಲ್ಲಿ ಹೇಳಿದ ಭಗವತ್ಸರೂಪವೂ ಅಲ್ಲಲ್ಲಿ ಹೇಳಿದ ಇಷ್ಟನ್ನು ಬುದ್ಧಿಗತವಾಗುವ ಉದ್ದಿಶ್ಯ ಏಕೀಕರಿಸಿ ಸಂಕಲಯ್ಯ ವಿಶದೀಕರಿಸಿ ಪ್ರಶ್ನ ಪೂರ್ವಕವಾಗಿ ನಿರೂಪಿಸುವನು. ಅರ್ಜುನನು ಪ್ರಶ್ನೆ ಮಾಡುವನು. ಪ್ರಕೃತಿ ಪುರುಷ, ಕ್ಷೇತ್ರಕ್ಷೇತ್ರಜ್ಞ ಜ್ಞಾನ, ಜ್ಞೇಯ ಇದಿಷ್ಟನ್ನು ಬ್ರಹ್ಮರುದ್ರಪ್ರವ ರ್ತಕನಾದ ಕೃಷ್ಣನೇ ನಾನು ತಿಳಿಯಲು ಇಚ್ಛಿಸುತ್ತೇನೆ. ॥ ೧ ॥

ಶ್ರೀಕೃಷ್ಣನು ಉತ್ತರಿಸುತ್ತಾನೆ, ಎಲೋ ಕುಂತೀಪುತ್ರನಾದ ಅರ್ಜುನನೇ ಉತ್ತರತ್ರ ಹೇಳುವ ಈ ಶರೀರಶಬ್ದವಾಚ್ಯವಾದ ವಸ್ತು ಪರಮಾತ್ಮನ ಆವಾಸಸ್ಥಾನವಾದುದರಿಂದ ಕ್ಷೇತ್ರವೆಂದೆನಿಸಿಕೊಳ್ಳುತ್ತದೆ. ಇದನ್ನು ಯಾರು ಹಿಂದೆ ಹೇಳಿದ ರೀತ್ಯಾ ಕ್ಷೇತ್ರಶಬ್ದವಾಚ್ಯವೆಂದು ತಿಳಿಯುವರೋ ಆತನನ್ನು ಜ್ಞಾನಿಗಳು ಕ್ಷೇತ್ರಜ್ಞ ಎಂತ ಹೇಳುವರು. ಭಗವತ್ಸ್ವರೂಪ ಜ್ಞಾನಕ್ಕೇನೇ ಮುಕ್ತಿಹೇತುತ್ವೇನ ಪೂರ್ವದಲ್ಲಿ ಪ್ರಸಕ್ತಿ ಇದ್ದು ಕ್ಷೇತ್ರ ಸ್ವರೂಪವನ್ನು ಇಲ್ಲಿ ಹೇಳಿದ್ದು ಅಸಂಗತವೆಂದು ಇಲ್ಲಿ ಶಂಕಾ ಮಾಡ ಬಾರದು. ಕ್ಷೇತ್ರಜ್ಞತ್ವಾದಿ ವಿಶಿಷ್ಟತ್ವೇನ ಭಗವಜ್ಜ್ಞಾನ ಬರಬೇಕಾದರೆ ಕ್ಷೇತ್ರಸ್ವರೂಪವನ್ನು ಪರಮಾತ್ಮನಿಗೆ ಕ್ಷೇತ್ರಜ್ಞತ್ವವನ್ನು ಹೇಳುವದು ಅಗತ್ಯ ವಾದ್ದರಿಂದ ಇಲ್ಲಿ ಹಾಗೆ ಹೇಳಿರುವರು; ॥ ೨ ॥

ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।
ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ೩
ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।
ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೪ ॥
ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।
ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತಂ ॥ ೫ ॥
ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।
ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ ೬ ॥

---

ಕ್ಷೇತ್ರಜ್ಞಾನವಿರುವ ಕಾರಣ ಕ್ಷೇತ್ರಜ್ಞ ಶಬ್ದವಾಚ್ಯನು ಜೀವನಾಗುವನೋ ಎಂದರೆ ಇಲ್ಲನೆಂದು ಹೇಳುತ್ತಾನೆ. ಎಲೋ ಭಾರತನೇ ಸರ್ವಕ್ಷೇತ್ರಗಳಲ್ಲಿಯೂ (ಮುಂದೆ ಹೇಳುವ ಅವ್ಯಕ್ತಾದಿಗಳಲ್ಲಿ) ಕ್ಷೇತ್ರಜ್ಞನಾಗಿ ನನ್ನನ್ನೇ ತಿಳಿ. ಈ ಕ್ಷೇತ್ರಕ್ಷೇತ್ರಜ್ಞಗಳ ಏನು ಜ್ಞಾನವಿದೆಯೋ, ಅದೇ ಸಮೀಚೀನ ಜ್ಞಾನವೆಂದು ನನಗೆ ಸಮ್ಮತ, ಪರಮಾತ್ಮನ ಆವಾಸಸ್ಥಾನವಾಗಿ ಹೇಳಿದ ಆ ಕ್ಷೇತ್ರವೂ ಯತ್ಸ್ವರೂಪವೋ ಯಾವ ಪ್ರಕಾರವುಳ್ಳದ್ದೋ ಎಂತಹ ಪರಿಣಾಮ ಉಳ್ಳದ್ದೋ, ಯಾರಿಂದ ಪ್ರೇರಿತವಾಗಿ ಗತ್ಯಾದಿ ವ್ಯಾಪಾರವುಳ್ಳದಾಗುತ್ತದೋ, ಅದನ್ನು ಅದರ ಪ್ರವರ್ತಕನು ಯಾರೋ ಅವನು ಎಂಥಾ ಸಾಮರ್ಥ್ಯವುಳ್ಳವನೋ, ಅದನ್ನು ನನ್ನ ಸಕಾಶದಿಂದ ಸಂಕ್ಷೇಪವಾಗಿ ಕೇಳು.
॥ ೪ ॥

ತಾನು ಹೇಳುವ ಪ್ರಮೇಯದಲ್ಲಿ ವಿಶ್ವಾಸ ಹುಟ್ಟುವುದಕ್ಕೋಸ್ಕರ ಪ್ರಮೇಯವನ್ನು ಪ್ರಾಮಾಣಿಕವೆಂತ ಹೇಳುತ್ತಾನೆ. ಆ ಕ್ಷೇತ್ರಾದಿ ಸ್ವರೂಪವು ಋಷಿಗಳಿಂದ ಬಹುಪ್ರಕಾರದಿಂದ ಹೇಳಲ್ಪಟ್ಟದೆ. ಪ್ರತಿಯೊಂದು ವೇದಗಳಿಂದಲೂ ಉಕ್ತವಾಗಿದೆ. ಯುಕ್ತ್ಯುಪೇತ ಬ್ರಹ್ಮಸೂತ್ರಪದಗಳಿಂದ ನಿಶ್ಚಿತವಾಗಿದೆ. ॥ ೫ ॥

ಪ್ರತಿಜ್ಞಾತ ಕ್ಷೇತ್ರಸ್ವರೂಪವನ್ನು ಇಲ್ಲಿ ಹೇಳುತ್ತಾನೆ. ಪೃಥಿವ್ಯಪ್ತೇಜಸ್ಸು ವಾಯು ಆಕಾಶಾತ್ಮಕ ಪಂಚಮಹಾಭೂತಗಳೂ ಮಹತ್ತತ್ವ ಅಹಂಕಾರತತ್ವಗಳೂ ಅಂತಃಕರಣ ತ್ರಿಗುಣಾತ್ಮಕ ಪ್ರಧಾನಜ್ಞಾನಕರ್ಮಭೇದೇನ ಏಕಾ

ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।
ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ॥ ೭ ॥
ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।
ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೮ ॥
ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ॥ ೯ ॥
ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೧೦ ॥

---

ದಶೇಂದ್ರಿಯಗಳು. ರೂಪ ರಸ ಗಂಧ ಸ್ಪರ್ಶ ಶಬ್ದರೂಪ ಪಂಚೇಂದ್ರಿಯ ವಿಷಯಗಳೂ ಇವು ಕ್ಷೇತ್ರದ ಸ್ವರೂಪ. ಇಚ್ಛಾ ದ್ವೇಷ ಸುಖದುಃಖ ದೇಹ ಚೇತೋವ್ಯಾಪ್ತಿ ಧೈರ್ಯ ಇದು ಇಷ್ಟು ಕ್ಷೇತ್ರದ ವಿಕಾರ. ಹೀಗೆ ಕ್ಷೇತ್ರ ಸ್ವರೂಪ ತದ್ವಿಕಾರ ಹೇಳಲ್ಪಟ್ಟಿತು. ॥ ೭ ॥

ಮುಂದೆ ಜ್ಞೇಯಸ್ವರೂಪವನ್ನು ಹೇಳುವ ಉದ್ದಿಶ್ಯ ಅದರ ಜ್ಞಾನ ವೆಂಬುದು ಕೇವಲ ಶ್ರವಣಮಾತ್ರದಿಂದ ಸಾಧ್ಯವಾಗದಿರುವ ಕಾರಣ ಜ್ಞಾನ ಸಾಧನವನ್ನು ಹೇಳುತ್ತಾನೆ. ಆತ್ಮಶ್ಲಾಘನಾಮಾಡದಿರುವುದು ಅಹಿಂಸೆಯೂ ಸಹನೆಯೂ ಋಜುತ್ವವೂ ಜ್ಞಾನಿಸೇವೆಯೂ ತನ್ನಲ್ಲಿ ಅಲ್ಪತ್ವ ತಿಳಕೊಂಡು ಮಹತ್ವತೋರಿಸದಿರುವುದು ಬಾಹ್ಯಾಂತರ ಶುದ್ಧಿಯು ಏನು ಭಯಬಂದರೂ ಸ್ವಧರ್ಮದಿಂದ ಚಲಿಸದಿರುವುದು ವಿಶೇಷತಃ ಮನೋನಿಯಮನವೂ ಶಬ್ದಾ ದೀಂದ್ರಿಯವಿಷಯಗಳಲ್ಲಿ ರಾಗವಿಲ್ಲದಿರುವುದು ಆತ್ಮಗುಣವಿಷಯಮೋಹಾ ಭಾವವೂ ಜನ್ಮಮೃತ್ಯುಜರಾವ್ಯಾಧಿಗಳಲ್ಲಿ ದುಃಖದೋಷಜ್ಞಾನವೂ (ಅಂದರೆ ಪ್ರತಿಕ್ಷಣದಲ್ಲಿ ಸ್ಮರಣವು) ಪುತ್ರದಾರಗೃಹಾದಿಗಳಲ್ಲಿ ಅತಿಸ್ನೇಹ ಇಲ್ಲದಿರೋ ಣವೂ (ಅನಭಿಷ್ವಂಗಃ) ಪಕ್ಷಸ್ನೇಹಇಲ್ಲದಿರೋಣ ಇಷ್ಟಾನಿಷ್ಟಗಳ ಪ್ರಾಪ್ತಿ ಯಲ್ಲಿ ಯಾವಾಗಲೂ ಹರ್ಷವಿಷಾದರಹಿತನಾಗಿರೋಣವೂ ರಮಾಬ್ರಹ್ಮಾದಿ ಗಳಲ್ಲಿ ಇಲ್ಲದಿರುವ ಮತ್ಸಂಬಂಧಿ ಭಕ್ತಿಯೂ ಜನಸಮ್ಮರ್ದವಿಲ್ಲದ ಶುದ್ಧ ದೇಶದಲ್ಲಿರೋಣವೂ ಜನರ ಸಮುದಾಯದಲ್ಲಿ ಸ್ನೇಹಾಭಾವವೂ ಆತ್ಮವಿಷ

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೧ ॥**
**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥೧೨॥**
**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೩ ॥**
**ಸರ್ವತಃಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೪ ॥**

---

ಯಳ ಜ್ಞಾನದಲ್ಲಿ ನಿಯಮವೂ ಅಪರೋಕ್ಷಜ್ಞಾನಾರ್ಥವಾಗಿ ಶಾಸ್ತ್ರವಿಚಾರ ಮಾಡುವುದು ಹಿಂದೆ ಹೇಳಿದ 20 ಧರ್ಮ ಸಮುದಾಯವೇ ಜ್ಞಾನಸಾಧನ. ಇದಕ್ಕಿಂತ ಬೇರೆಯಾಗಿರುವವುಗಳು ಅಜ್ಞಾನಗಳು. ಜ್ಞಾನಸಾಧನವಲ್ಲ. ॥ ೧೨ ॥

ಈ ವರೆಗೆ ಜ್ಞಾನಸಾಧನವನ್ನು ಹೇಳಿ ಪ್ರತಿಜ್ಞಾಪೂರ್ವಕವಾಗಿ ಹಿಂದೆ (ಸ ಚ ಯೋ ಯತ್ಪ್ರಭಾವಶ್ಚೇತಿ) ಎಂತ ಹೇಳಿದ ಪ್ರವರ್ತಕನ ಶಕ್ತಿಯನ್ನು ಹೇಳುತ್ತಾನೆ. ಜ್ಞೇಯವೆಂಬುವುದು ಏನದೋ ಅದನ್ನು ಹೇಳುವೆನು. ಯಾವ ಜ್ಞೇಯ ತಿಳಿದುಕೊಂಡು ಮೋಕ್ಷ ಹೊಂದುವನೋ ಜ್ಞೇಯವೆಂದರೆ ಪರಬ್ರಹ್ಮನೇ. ಅದು ತಾನೇ ಎಂತ ಮುಂಚೆ ಸಿದ್ಧವಾದುದರಿಂದ ಇಲ್ಲಿ ಹೇಳಲಿಲ್ಲ. ನಾಮನಿರ್ದೇಶ ಮಾಡಿದುದರಿಂದಲೇ ಸ್ವರೂಪ ಹೇಳಿದಂತಾಯಿತು. ಅದು ಎಂತಹದು ಎಂದರೆ ಉತ್ಪತ್ತಿಯುಳ್ಳ ದೇಹೇಂದ್ರಿಯಾದಿ ರಹಿತವಾದದ್ದು. ಸದಸಚ್ಛಬ್ದವಾಚ್ಯವಾದ ಕಾರ್ಯಕಾರಣ ಭಾವವನ್ನು ಹೊಂದಿದ ವ್ಯಕ್ತಾವ್ಯಕ್ತ ವಿಲಕ್ಷಣನು. ॥ ೧೩ ॥

ಹಿಂದೆ ಹೇಳಿದ ಆ ಪರಬ್ರಹ್ಮನು ಸರ್ವಾವಯವಗಳಲ್ಲಿಯೂ ಕರಚರಣಾದಿ ವಿಶಿಷ್ಟನು. ಹೀಗೆ ಸರ್ವಾವಯವಗಳಲ್ಲಿಯೂ ಚಕ್ಷುಸ್ಸು ಮುಖಾದಿಗಳುಳ್ಳವನು. ಹೀಗೆ ಸರ್ವಾವಯವಗಳಲ್ಲಿಯೂ ಶ್ರವಣೇಂದ್ರಿಯ ಉಳ್ಳವನು. ಜಗತ್ತಿನ ಸರ್ವವಸ್ತುಗಳನ್ನು ವ್ಯಾಪಿಸಿಕೊಂಡಿರುತ್ತಾನೆ ಬ್ರಹ್ಮನ ಪ್ರತಿಯೊಂದರ ಯವಗಳಿಗೂ ಸರ್ವಾವಯವಗಳ ಶಕ್ತಿಯೂ ಸಕಲೇಂದ್ರಿಯ

ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।
ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೫ ॥
ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।
ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್॥೧೬॥
ಅವಿಭಕ್ತಂ ವಿಭಕ್ತೇಷು ವಿಭಕ್ತಮಿವ ಚ ಸ್ಥಿತಮ್ ।
ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೭ ॥
ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ೧೮

---

ಶಕ್ತಿಯೂ ಇರುವ ಕಾರಣ ಪ್ರತಿಯೊಂದವಯವಗಳಲ್ಲಿಯೂ ಪಾಣಿಪಾದಾದಿಗಳುಂಟೆಂದು ಹೇಳಿದ್ದಾಗಿರುತ್ತದೆ. ಇದು ಶುಕ್ಲ ಕೃಷ್ಣ ಕೇಶಾತ್ಮಕರಾದ ರಾಮಕೃಷ್ಣರಲ್ಲಿ ಪಾಣಿಪಾದಾದಿ ಸರ್ವ ಶಕ್ತಿಗಳು ದೃಷ್ಟವಾದದ್ರಿಂದ ಅಸಂಭಾವಿತವಲ್ಲವು. ॥ ೧೪ ॥

ಆ ಪರಬ್ರಹ್ಮನು ಪ್ರಾಕೃತ ಸಕಲೇಂದ್ರಿಯ ರಹಿತನಾಗಿಯೂ ಸರ್ವ ಇಂದ್ರಿಯ ಶಬ್ದಾದಿಗುಣಗಳನ್ನು ಸ್ವಯಂ ತಿಳಿದವನೂ, ತಿಳಿಸುವವನೂ, ಪುಣ್ಯಪಾಪಸಂಬಧ ರಹಿತನೂ, ಸರ್ವ ನಾಶಕನೂ, ಸತ್ವಾದಿಗುಣಶೂನ್ಯನೂ, ಶುಭಗುಣಗಣಭೋಕ್ತನೂ, ಸರ್ವ ಪ್ರಾಣಿಗಳ ಬಹಿರಂತಃಪ್ರದೇಶದಲ್ಲಿರುವವನೂ, ವಿಕಾರರಹಿತನೂ, ಸರ್ವತ್ರ ಸಂಚಾರಿಯೂ, ಅತಿಸೂಕ್ಷ್ಮನಾದ ಹ್ರಯುಕ್ತ ಇಂದ್ರಿಯಾಅಗ್ರಾಹ್ಯನೂ ವ್ಯಾಪ್ತನಾಗಿದ್ದುದರಿಂದ ದೂರದಲ್ಲೂ ಸಮೀಪದಲ್ಲೂ ಇದ್ದಾನೆ. ॥ ೧೬ ॥

ನಾನಾ ವಿಧಗಳಾದ ಪ್ರಾಣಿಗಳಲ್ಲಿ ತಾನು ಅವಿಭಕ್ತವಾಗಿದ್ದರೂ ಅಜ್ಞರ ಪ್ರತೀತಿಗೆ ವಿಭಕ್ತವಾಗಿ ತೋರುವುದೂ ಪ್ರಾಣಿಗಳ ರಕ್ಷಕವೂ ಸೃಷ್ಟಿಕರ್ತೃ ಸಂಹಾರ ಕರ್ತೃ ಆದ ಆ ಬ್ರಹ್ಮಜ್ಞೇಯವು. ॥ ೧೭ ॥

ಸೂರ್ಯಾದಿ ಪ್ರಕಾಶಗಳಿಗೆ ಪ್ರಕಾಶಶಕ್ತಿಯನ್ನು ಕೊಡುವುದೂ, ಮೃತ್ಯುವಿನಿಂದ ಅತೀತವಾದದ್ದೂ, ಜ್ಞಾನರೂಪವೂ, ಸ್ವಪ್ರಕಾಶವೂ, ಅಪರೋಕ್ಷಜ್ಞಾನಪ್ರಾಪ್ಯವೂ, ಸರ್ವರ ಹೃದಯದಲ್ಲಿಯೂ, ವಿಶೇಷೇಣ ಇರುವುದೂ ಆಗಿರುತ್ತದೆ. ॥ ೧೮ ॥

ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೯ ॥
ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೨೦ ॥
ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।
ಪುರುಷಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥೨೧॥

---

ಹೀಗೆ ಮಹಾಭೂತಾನಿತ್ಯಾದಿಯಿಂದ ಕ್ಷೇತ್ರವನ್ನೂ ಅಮಾನಿತ್ವ ಮಿತ್ಯಾದಿಯಿಂದ ಜ್ಞಾನಸಾಧನವನ್ನೂ ಜ್ಞೇಯಂ ಯತ್ತದಿತ್ಯಾದಿ ಯಿಂದ ಜ್ಞೇಯರೂಪವು ಸಂಕ್ಷೇಪೇಣ ಹೇಳಲ್ಪಟ್ಟಿತು. ನನ್ನ ಭಕ್ತನು ಇದನ್ನು ತಿಳಿದುಕೊಂಡು ಮುಕ್ತಿಯೋಗ್ಯನಾಗುತ್ತಾನೆ. ॥ ೧೯ ॥

ಪ್ರೇರಕ ಜ್ಞಾನವೆಂಬುವುದು ಪ್ರೇರ್ಯ ಜ್ಞಾನಾಧೀನವಾದುದರಿಂದ ಪ್ರೇರಕ ಜ್ಞಾನಸಂಪಾದನಾರ್ಥಕವಾಗಿ ಪ್ರೇರ್ಯವನ್ನೇ ಬಿಡಿಸಿ ಹೇಳು ತ್ತಾನೆ. ಪ್ರಕೃತಿಶಬ್ದದಿಂದ ಹೇಳಲ್ಪಟ್ಟ 25 ತತ್ವಗಳೂ ಪುರುಷ ಶಬ್ದೋ ಕ್ತಜೀವನೂ ಈ ಎರಡನ್ನೂ ಅನಾದಿಯಾಗಿ ತಿಳಿ. ಇಚ್ಛಾದಿ ವಿಕಾರ ಗಳನ್ನು ಸತ್ವಾದಿ ಗುಣಗಳನ್ನು ಪ್ರಕೃತಿಯಿಂದ ಉತ್ಪನ್ನಗಳೆಂದು ತಿಳಿ. ॥ ೨೦ ॥

ವಿಕಾರಗಳಿಗೆ ಪ್ರಕೃತಿಸಂಭವತ್ವವನ್ನು ನಿರೂಪಿಸುವನು. ಕಾರ್ಯ ವೆಂದರೆ ಶರೀರವು ಕಾರಣವೆಂದರೆ ಇಂದ್ರಿಯವು ಇವುಗಳ ಕರ್ತೃತ್ವವು ಜೀವನಿಗೆ ಬರುವುದು ಚಿತ್ಪ್ರಕೃತಿ ರಮಾದೇವಿಯಿಂದ ಹಾಗೆ ಕಾರ್ಯ ಕಾರಣ ಭಾವಾಪನ್ನ ಶರೀರೇಂದ್ರಿಯಗಳ ಪರಿಣಾಮರೂಪ ಕ್ರಿಯಾದಲ್ಲಿ ಜಡಪ್ರಕೃತಿಯು ಹೇತುವು. ಪುರುಷ ಶಬ್ದವಾಚ್ಯನಾದ ಪರಮಾತ್ಮನು ಜೀವನಿಗಾಗುವ ಸುಖದುಃಖ ಸಾಕ್ಷಾತ್ಕಾರರೂಪ ಭೋಗದಲ್ಲಿ ಕಾರಣನು. ಇಲ್ಲಿ ಪರಮಾತ್ಮನಿಗೆ ಸರ್ವಕಾರಣತ್ವವಿದ್ದರೂ ಹಾಗೆ ದೇವಿಗೆ ಭೋಗ ಹೇತುತ್ವವಿದ್ದರೂ ಭೋಗದಲ್ಲಿ ದೇವಿಗೆ ಪ್ರವೃತ್ತಿಯು ಅತ್ಯಲ್ಪ. ಕಾರ್ಯ ಕಾರಣ ಕರ್ತೃತ್ವ ವಿಷಯದಲ್ಲಿ ಅಧಿಕ ಪ್ರವೃತ್ತಿ ಎಂತ ತಿಳಿಸಲು ಇಲ್ಲಿ ವಿಭಾಗ ಮಾಡಿ ಹೇಳಿದ್ದು. ॥ ೨೧ ॥

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೨ ॥**
**ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥ ೨೩ ॥**
**ಯ ಏನಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಸ್ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ॥೨೪॥**

---

ಜೀವನು ಪ್ರಕೃತಿಕಾರ್ಯ ದೇಹಾದಿಗಳಲ್ಲಿದ್ದವನಾಗಿಕೊಂಡು ಪ್ರಕೃತಿ ಜನ್ಯ ಸುಖದುಃಖವನ್ನು ಭೋಗಿಸುತ್ತಾನೆ. ಇದು ಸಾಕ್ಷ್ಯನುಭವ ಸಿದ್ಧವು. ಆದ್ದರಿಂದಲೇ ದೇಹಾದಿ ಸಂಬಂಧವು ಜೀವನಿಗೆ ಮಿಥ್ಯಾಭೂತವಾದುದಲ್ಲ, ಎಂತ ತಿಳಿಸುವುದಕ್ಕೋಸ್ಕರ ಹಿಂದೆ ಹೇಳಿದರೂ ಪುನಃ ತಿಳಿಸಿದ್ದು. ಶುದ್ಧನಾದ ಜೀವನಿಗೆ ಅನೇಕ ವಿಧ ದೇಹೇಂದ್ರಿಯಾದಿ ಸಂಬಂಧವು ಹೇಗೆಂದರೆ ನಿಮಿತ್ತವನ್ನು ಹೇಳುತ್ತಾನೆ. ಸದಸದ್ಯೋನಿಗಳಲ್ಲಿ ಈ ಜೀವನಿಗೆ ಉತ್ಪತ್ತಿ ಬರಲಿಕ್ಕೆ ಸತ್ವಾದಿ ಗುಣ ಸಂಬಂಧ ಎಂಬುವುದು ಕಾರಣ. ॥೨೨॥

ಜೀವನಿಗೆ ಸಾಧ್ವಸಾಧು ಯೋನಿಗಳಲ್ಲಿ ಉತ್ಪತ್ತಿಯಲ್ಲಿ ಹಿಂದೆ ಹೇಳಿದ ಗುಣಸಂಗವು ನಿಮಿತ್ತಮಾತ್ರ. ಸ್ವತಂತ್ರಕಾರಣ ಭಗವಂತನೇ, ಎಂದು ಹೇಳುತ್ತಾನೆ. ಸರ್ವರಿಂದಲೂ ಉತ್ತಮನಾಗಿ ಸರ್ವ ಸಾಕ್ಷಿಯಾಗಿಯೂ ಸರ್ವ ಪೋಷಕನಾಗಿಯೂ ಸರ್ವ ಕರ್ಮಗಳ ಫಲಸಾರ ಭೋಗಿಸುವದು ಮಹಾಶಕ್ತಿಯುಳ್ಳ ಪ್ರಯುಕ್ತ ಮಹೇಶ್ವರನೆಂತಲೂ ಅನಿಸಿಕೊಳ್ಳುವ ಪರಮ ಚೇತನನಾಗಿಯೂ ಇರುವ ಭಗವಂತನೇ ಸ್ವಾನುಕೂಲ್ಯದಿಂದ ತನ್ನ ಬುದ್ಧಿಪೂರ್ವಕವಾಗಿ ಸರ್ವವನ್ನೂ ಪ್ರೇರಿಸುವನು. ಈ ದೇಹದಲ್ಲಿ ಕ್ಷೇತ್ರಜ್ಞನೆಂತ ಅನ್ನಿಸಿಕೊಂಡಿರುವವನು ಪರಮಾತ್ಮನೇ. ಹಿಂದೆ ಯಾದೃಶ ಪುರುಷನಿಂದ ಈ ಕ್ಷೇತ್ರವು ಪ್ರವೃತ್ತಿಸುತ್ತದೆ ಎಂತ ಮಾಡಿದ ಪ್ರಶ್ನೆಗೆ ಉಪದ್ರಷ್ಟೃತ್ವಾದಿ ಗುಣಯುಕ್ತ ಪರಮಾತ್ಮನಿಂದ ಈ ಕ್ಷೇತ್ರವು ಪ್ರೇರಿತವಾಗುತ್ತದೆಂತ ಹೇಳಿದಂತಾಯಿತು. ॥ ೨೩ ॥

ಯಾವ ಅಧಿಕಾರಿಯು ಹಿಂದೆ ಹೇಳಿದ ಜೀವಪರಾಖ್ಯ ಪುರುಷರನ್ನು ಚಿದಚಿದ್ರೂಪವಾದ ಪ್ರಕೃತಿಯನ್ನು ಅದರ ಗುಣಗಳಿಂದ ಕೂಡಿಕೊಂಡು

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ ೨೫ ॥
ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೬ ॥
ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್ ।
ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೭ ॥

---

ತಿಳಿಯುವನೋ ಅಂಥಾ ಅಧಿಕಾರಿಯು ತಿಳಿಯದೆ ಅನ್ಯಾಯ ಪ್ರವೃತ್ತಿ ಉಳ್ಳವನಾದರೂ ಪುನರುತ್ಪತ್ತಿರಾಹಿತ್ಯರೂಪ ಮುಕ್ತಿಭಾಗಿಯಾಗುತ್ತಾನೆ. ಇದು ಅಪರೋಕ್ಷಜ್ಞಾನಿಗೆ ಹೇಳಿದ್ದು ಪ್ರಮಾದಾದಪಿ ಅನ್ಯಾಯ ಪ್ರವೃತ್ತಿ ಇತರರು ಮಾಡಬಾರದೆಂಬುದು ಮರೆಯಬಾರದು. ॥ ೨೪ ॥

ಪರಮಾತ್ಮನ ದರ್ಶನ ಸಾಧನವನ್ನು ಹೇಳುತ್ತಾನೆ. ಶ್ರವಣಾದಿಗಳುಳ್ಳ ಕೆಲವಧಿಕಾರಿಗಳು ಧ್ಯಾನದಿಂದ ಹೃದಯದಲ್ಲಿ ಸ್ವಬುದ್ಧಿಯಿಂದ ಪರಮಾತ್ಮನನ್ನು ನೋಡುತ್ತಾರೆ. ಕೆಲವರು ಕರ್ಮರೂಪ ಉಪಾಯದಿಂದ ಧ್ಯಾನದಿಂದಲೂ ಪರಮಾತ್ಮನನ್ನು ನೋಡುವರು. ಇಲ್ಲಿ ಅಧಿಕಾರಿಭೇದೇನ ಹೇಳಿದ ದರ್ಶನ ಸಾಧನದಲ್ಲಿ ಭಾಷ್ಯರೀತ್ಯಾ ವಿಶೇಷವನ್ನು ತಿಳಿಯತಕ್ಕದ್ದು. ॥ ೨೫ ॥

ಇತರರು ತಮ್ಮ ಪ್ರಾತಿಭ ಜ್ಞಾನದಿಂದ ಪರಮಾತ್ಮನನ್ನು ತಿಳಿಯದೆ ಇತರರಿಂದ ಶ್ರವಣಾದಿ ಮಾಡಿ ಉಪಾಸನೆ ಮಾಡುತ್ತಾರೆ. ಅಂಥಾ ಬಹು ಶ್ರವಣವುಳ್ಳ ಅಧಿಕಾರಿಗಳೂ ಸಂಸಾರ ದಾಟುವರು. ಈ ಶ್ಲೋಕದಲ್ಲಿ ಹೇಳಿದ ಸಾಧನವು ಮನುಷ್ಯರಿಗೆ. ಹಿಂದಿನದ್ದು ದೇವತೆಗಳಿಗೂ ಋಷಿಗಳಿಗೂ ಎಂತ ತಿಳಿಯತಕ್ಕದ್ದು. ॥ ೨೬ ॥

ಪ್ರಕೃತಿ ಜೀವ ಈಶ್ವರ ಸ್ವರೂಪವನ್ನು ಪುನಃ ಬಿಡಿಸಿ ಹೇಳುತ್ತಾನೆ. ಸ್ಥಾವರ ಜಂಗಮ ಅಂದರೆ ಚರಾಚರಾತ್ಮಕವಾದ ಜೀವಸಮುದಾಯವು. ಏನದೋ ಭರತಶ್ರೇಷ್ಠನಾದ ಪಾಂಡವನೇ ಅದಷ್ಟೂ ಕ್ಷೇತ್ರ ಕ್ಷೇತ್ರಜ್ಞ ಎಂತ ಹೆಸರುಳ್ಳ ಚಿತ್ಪ್ರಕೃತಿ ಪರಮಾತ್ಮರ ಸಂಬಂಧದಿಂದ ಉತ್ಪನ್ನವಾಗುವುದಾಗಿ ತಿಳಿ. ॥ ೨೭ ॥

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೮ ॥**
**ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂ ಗತಿಮ್॥೨೯॥**
**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾಽಽತ್ಮಾನಮಕರ್ತಾರಂ ಸ ಪಶ್ಯತಿ ॥ ೩೦ ॥**

---

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ** ಎಂತ ಹೇಳಿದ ಪ್ರಯುಕ್ತ ಕ್ಷೇತ್ರ ಶಬ್ದಿತ ದೇಹಗಳಿಗೆ ತಾರತಮ್ಯ ನಾಶಾದಿಗಳಿದ್ದ ಪ್ರಯುಕ್ತ ತತ್ಸಂಬಂಧಾತ್ ಪರಮಾತ್ಮನಿಗೂ ಉಂಟೋ ಎಂತ ಶಂಕಾಬಂದರೆ ಇಲ್ಲವೆಂದು ಉತ್ತರ ಕೊಡುವನು. ತಾರತಮ್ಯೋಪೇತವಾದ ಸರ್ವ ಪ್ರಾಣಿ ವರ್ಗದಲ್ಲಿ ಇರುವ ಅಚಿಂತ್ಯ ಶಕ್ತಿಯುತ ಪರಮಾತ್ಮನನ್ನು ನ್ಯೂನಾಧಿಕ ಹೀನನನ್ನಾಗಿ ಯಾರು ತಿಳಿಯುತ್ತಾನೋ, ಹೀಗೆ ಪ್ರಾಣಿಗಳು ಜನನ ಮರಣ ರೂಪದೋಷ ಉಳ್ಳವುಗಳಾದಾಗ್ಯೂ ಅಲ್ಲಿರುವ ಪರಮಾತ್ಮನನ್ನು ದೋಷರಹಿತನೆಂದು ಯಾರು ತಿಳಿಯುವನೋ ಅವನೇ ತಿಳಿದವನು. ಯಥಾರ್ಥ ಜ್ಞಾನಿಯು. ॥ ೨೮ ॥

ಪರಮಾತ್ಮನನ್ನು ಸಮತ್ವೇನ ತಿಳಿಯೋಣದರ ಫಲ ಹೇಳುವನು. ಸರ್ವತ್ರ ಇರುವ ಪರಮಾತ್ಮನನ್ನು ಹಿಂದೆ ಹೇಳಿದಂತೆ ಸಮನನ್ನಾಗಿ ತಿಳಿಯುವವನು, ತನ್ನನ್ನು ಸ್ವಬುದ್ಧಿಯಿಂದ ನರಕಗಾಮಿಯನ್ನಾಗಿ ಮಾಡುವುದಿಲ್ಲ ಮಾತ್ರವಲ್ಲ ಜ್ಞಾನಾನಂತರ ಮುಕ್ತಿರೂಪ ಪರಮಗತಿ ಭಾಗಿಯನ್ನಾಗಿ ಮಾಡುತ್ತಾನೆ. ॥ ೨೯ ॥

ಯಾವ ಅಧಿಕಾರಿಯು ನಿಮಿತ್ತಭೂತವಾದ ಪ್ರಕೃತಿಯಿಂದ ಸ್ವತಂತ್ರ ಕರ್ತನಾದ ಪರಮಾತ್ಮನಿಂದ ಸರ್ವ ಕರ್ಮಗಳೂ ಕ್ರಿಯಮಾಣಗಳು ಎಂತ ತಿಳಿಯುವನೋ, ಹಾಗೆ ತನ್ನನ್ನು ಅಸ್ವತಂತ್ರನಾದ ಪ್ರಯುಕ್ತ ಅಕರ್ತನೆಂತ ತಿಳಿಯುವನೋ, ಅವನೇ ಪರಮಾತ್ಮ ಜ್ಞಾನಿಯು. ತನ್ನಲ್ಲಿ ಸಕಲ ಕರ್ಮಗಳನ್ನೂ ಸ್ವಪೂರ್ವ ಕರ್ಮಾಪೇಕ್ಷೆಯಿಂದ ಪ್ರಕೃತಿ ನಿಮಿತ್ತಕವಾಗಿ ಈಶ್ವರನೇ ಮಾಡಿಸುತ್ತಾನೆಂದು ತಿಳಿಯುವವನೇ ಜ್ಞಾನಿಯೆಂದರ್ಥ. ॥೩೦॥

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥**
**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಽಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೧ ॥**
**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾ ನೋಪಲಿಪ್ಯತೇ ॥ ೩೨ ॥**
**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩ ॥**

---

ಸರ್ವ ಪ್ರೇರಕತ್ವವನ್ನು ಮಾತ್ರ ಪರಮಾತ್ಮನಲ್ಲಿ ತಿಳಿದುಕೊಂಡರೆ ಸಾಲದು. ಸರ್ವಾಧಾರತ್ವಾದಿ ಮಹಿಮೆಯನ್ನು ತಿಳಿಯತಕ್ಕದ್ದೆಂತ ಹೇಳುತ್ತಾನೆ. ಯಾವಾಗ ಪ್ರಾಣಿಗಳ ಈ ನಾನಾ ವಿಧ ಭೇದವನ್ನು ಅಂದರೆ ನಾನಾ ವಿಧ ಭೇದಭಿನ್ನರಾದ ಪ್ರಾಣಿಗಳನ್ನು ವಿಷ್ಣುರೂಪ ಏಕವಸ್ತ್ವಾಶ್ರಿತವೆಂತಲೂ ಅವನಿಂದಲೇ ಈ ಪ್ರಾಣಿಗಳಿಗೆ ಉತ್ಪತ್ತಿಯೆಂತಲೂ ಅವರವರ ಯೋಗ್ಯತಾನುಸಾರವಾಗಿ ತಿಳಿಯುತ್ತಾನೋ ಆಗ್ಯೆ ಮುಕ್ತನಾಗುವನು. ಇಂಥಾ ಜ್ಞಾನವುಳ್ಳವನೇ ಮುಕ್ತಿಗೆ ಹೋಗುತ್ತಾನೆಂದರ್ಥ. ॥ ೩೦ ॥

ಶರೀರಾದಿ ಸಂಬಧವಿದ್ದರೂ ಶರೀರ ನಾಶದಿಂದ ಇವನಿಗೆ ನಾಶವಿಲ್ಲವೆಂಬುವುನ್ನು ಸಹೇತುಕವಾಗಿ ಹೇಳುತ್ತಾನೆ. ಈ ಪರಮಾತ್ಮನು ನಾಶವುಳ್ಳ ಶರೀರದಲ್ಲಿದ್ದರೂ ಸತ್ವಾದಿ ಗುಣರಹಿತನಾದ್ರಿಂದಲೂ ಅನಾದಿ ಉತ್ಪತ್ತಿರಹಿತ ಭಾವರೂಪನಾದ್ರಿಂದಲೂ ನಾಶವಿಲ್ಲದವನು. ಲೋಕಕ್ರಿಯಾ ವಿಲಕ್ಷಣ ಕ್ರಿಯಾ ಇರುವುದರಿಂದ ಸಕಲಕರ್ತನಾದರೂ ಮಾಡುವುದಿಲ್ಲವೆಂತ ಅನ್ನಿಸಿಕೊಳ್ಳುತ್ತಾನೆ. ಸುಖದುಃಖ ಸಂಬಂಧವುಳ್ಳವನೂ ಆಗುವುದಿಲ್ಲ. ॥ ೩೧ ॥

ಪರಮಾತ್ಮನಿಗೆ ಸುಖದುಃಖ ಸಂಬಂಧವಿಲ್ಲವೆಂಬುವುದನ್ನು ಸದೃಷ್ಟಾಂತ ಹೇಳುವನು. ಹೇಗೆ ಆಕಾಶವು ಪಂಕಾದಿ ಸರ್ವಸ್ಥಾನಗತವಾದರೂ ತಾನು ಅಪ್ರತಿಘವಾದುದರಿಂದ ಕರ್ದಮಲಿಪ್ತವಾಗುವುದಿಲ್ಲವೊ, ಅಂತೆಯೇ ಪರಮಾತ್ಮನು ನೀಚೋಚ್ಚ ದೇಹದಲ್ಲಿದ್ದಾಗ್ಯೂ ಲೇಪಿಯಲ್ಲ. ॥ ೩೨ ॥

ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ೩೫

॥ ಇತಿ ತ್ರಯೋದಶೋऽಧ್ಯಾಯಃ ॥

---

ಪರಮಾತ್ಮನಿಗೆ ಹಿಂದೆ ಹೇಳಿದ ಕ್ಷೇತ್ರಜ್ಞತ್ವವನ್ನು ಸದೃಷ್ಟಾಂತ ನಿರೂಪಿಸುವನು. ಹೇಗೆ ಒಬ್ಬನಾದ ಸೂರ್ಯನು ಸರ್ವಜಗತ್ತನ್ನು ಪ್ರಕಾಶಿಸುವನೋ, ಹಾಗೆಯೇ ಈ ಕ್ಷೇತ್ರದಲ್ಲಿರುವ ಪರಮಾತ್ಮನು ಸಕಲ ಕ್ಷೇತ್ರವನ್ನೂ ಪ್ರಕಾಶಿಸುತ್ತಾನೆ. ॥ ೩೪ ॥

ಫಲೋಕ್ತಿಪೂರ್ವಕ ಅಧ್ಯಾಯೋಕ್ತ ಪ್ರಮೇಯವನ್ನು ಉಪಸಂಹಾರ ಮಾಡುವನು. ಈ ವರೆಗೆ ಹಿಂದೆ ಹೇಳಿದ ರೀತ್ಯಾ ವಿವೇಕದೃಷ್ಟಿಯಿಂದ ಕ್ಷೇತ್ರ ಕ್ಷೇತ್ರಜ್ಞರ ಅಂತರ ಭೇದವನ್ನು ಯಾರು ತಿಳಿಯುವರೋ, ಹಾಗೆಯೇ ಪ್ರಾಣಿಗಳಿಗೆ ಅಚೇತನ ಪ್ರಕೃತಿಯಿಂದ ಯಾತರ ಸಕಾಶದಿಂದ ಮುಕ್ತಿಯಾಗುತ್ತದೋ, ಅಂಥಾ ಮೋಕ್ಷಸಾಧನವನ್ನು ಯಾರು ತಿಳಿಯುವರೋ ಅವರೇ ಪರಬ್ರಹ್ಮನನ್ನು ಹೊಂದುವರು. ॥ ೩೫ ॥

# ಚತುರ್ದಶೋಽಧ್ಯಾಯಃ

॥ ಶ್ರೀಭಗವಾನುವಾಚ ॥

ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್
ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ೧
ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೨ ॥
ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಮ್ ।
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥ ೩ ॥
ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪ ॥

---

ಶ್ರೀಕೃಷ್ಣನು ಯಾವತ್ಸಂಜಾಯತ ಇತ್ಯಾದಿಯಿಂದ ಪೂರ್ವಾಧ್ಯಾಯದಲ್ಲಿ ನಿರೂಪಿಸಿದ ಕ್ಷೇತ್ರಕ್ಷೇತ್ರಜ್ಞ ಸಂಯೋಗ ಹೇತುವಾಗಿ ಪ್ರಾಣಿಜನನ ವಿವರಣ ಪೂರ್ವಕವಾಗಿ ಗುಣತ್ರಯಗಳ ವಿಕಾರಸ್ಥಿತಿ ನಾಶೋಪಾಯಗಳನ್ನು ಈ ಅಧ್ಯಾಯದಲ್ಲಿ ನಿರೂಪಿಸುವನು. ಅರ್ಜುನನಿಗೆ ಆದರ ಹುಟ್ಟಲೋಸುಗ ಮುಂದೆ ನಿರೂಪಿಸಲಿರುವ ಪ್ರಮೇಯವನ್ನು ಹೊಗಳುವನು. ಮುಂದೆ ಹೇಳುವ ಪ್ರಮೇಯ ಅನ್ಯತ್ ಹಿಂದೆ ನಿರೂಪಿಸಿದುದರಿಂದ ಭಿನ್ನವು. ತಿಳಿಯಲಿರುವ ಪ್ರಮೇಯದಲ್ಲಿ ಉತ್ತಮ. ಯಾವ ಈ ಪ್ರಮೇಯ ಜ್ಞಾನದಿಂದ ಸರ್ವ ಮುನಿಗಳೂ ಮೋಕ್ಷವನ್ನು ಹೊಂದಿರುವರೋ. ॥ ೧ ॥

ಮುಂದೆ ಹೇಳಲಿರುವ ಪ್ರಮೇಯ ಜ್ಞಾನದಿಂದ ಉತ್ಪತ್ತಿ ನಾಶಾದಿ ರಾಹಿತ್ಯರೂಪರಾದ ನನ್ನ ರೂಪದ ಸಾಮ್ಯ ಹೊಂದಿರುವರು. ॥ ೨ ॥

ಪ್ರಮೇಯ ನಿರೂಪಿಸುವನು—ಚಿತ್ಪ್ರಕೃತಿಯು ನನ್ನ ಭಾರ್ಯೆ. ಅವಳಲ್ಲಿ ನನ್ನ ಉದರದಲ್ಲಿರುವ ಸಮಸ್ತ ಜೀವರಾಶಿಯನ್ನು ರೇತೋರೂಪದಿಂದ ಇಡುವೆನು. ಅಲ್ಲಿ ಜೀವರಿಗೆ ದೇಹಯೋಗರೂಪವಾದ ಜನ್ಮ ಬರುವುದು ॥ ೩ ॥

ಕೇವಲ ಆದಿಸರ್ಗದಲ್ಲಿ ಮಾತ್ರ ನಾನೂ ಚಿತ್ಪ್ರಕೃತಿಯೂ ಕಾರಣರಲ್ಲ. ಮತ್ತೆ—ದೇವನರತಿರ್ಯಗಾದಿ ಯೋನಿಗಳ ಪ್ರತಿ ಉತ್ಪತ್ತಿಯಲ್ಲೂ ಲಕ್ಷ್ಮೀ ಮತ್ತು ನಾನೂ ಬೀಜಪ್ರದನಾಗಿ ಕಾರಣರು. ॥ ೪ ॥

ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ॥ ೫ ॥
ತತ್ರ ಸತ್ತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಮ್ ।
ಸುಖಸಂಗೇನ ಬಧ್ನಾತಿ ಜ್ಞಾನ ಸಂಗೇನ ಚಾನಘ ॥ ೬ ॥
ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥ ೭ ॥
ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ॥ ೮ ॥

---

ಜೀವರಿಗೆ ಬಂಧನಿವೃತ್ತಿಗೆ ಸಾಧನವನ್ನು ಮಾಡಬೇಕಾದರೆ ಬಂಧಕ ಜ್ಞಾನ ಆವಶ್ಯಕವಾದ್ದರಿಂದ ಬಂಧಪ್ರಕಾರ ಬಂಧಕರನ್ನು ನಿರೂಪಿಸುವನು. ಜಡಪ್ರಕೃತಿಯಿಂದ ಉತ್ಪನ್ನಗಳಾದ ಸತ್ತ್ವರಜಸ್ತಮೋಗುಣಗಳೂ, ಮತ್ತು ಈ ಗುಣತ್ರಯಕ್ಕೆ ಕ್ರಮದಿಂದ ಅಭಿಮಾನಗಳಾದ ಶ್ರೀಭೂದುರ್ಗಾದೇವಿಗಳು (ಅವ್ಯಯಂ) ಸ್ವರೂಪತಃ ನಾಶ ಇಲ್ಲದ ಜೀವನನ್ನು ಬಂಧಿಸುವರು. ಇಲ್ಲಿ ಎಲ್ಲರೂ ಎಲ್ಲರಿಗೂ ಬಂಧಕರಾದರೂ ಶ್ರೀದೇವಿಯು ದೇವತೆಗಳಿಗೂ ಭೂದೇವಿಯು ಮನುಷ್ಯರಿಗೂ ದುರ್ಗಾದೇವಿಯು ದೈತ್ಯರಿಗೂ ಬಂಧಕಳೆಂದೂ ತಿಳಿಯಬೇಕು. ॥ ೫ ॥

ಶ್ರೀಭೂದುರ್ಗಾ ಮೂರು ರೂಪಗಳಿಂದ ಮಾಡಲ್ಪಡುವ ತ್ರಿವಿಧ ಬಂಧನ ರೀತಿಯನ್ನು ನಿರೂಪಿಸುವನು. ಕ್ರಮದಿಂದ ಮೂರು ಶ್ಲೋಕಗಳಿಂದ, ತತ್ರ ಮೂರು ಗುಣಗಳಲ್ಲಿ ಸತ್ವಗುಣ ಮತ್ತು ಸತ್ವ ಸತ್ವಾಭಿಮಾನಿ ಶ್ರೀದೇವಿಯು ನಿರ್ಮಲವಾಗಿ ರೋಗಾದ್ಯುಪದ್ರವ ಇಲ್ಲದೆ ತತ್ವಜ್ಞಾನ ಜನಕವಾಗಿ ಸುಖಜ್ಞಾನ ಸಂಗದಿಂದ ದೇವತೆಗಳನ್ನು ಬಂಧಿಸುವಳು. ॥ ೬ ॥

ರಜೋಭಿಮಾನಿ ಭೂದೇವಿಯು ತೃಷ್ಣಾ ಅಂದರೆ ಅದಾಗಲಿ ಇದಾಗಲಿ ಎಂಬ ವಸ್ತು ವಿಷಯಕ ಆಶಾ ತತ್ಸಂಗ ಅವುಗಳ ಆಸಕ್ತಿ ಇದರಿಂದ ಕೂಡಿದ ಸೃಷ್ಟಿಯಿಂದ ಮಾನುಷಬಂಧಕಿಯಾಗುವಳು. ॥ ೭ ॥

ತಮೋಭಿಮಾನಿ ದುರ್ಗೆಯೂ ತಮೋಗುಣವೂ ಮೋಹಕವಾದ ಅಜ್ಞಾನ ಪ್ರಮಾದಾದಿಗಳಿಂದ ದೈತ್ಯ ಜೀವರಾಶಿಗೆ ಬಂಧಕಿಯಾಗುವಳು. ॥ ೮ ॥

ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯ ॥
ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।
ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ ॥ ೧೦ ॥
ಸರ್ವದ್ವಾರೇಷು ದೇಹೇಽಸ್ಮಿನ್ಪ್ರಕಾಶ ಉಪಜಾಯತೇ ।
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ ೧೧ ॥
ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥ ೧೨ ॥
ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥ ೧೩ ॥

---

ಪೂರ್ವೋಕ್ತ ಪ್ರಮೇಯವನ್ನು ದೃಢೀಕರಿಸುವನು—ಶ್ರೀದೇವಿಯು ಸಾತ್ವಿಕ ಸುಖವಿಷಯ ಪ್ರವೃತ್ತಿಯನ್ನೂ ಭೂದೇವಿಯು ಕರ್ಮವಿಷಯದಲ್ಲಿಯೂ, ದುರ್ಗೆಯು ಮನಸ್ಸಿಗಿರುವ ಉತ್ತಮ ಜ್ಞಾನಶಕ್ತಿಯನ್ನು ತಡೆದು ಅಧರ್ಮಾದಿ ವಿಷಯಪ್ರವೃತ್ತಿ ಹುಟ್ಟಿಸುವಳು. ಈ ರೀತಿ ಮೂರು ದೇವಿಯರು ಮೂರು ರೀತಿಯಲ್ಲಿ ಬಂಧಕಿಯರು. ॥ ೯ ॥

ಪ್ರತಿ ಒಬ್ಬನಲ್ಲೂ ಗುಣತ್ರಯಗಳೂ, ಗುಣಾಭಿಮಾನಿಗಳೂ ಮೂವರು ಇದ್ದರೂ, ಈ ಮೂವರಿಗೂ ಬಂಧಕತ್ವವಿದ್ದರೂ ಅವರ ಕಾರ್ಯ ವ್ಯವಹಾರ ಹೇಗೆಂದರೆ ಪ್ರಾಬಲ್ಯವಿವಕ್ಷಯಾ ಇಟ್ಟುಕೊಳ್ಳಬೇಕು. ॥ ೧೦ ॥

ಮುಂದಿನ ಮೂರು ಶ್ಲೋಕಗಳಿಂದ ಸತ್ವಾದಿ ವೃದ್ಧಿಯ ಜ್ಞಾಪಕವನ್ನು ನಿರೂಪಿಸುವನು. ಶ್ರೋತ್ರಾದಿ ಸರ್ವ ದ್ವಾರಗಳಲ್ಲಿ ಸಮ್ಯಕ್ ಜ್ಞಾನರೂಪ ಪ್ರಕಾಶ, ಮತ್ತು ಸುಖಾದಿಗಳು ಯಾವಾಗ ಹುಟ್ಟುವವೋ ಆವಾಗ ಸತ್ವ ವೃದ್ಧಿಯನ್ನು ತಿಳಿಯಬೇಕು. ॥ ೧೧ ॥

ಲೋಭ ಧನಾದಿ ಬಿಡದಿರುವ ಮನಸ್ಸು, ಪ್ರವೃತ್ತಿ, ವ್ಯರ್ಥವಾದ ಉದ್ಯೋಗ, ಕಾಮ್ಯಕರ್ಮಗಳ ಆರಂಭ, ಯಾವ ಕಾರ್ಯದಲ್ಲೂ ಮನಸ್ಸಿಗೆ ಉಪರತಿ ಇಲ್ಲದಿರುವಿಕೆ ಅಶಮ, ಸಿಗದ ವಸ್ತುವಿನ ಅಭಿಲಾಷೆ ಸ್ಪೃಹಾ, ಇವುಗಳ ಅಭಿವೃದ್ಧಿಯು ರಜೋಗುಣದ ಕಾರ್ಯವು ಎಂದು ತಿಳಿಯಬೇಕು. ॥೧೨॥

ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।
ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ ॥ ೧೪ ॥
ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫ ॥
ಕರ್ಮಣಃ ಸುಕೃತಸ್ಯಾಹುಃ ಸಾತ್ವಿಕಂ ನಿರ್ಮಲಂ ಫಲಮ್ ।
ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥ ೧೬ ॥
ಸತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ॥೧೭॥

---

ಶ್ರೋತ್ರಾದೀಂದ್ರಿಯಗಳಲ್ಲಿ ಜ್ಞಾನಾದಿ ಹುಟ್ಟದಿರುವುದು ಅಪ್ರಕಾಶವು ಕಾರ್ಯಗಳಲ್ಲಿ ಉದ್ಯಮವಿಲ್ಲದಿರುವುದು ಅನುದ್ಯಮವು. ಪ್ರಮಾದ ಎಂದರೆ ಮನಸ್ಸಿಗೆ ನೆಮ್ಮದಿ ಇಲ್ಲದಿರೋಣವು ಮೋಹವೆಂದರೆ ಭ್ರಮಾತ್ಮಕ ಜ್ಞಾನವು. ಇವುಗಳ ವೃದ್ಧಿಯಿಂದ ತಮೋಗುಣದ ವೃದ್ಧಿಯನ್ನು ತಿಳಿಯಬೇಕು. ॥ ೧೩ ॥

ಸತ್ವಾದಿಗುಣಗಳ ವೃದ್ಧಿ ಇರುವಾಗ ಸತ್ತವರ ಭಿನ್ನಭಿನ್ನ ಗತಿ ನಿರೂಪಿಸುವನು ಸತ್ವಗುಣವೃದ್ಧಿವೇಳೆಯಲ್ಲಿ ದೇಹತ್ಯಾಗ ಮಾಡಿದವನು ಸಾತ್ವಿಕರ ಕುಲದಲ್ಲಿ ಹುಟ್ಟುವನು. ॥ ೧೪ ॥

ರಜೋಗುಣವೃದ್ಧಿಯಲ್ಲಿ ಸತ್ತವನು ಕಾಮ್ಯಕರ್ಮಿಗಳಲ್ಲಿ ಹುಟ್ಟುವನು. ತಮೋಗುಣವೃದ್ಧಿಯಲ್ಲಿ ಸತ್ತವನೂ ದೈತ್ಯಾದಿ ಮೂಢ ಯೋನಿಗಳಲ್ಲಿ ಜನನ ಹೊಂದುವನು. ॥ ೧೫ ॥

ಸಾತ್ವಿಕ ರಾಜಸ ತಾಮಸ ಕರ್ಮಗಳ ಫಲಗಳನ್ನು ಎರಡು ಶ್ಲೋಕಗಳಲ್ಲಿ ನಿರೂಪಿಸುವನು. ಸತ್ಕುಲಪ್ರಸೂತನು ಮಾಡಿದ ಯೋಗ್ಯಕರ್ಮಕ್ಕೆ ದುಃಖಲೇಶದಿಂದಲೂ ರಹಿತವಾದ ಸುಖರೂಪ ಉತ್ತಮ ಫಲವು. ರಾಜಸ ಕರ್ಮಕ್ಕೆ ದುಃಖಮಿಶ್ರ ಸುಖಫಲವು. ತಾಮಸ ಕರ್ಮಕ್ಕೆ ಅಜ್ಞಾನ ತತ್ಕಾರ್ಯ ಫಲವು ॥ ೧೬ ॥

ನಿರ್ಮಲವಾದ ಫಲಾದಿಗಳನ್ನು ವಿವಿಚ್ಯ ನಿರೂಪಿಸುವನು. ಸತ್ವಗುಣದಿಂದ ಭಗವದ್ವಿಷಯಕ ಜ್ಞಾನವೂ ರಜೋಗುಣದಿಂದ ಸ್ವರ್ಗಾದಿ ವಿಷಯ ಇಚ್ಛೆಯೂ, ತಮೋಗುಣದಿಂದ ಅಜ್ಞಾನವೂ, ಹುಟ್ಟುವುದು.॥೧೭॥

ಊರ್ಧ್ವಂ ಗಚ್ಛಂತಿ ಸತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ ೧೮ ॥
ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾಽನುಪಶ್ಯತಿ ।
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥
ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।
ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥

॥ ಅರ್ಜುನ ಉವಾಚ ॥

ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ ।
ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ ॥ ೨೧ ॥

---

ಸತ್ವಾದಿ ಗುಣಜನ್ಯ ಜ್ಞಾನಾದಿಗಳು ಸಾಕ್ಷಾತ್ ಫಲರೂಪವಾಗದೆ ಇದ್ದದ್ದರಿಂದ ಸಾಕ್ಷಾತ್ಫಲ ನಿರೂಪಿಸುವನು. ಸಾತ್ವಿಕರು ಜ್ಞಾನದಿಂದ ಉತ್ತಮ ಜನಾದಿ ಲೋಕಕ್ಕೆ ತೆರಳುವರು. ರಾಜಸರು ಕಾಮ್ಯ ಸ್ವರ್ಗಾದಿ ಗಳಿಗೂ, ತಾಮಸರು ನರಕಕ್ಕೂ ಹೋಗುವರು. ॥ ೧೮ ॥

ಗುಣತ್ರಯದಿಂದಲೇ ಜ್ಞಾನಾದಿಗಳು ಹುಟ್ಟಿ ಉತ್ತಮಾದಿ ಲೋಕ ಪ್ರಾಪ್ತಿ ಹೇಳುವುದರಿಂದ ಅವುಗಳಿಗೇನೇ ಮುಖ್ಯ ಕರ್ತೃತ್ವ ಶಂಕಾ ಬರ ಬಹುದು. ಅದನ್ನು ನಿರಾಕರಿಸುವನು ಶ್ರೀಪರಮಾತ್ಮನು. ಯಾವಾತನು ಸತ್ವಾದಿಗುಣಗಳಿಂದ ಭಿನ್ನನಾಗಿಯೂ ಸರ್ವಕರ್ತನಾಗಿಯೂ ಗುಣಗಳಿಂದ ಉತ್ತಮನಾಗಿಯೂ ಇರುವನೆಂದು ನನ್ನನ್ನು ತಿಳಿಯುವನೋ, ಅವನೇ ನಾ. ಅಂದರೆ ಪುರುಷನು ಅನ್ಯಥಾ ಪಶುತುಲ್ಯನು. ಅವನು ಜ್ಞಾನಾನಂದಾತ್ಮಕ ನನ್ನ ಸ್ಥಿತಿ ಮೋಕ್ಷ ಹೊಂದುವನು. ॥ ೧೯ ॥

ಸುಖದುಃಖಾದಿರೂಪ ಬಂಧವು ಸತ್ವಾದಿಗುಣತ್ರಯ ಕೃತವೆಂದೂ, ಸತ್ವಾದಿ ಗುಣನಾಶವಾಗೋಣ ಬಂಧನಾಶವಾಗುವುದಾಗಿಯೂ ನಿರೂಪಿಸು ವನು. ॥ ೨೦ ॥

ಗುಣಾನತೀತ್ಯ ಎಂತ ಹೇಳೋಣ ಅರ್ಜುನನು ಪ್ರಶ್ನೆ ಮಾಡುವನು. ಈ ಬಂಧಕಗಳಾದ ಸತ್ವಾದಿಗುಣಗಳನ್ನು ದಾಟಿದವನು ಯಾವ ರೀತಿಯಿಂದ

॥ ಶ್ರೀಭಗವಾನುವಾಚ ॥

ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।
ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥
ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।
ಗುಣಾ ವರ್ತಂತ ಇತ್ಯೇವಂ ಯೋಽವತಿಷ್ಠತಿ ನೇಂಗತೇ ॥ ೨೩ ॥
ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।
ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥

---

ಇರುವನು. ಹೇ ಪ್ರಭೋ ಅವನೆಂತಹ ಆಚಾರ ಉಳ್ಳವನು. ಯಾವ ಉಪಾಯದಿಂದ ಈ ಗುಣಗಳನ್ನು ದಾಟುವನು. ॥ ೨೧ ॥

ಶ್ರೀಕೃಷ್ಣನು ಉತ್ತರ ಕೊಡುವನು. ಸತ್ವಗುಣಾತೀತನು ಪರನಿಗಿರುವ ಪ್ರಕಾಶಾದಿ ರೂಪ ಸಂಪ್ರವೃತ್ತ ಸಮ್ಯಕ್ಕರ್ಮಾದಿಗಳನ್ನು ದ್ವೇಷಿಸುವುದಾಗಲೀ, ನಿವೃತ್ತ ಕರ್ಮವನ್ನು ಇಚ್ಛಿಸುವುದಾಗಲೀ ಈ ಎರಡನ್ನು ಮಾಡುವುದಿಲ್ಲ. ॥ ೨೨ ॥

ಗುಣಾತೀತನು ಯಾವಾಚಾರದಲ್ಲಿರುವನೆಂಬ ಅರ್ಜುನನ ಪ್ರಶ್ನೆಯನ್ನು ಪರಿಹರಿಸುವನು. ಗುಣಾತೀತನು ಉದಾಸೀನನಂತಿರುವನು. ಗುಣಕೃತ ವಿಕಾರ ಹೊಂದುವುದಿಲ್ಲ. ಗುಣಗಳು ಸ್ವತಂತ್ರಗಳಲ್ಲ. ಈಶ್ವರೇಚ್ಛೆಯಿಂದ ಇರುವವುಗಳೆಂದು ತಿಳಿದು ಅವೈಷ್ಣವ ಕರ್ಮದಲ್ಲಿ ಪ್ರವೃತ್ತನಾಗುವುದಿಲ್ಲ. ವೈಷ್ಣವ ಕರ್ಮಮಾಡುತ್ತಿರುವನು. ಇದೇ ಸತ್ವಗುಣಾತೀತನಾಚಾರವು. ೨೩

ಸತ್ವಗುಣಾತೀತನ ಆಚಾರಾಂತರವನ್ನು ಹೇಳುವನು. ವಿಷ್ಣುಭಜನ ಧ್ಯಾನಾದಿ ವಿಷಯದಲ್ಲಿ ಸಮ ದುಃಖ ಸುಖಃ=ದುಃಖ ಬಂದರೂ ಬಿಡುವುದಿಲ್ಲ. ಸಮಲೋಷ್ಟಾಶ್ಮಕಾಂಚನಃ ವಿಷ್ಣು ಪೂಜಾದಿಗಳಿಂದ ಲಾಭ ಬಂದರೂ ತಪ್ಪಿದರೂ ನಷ್ಟ ಬಂದರೂ ಬಿಡಲಾರ. ವಿಷ್ಣು ಸೇವಾದಿಗಳಿಂದ ಲಾಭವಿಲ್ಲದಿದ್ದರೂ ಬಿಡಲಾರ. ನಿಂದಾ ಬಂದು ಸ್ತುತಿ ತಪ್ಪಿದರೂ ವಿಷ್ಣು ಪೂಜಾದಿ ಕರ್ಮ ಬಿಡುವುದಿಲ್ಲ. ಇದಕ್ಕೆ ಕಾರಣ–ಧೀರಃ ವಿಷ್ಣುಮಹಾತ್ಮ್ಯ ಜ್ಞಾನವುಳ್ಳವನು. ಸ್ವಸ್ಥಃ=ವಿಷ್ಣುವಿಷಯ ಧರ್ಮದಲ್ಲಿ ಚಂಚಲ ಇಲ್ಲದವನು. ॥ ೨೪ ॥

ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।
ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫ ॥
ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।
ಸ ಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥
ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।
ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥

॥ ಇತಿ ಚತುರ್ದಶೋಽಧ್ಯಾಯಃ ॥

---

ಹಾಗೆ ಮಾನಾಪಮಾನಯೋಸ್ತುಲ್ಯಃ ಅಪಮಾನ ಬಂದರೂ ವಿಷ್ಣು ಪೂಜಾದಿ ಬಿಡಲಾರನು. ವಿಷ್ಣುಪೂಜಾದಿ ಪ್ರಯುಕ್ತ ಒಬ್ಬನ ಶತ್ರುತ್ವ ಬರಲಿ ಮಿತ್ರತ್ವ ಬರಲಿ ತಾನು ಬಿಡಲಾರನು. ಏನಾದರೂ ವಿಷ್ಣುಪೂಜಾದಿ ಬಿಡುವ ಪ್ರಯುಕ್ತ ಪ್ರಯೋಜನ ಸಿಗುವದಿದ್ದರೂ ತನ್ನ ಕರ್ಮ ಬಿಡಲಾರನು. ಇದೇ ಗುಣಾತೀತನಾಚಾರ. ॥ ೨೫ ॥

ಈ ತನಕ ಗುಣಾತೀತನ ಲಕ್ಷಣ ಮತ್ತು ಆಚಾರಗಳನ್ನು ನಿರೂಪಿಸಿ ಗುಣಾತೀತನು ಹೇಗಾಗುವನೆಂಬ ಪ್ರಶ್ನೆಗೆ ಉತ್ತರ ದಯಪಾಲಿಸುವನು. ಯಾರು ನನ್ನನ್ನು ನಿತ್ಯದಲ್ಲೂ ಭಕ್ತಿರೂಪ ಉಪಾಯದಿಂದ ಸೇವಿಸುವನೋ ಆತನು ಗುಣಾತೀತನಾಗಿ ಬ್ರಹ್ಮಭೂಯಾಯ, ಬ್ರಹ್ಮ ಚಿತ್ಪ್ರತಿ. ಅವಳಂತೆ ಪ್ರೀತಿಪಾತ್ರನಾಗುವನು. ॥ ೨೬ ॥

ಗುಣಾತೀತನಿಗೆ ಭಗವತ್ಪ್ರಾಪ್ತಿ ಹೇಳಬೇಕು. ಲಕ್ಷ್ಮೀ ಪ್ರಾಪ್ತಿ ಯಾಕೆ ನಿರೂಪಿಸಬೇಕೆಂದರೆ, ಲಕ್ಷ್ಮಿಯು ಕೇವಲ ನನ್ನ ಅವಿಯೋಗಿನಿಯು. ಅವಳ ಪ್ರಾಪ್ತಿಯಾದರೆ ನನ್ನವಳಾದ ಆತಳು ಜೀವನಿಗೆ ನನ್ನ ಪ್ರಾಪ್ತಿಯಾಗುವಂತೆ ಮಾಡುವಳೆಂದು ನಿರೂಪಿಸುವನು. ಬ್ರಹ್ಮಣಃ ಪ್ರತಿಷ್ಠಾ ಆಧಾರನು. ಹಾಗೆ ನಾಶಶೂನ್ಯ ಮುಕ್ತವರ್ಗಕ್ಕೂ ಧರ್ಮಮೋಕ್ಷ ಸುಖಕ್ಕೂ ನಾನೇ ಆಧಾರನು. ಗುಣಾತೀತನು ಲಕ್ಷ್ಮಿಯನ್ನು ಹೊಂದಿ ಅವಳಿಂದ ಅನುಗ್ರಹ ಹೊಂದಿ ನನ್ನನ್ನು ಹೊಂದುವನೆಂದು ತಿಳಿಸಲು ಹೀಗೆ ನಿರೂಪಿಸಿದ್ದು. ॥ ೨೭ ॥

# ಪಂಚದಶೋಽಧ್ಯಾಯಃ

॥ ಶ್ರೀಭಗವಾನುವಾಚ ॥

ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ
ಗುಣಪ್ರವೃದ್ಧಾ ವಿಷಯಪ್ರವಾಲಾಃ ।
ಅಧಶ್ಚ ಮೂಲಾನ್ಯನುಸಂತತಾನಿ
ಕರ್ಮಾನುಬಂಧೀನಿ ಮನುಷ್ಯಲೋಕೇ ॥ ೨ ॥

---

ಹದಿಮೂರನೇ ಅಧ್ಯಾಯದಲ್ಲಿ ಸಂಸಾರ ಕಾರಣವಾದ ಪ್ರಕೃತಿ. ಮಹತ್ತತ್ವ ಅಹಂಕಾರಾದಿತತ್ವ, ಕ್ಷೇತ್ರಶಬ್ದದಿಂದ ವಾಚ್ಯವಾದ ಜಗತ್ತಿನ ಸ್ವರೂಪವು ನಿರೂಪಿಸಲ್ಪಟ್ಟಿತು. ಯ ಏನಂ ವೇತ್ತಿ ಪುರುಷಮಿತ್ಯಾದಿನಾ ಸಂಸಾರನಾಶಕ ಭಗವಂತನ ಮಹಿಮೆಯು ನಿರೂಪಿಸಲ್ಪಟ್ಟಿತು. ಈ ಅಧ್ಯಾಯದಲ್ಲಿ ಸಮಗ್ರ ಸಂಸಾರ ಹೇತು ಪ್ರಕೃತ್ಯಾದಿಗಳ ಸ್ವರೂಪವನ್ನು ನಿರೂಪಿಸಿ ಸಂಸಾರನಾಶೇಚ್ಛೆಯನ್ನು ಹುಟ್ಟಿಸಿ ತತ್ಕಾರಣ ಸಮಗ್ರ ಭಗವನ್ಮಹಿಮಾ ವಿವರಿಸುವನು-ಜಗತ್ಸ್ವರೂಪವನ್ನು ಮುಂಚಿನ ಎರಡೂವರೆ ಶ್ಲೋಕದಿಂದ ನಿರೂಪಿಸುವನು. ಸಂಸಾರವೃಕ್ಷವುಊರ್ಧ್ವಮೂಲ ಊರ್ಧ್ವ ಅಂದರೆ ದೊಡ್ಡವರಾದ ವಿಷ್ಣು ಲಕ್ಷ್ಮೀ ಪ್ರಕೃತಿಗಳು. ಇವರು ಮೂಲದಂತಿರುವವರು. ಅಶ್ವತ್ಥಂ ಕುದುರೆಯಂತೆ ಸದಾ ಚಂಚಲವಾಗಿರುವುದು. ಅಧಃ ಶಾಖಂ. ವಿಷ್ಣುವಿನಿಂದ ಪ್ರಕೃತಿಯಿಂದ ನೀಚವಾದ–ಪಂಚಭೂತ ಮಹದಹಂಕಾರ ಬುದ್ಧಿ ಅಭಿಮಾನಿ ಸಹಿತ ಈ ಎಂಟು ತತ್ವಗಳು ಗೆಲ್ಲಿನಂತಿರುವದು. ಅವ್ಯಯಂ ಸರ್ವಥಾ ನಾಶಇಲ್ಲದ್ದು. ಒಂದು ಕಲ್ಪದಂತೆ ಇನ್ನೊಂದು ಕಲ್ಪಕ್ಕೂ ನಡದೆ(ನಡಿತೆ) ಲೋಕದಲ್ಲಿ ಮರದಲ್ಲಿ ಎಲೆ ಇದ್ದರೆ ಫಲ ತೋರುವುದರಿಂದ ವೇದಗಳು ಕಾಮ ಮೋಕ್ಷ ಎರಡು ಫಲಕ್ಕೆ ಕಾರಣವಾದ್ದರಿಂದ ಛಂದಾಂಸಿ ಪರ್ಣಾನಿವೆಂದದ್ದು ಇದನ್ನು ತಿಳಿದವನು ವೇದಾರ್ಥ ಜ್ಞಾನಿಯು. ॥ ೧ ॥

ನ ರೂಪಮಸ್ಯೇಹ ತಥೋಪಲಭ್ಯತೇ
ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।
ಅಶ್ವತ್ಥಮೇನಂ ಸುವಿರೂಢಮೂಲ
ಮಸಂಗಶಸ್ತ್ರೇಣ ದೃಢೇನ ಛಿತ್ವಾ ॥ ೩ ॥
ತತಃ ಪರಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ಗತಾ ನ ನಿವರ್ತಂತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪ ॥
ನಿರ್ಮಾನಮೋಹಾ ಜಿತಸಂಗದೋಷಾ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈಃ
ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥ ೫ ॥

---

ಜಗದಾಖ್ಯ ವೃಕ್ಷಕ್ಕೆ ಅಧೋ ಭಾಗ ಊರ್ಧ್ವ ಭಾಗಗಳಲ್ಲಿ ಸತ್ವಗುಣ ರಜೋಗುಣತಮೋಗುಣಗಳಿಂದ ಪುಷ್ಟಗಳಾದ ಚಿದಚಿದ್ರೂಪಗಳಾದ ಮಹದಾದ್ಯಷ್ಟ ಪದಾರ್ಥಗಳೆ ಶಾಖಾ ಸ್ಥಾನಗಳು. ತಾತ್ಕಾಲಿಕ ಸುಖಕಾರಣಗಳಾದ ಶಬ್ದಾದಿ ವಿಷಯಗಳು ಪ್ರವಾಲಸದೃಶಗಳು. ಮೂಲಪದ ಪ್ರಕೃತ ವಿಷ್ಣು ರೂಪ. ಅಧಃ ಪದ ಬೋಧ್ಯ ಜೀವ. ಶರೀರಗಳಲ್ಲಿ ಅನುಸಂತತಾನಿ ವ್ಯಾಪ್ತ ಗಳಾಗಿವೆ. ಸ್ವಯಂ ವಿಷಯಗಳು ಕರ್ಮಾನುಬಂಧೀನಿ ಕರ್ಮವನ್ನು ಅಪೇಕ್ಷಿಸಿ ಫಲಕೊಡುವವುಗಳು. ॥ ೨ ॥

ಯದ್ಯಪಿ ಈ ಜಗದ್ವೃಕ್ಷದ ರೂಪ ತೋರುವುದಿಲ್ಲ. ಉತ್ಪತ್ತಿನಾಶಗಳೂ ಕಾಣುವುದಿಲ್ಲ. ಆದರೂ ವೈರಾಗ್ಯ ಸಹಿತ ಜ್ಞಾನಾಖ್ಯ ಶಸ್ತ್ರದಿಂದ ಛೇದ್ಯವು ಈ ವೃಕ್ಷವು. ॥ ೩ ॥

ಪರಾಪರತತ್ವಗಳನ್ನು ವಿಮರ್ಶ ಪೂರ್ವಕ ತಿಳಿದ ಮೇಲೆ ಶ್ರವಣ ಮನನ ನಿದಿಧ್ಯಾಸಾದಿಗಳಿಂದ ಬ್ರಹ್ಮನನ್ನು ಹೊಂದುವವರು ಹಿಂತಿರುಗುವುದಿಲ್ಲ. ಹೇಗೆ ವೃಕ್ಷಚ್ಛೇದಕ್ಕೆ ವೃಕ್ಷದಿಂದಲೇ ಕೂಡಿದ ಕುಠಾರ ಸಾಧನವೋ ತದ್ವತ್ ತದನುಗ್ರಹಸಹಿತ ಶ್ರವಣಾದಿ ಕುಠಾರ ಈ ಜಗದ್ವೃಕ್ಷಚ್ಛೇದನಕ್ಕೆ ಸಾಧನ ॥ ೪ ॥

ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೬ ॥

ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।
ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥

ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮ ॥

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯ ॥

---

ಪರಮಾತ್ಮ ಪ್ರಾಪ್ತಿಯಲ್ಲಿ ಬೇರೆಯೂ ಸಾಧನವನ್ನು ನಿರೂಪಿಸುವನು. ಮಿಥ್ಯಾಜ್ಞಾನ, ಹೆಮ್ಮೆ, ವಿಷಯ ಪ್ರೀತಿ. ಇಲ್ಲದೆ ಶ್ರವಣಾದಿಗಳಲ್ಲಿ ಆಸಕ್ತಿ ಇರೋಣ ರಜೋಗುಣ ತಮೋಗುಣ ಸ್ವಭಾವ ಇಲ್ಲದವರೇ ನಾಶ ಶೂನ್ಯವಾದ ಆ ಬ್ರಹ್ಮನನ್ನು ಹೊಂದುವರು. ॥ ೫ ॥

ಪ್ರಾಪ್ಯವಾದ ಸ್ಥಾನ ನಿರೂಪಿಸುವನು. ಆ ಸ್ಥಾನದಲ್ಲಿ ಈ ಸೂರ್ಯಾದಿ ಪ್ರಕಾಶ ಸಹಾ ಇಲ್ಲ. ಮತ್ತು ಆ ಸ್ಥಾನ ಹೊಂದಿದವರು ಅಲ್ಲಿಂದ ಹಿಂತಿರುಗುವುದಿಲ್ಲ. ॥ ೬ ॥

ಜಗದಾಖ್ಯ ವೃಕ್ಷ ಚ್ಛೇದನಕ್ಕೆ ಬ್ರಹಾದಿಜೀವ ಜ್ಞಾನ ಸಾಕಷ್ಟೆ. ಪರಬ್ರಹ್ಮನಿಂದ ಪರಮಾತ್ಮ ಜ್ಞಾನ ಏಕೆಂದರೆ ಅಪ್ಪಣೆ ಕೊಡುತ್ತಾನೆ. ಚತುರ್ಮುಖಾದಿಗಳ ಶರೀರದಲ್ಲಿರುವ ನಾಶರಹಿತನಾದ ಜೀವ ನನ್ನದೆ ಭಿನ್ನಾಂಶ. ಅಲ್ಪ ಸಾದೃಶ್ಯವುಳ್ಳವ ಅವನ ಜ್ಞಾನ ಸಾಲದು. ಮತ್ತು ಪ್ರಕೃತಿಕಾರ್ಯ ಶರೀರದಲ್ಲಿರುವ ಮನಸ್ಸು ಮತ್ತು ಶ್ರೋತ್ರಾದಿ ಇಂದ್ರಿಯಗಳನ್ನು ವಿಷಯ ಜ್ಞಾನ ತಂದುಕೊಡುವಂತೆ ಮಾತ್ರ ಮಾಡಬಹುದು. ॥ ೭ ॥

ಜೀವನ ಇಂದ್ರಿಯಾದಿ ಪ್ರವೃತ್ತಿಯೂ ಈಶ್ವರಾಧೀನವೆಂದು ನಿರೂಪಿಸುವನು. ಜೀವನಿಗೆ ಶರೀರ ಪ್ರಾಪ್ತಿ ಕಾಲಕ್ಕೆ ಈಶ್ವರನು ಇಂದ್ರಿಯಾದಿಗಳನ್ನು ಸಂಯಾತಿ ಹೊಂದಿಸುವನು. ಉತ್ಕ್ರಮಣ ಕಾಲ ಬರೋಣ ಸಮಸ್ತ ಇಂದ್ರಿಯಾಭಿಮಾನಿಗಳನ್ನು ಕೂಡಿ ಲೋಕಾಂತರ ಹೊಂದುವರು. ॥ ೮ ॥

**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಂ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦ ॥**
**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಂ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ ೧೧ ॥**
**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥**
**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥**
**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥ ೧೪ ॥**

---

ಇಂದ್ರಿಯಗಳ ಪ್ರವರ್ತಕನಾದ ಈಶ್ವರನು ಶ್ರೋತ್ರ ಚಕ್ಷು ರಸನಾದಿ ಇಂದ್ರಿಯದಲ್ಲಿದ್ದು ವಿಷಯಗಳನ್ನು ಸೇವಿಸುವನು. ॥ ೯ ॥

ಇಂದ್ರಿಯಗಳ ಭೋಗವೆಂದರೆ ಜೀವನಂತೆ ಅಶುಭ ಭೋಗವೂ ಉಂಟೋ ಯೆಂತ ಶಂಕೆಗೆ ಶುಭ ಭೋಗ ಮಾತ್ರ. ಅದು ಏಕೆ ತೋರುವುದಿಲ್ಲವೆಂದರೆ. ವಿಮೂಡಾಃ ಅಜ್ಞಾನಿಗಳು ತಿಳಿಯುವುದಿಲ್ಲ. ಈಶ್ವರ ಜ್ಞಾನೈಕಗಮ್ಯನೆಂದು ಅಪ್ಪಣೆಕೊಡುವನು. ॥ ೧೦ ॥

ಪ್ರಯತ್ನ ಮಾಡಿದರೆ ಏಕೆ ಜ್ಞಾನವಿಲ್ಲವೆಂದು ನಿರೂಪಿಸುವನು--ಯೋಗಿನಃ ಜ್ಞಾನೋಪಾಯ ಅನುಷ್ಠಾತರು ಯತ್ನದಿಂದ ತನ್ನಲ್ಲಿದ್ದ ಪರಮಾತ್ಮನನ್ನು ತಿಳಿವರು. ಅವಿವೇಕಿಗಳು ಯತ್ನ ಮಾಡಿದರೂ ತಿಳಿಯಲಾರರು. ॥ ೧೧ ॥

ಅಧಶ್ಚ ಮೂಲಾನೀತ್ಯಾದಿನಾ ಪರಮಾತ್ಮನಿಗೆ ಹೇಳಿದ ಸರ್ವಾಂತರ್ಯಾಮಿತ್ವ ಊರ್ಧ್ವ ಶಬ್ದದಿಂದ ಹೇಳಿದ ಸರ್ವೋತ್ತಮತ್ವ ಮುಂದಿನ ಪದ್ಯಗಳಲ್ಲಿ ವಿವರಿಸುವನು. ಪರಮಾತ್ಮ-ಸೂರ್ಯಚಂದ್ರಾಗ್ನಿಗಳ ಜಗತ್ಪ್ರಕಾಶನಾದಿ ಸರ್ವಶಕ್ತಿ ನನ್ನಧೀನ ॥ ೧೨ ॥

ನಾನೇ ಭೂಮಿಯನ್ನು ಅಂತರ್ಯಾಮಿಯಾಗಿ ಪ್ರವೇಶಿಸಿ ಧರಿಸುವೆನು. ಸಮಸ್ತ ಔಷಧಿಗಳನ್ನು ಚಂದ್ರನಲ್ಲಿ ಅಮೃತರಸಾತ್ಮಕನಾಗಿ ಪೋಷಿಸುವೆನು. ॥ ೧೩ ॥

ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ
ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।
ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಮ್ ॥ ೧೫ ॥
ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥
ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥

---

ವಿಶ್ವನರಸಂಭಂಧಿತ್ವಾತ್ ವೈಶ್ವಾನರನಾಮಕನಾದ ನಾನೇ ಪ್ರಾಣಿಗಳ ದೇಹದೊಳಗಿದ್ದು ಪ್ರಾಣಾಪಾನನಾಮಕನಾಗಿ ತಿಂದ ಸರ್ವವಸ್ತುಪಾಚಕನು. ॥ ೧೪ ॥

ಮತ್ತು ಸರ್ವಪ್ರಾಣಿ ಹೃದಯದಲ್ಲಿದ್ದು ಸರ್ವಜ್ಞಾನ ವಿಸ್ಮರಣ ಕೊಡುವುದು. ಸಮಸ್ತ ವೇದಗಳಿಂದ ಮುಖ್ಯ ಪ್ರತಿಪಾದ್ಯ, ಬ್ರಹ್ಮ ಸೂತ್ರಾದಿ ನಿರ್ಣಾಯಕ ಶಾಸ್ತ್ರಗಳನ್ನು ವ್ಯಾಸಾದಿ ರೂಪದಿಂದ ನಿರ್ಮಾತನು. ಸಮಸ್ತ ವೇದಾರ್ಥಜ್ಞಾನಿಯೂ ನಾನೇ. ॥ ೧೫ ॥

ಸರ್ವಾಂತರ್ಯಾಮಿತ್ವ ನಿರೂಪಿಸಿ ಸರ್ವೋತ್ತಮತ್ವ ನಿರೂಪಿಸುವನು. ಲೋಕದಲ್ಲಿ ಜೀವರು ಕ್ಷರ ಅಕ್ಷರವೆಂದು ಉಭಯವಿಧರು. ಬ್ರಹ್ಮಾದಿ ಜೀವರು ಶರೀರ ನಾಶ ಉಳ್ಳವರಾದ್ರಿಂದ ಕ್ಷರ ಶಬ್ದ ವಾಚ್ಯರು. ಲಕ್ಷ್ಮಿಯು ದೇಹನಾಶ ವಿಲ್ಲದ ಕಾರಣ ಅಕ್ಷರಶಬ್ದವಾಚ್ಯಳು. ಆಕಾಶದಂತೆ ನಿರ್ವಿಕಾರಳು, ಪುರುಷ ರಂತೆ ಅಪಾರ ಶಕ್ತಿ ಉಳ್ಳವಳಾದ್ರಿಂದ ಅವಳಿಗೂ ಅಕ್ಷರ ಉಚ್ಯತೇಯೆಂದು ಪುಲ್ಲಿಂಗ ಪ್ರಯೋಗ. ॥ ೧೬ ॥

ಈ ಕ್ಷರಾಕ್ಷರರಿಂದ ಭಿನ್ನನಾಗಿಯೂ ಈಶ್ವರನು ಉತ್ತಮನೂ ಶ್ರುತಿ ಯಲ್ಲಿ ಹೇಳಿಸಿಕೊಂಡಿರುವನು. ಅತಏವ ಆತಗೆ ಪರಮಾತ್ಮನೆಂತಲೂ ಜೀವ ರಿಗೆ ಆತ್ಮನೆಂತಲೂ ವ್ಯವಹಾರ. ಉತ್ತಮತ್ವದಲ್ಲಿ ಯುಕ್ತಿ ಆದರೂ ಮೂರು ಲೋಕವನ್ನು ಪ್ರವೇಶಿಸಿ ಧಾರಣೆ ಪೋಷಣೆ ಮಾಡುವನು. ಅಚಿಂತ್ಯ ಶಕ್ತಿ ಕೂಡಿದವನಾದುದರಿಂದ ಮೂರು ಲೋಕಕ್ಕೆ ನಾಶವದಗಿದರೂ ಆತ ನಾಶ ರಹಿತನು. ॥ ೧೭ ॥

ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥೧೮॥
ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಮ್ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥
ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।
ಏತದ್ಬುಧ್ವಾ ಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚ ಭಾರತ ॥ ೨೦ ॥

॥ ಇತಿ ಪಂಚದಶೋಽಧ್ಯಾಯಃ ॥

---

ಅಂತಹ ಉತ್ತಮನಾದ ಪರಮಾತ್ಮನು ತಾನೇ ಎಂದು ಸಪ್ರಮಾಣ ನಿರೂಪಿಸುವನು. ಲೋಕ ಶಬ್ದವಾಚ್ಯ ಪೌರುಷೇಯ ಗ್ರಂಥ ಮತ್ತು ವೇದದಲ್ಲೂ ಕ್ಷರಶಬ್ದ ಜೀವರನ್ನು ಅಕ್ಷರ ಲಕ್ಷ್ಮಿಯನ್ನು ಗುಣಗಳಿಂದ ದಾಟಿ ಉತ್ತಮ ಪುರುಷನೆಂದು ಪ್ರಸಿದ್ಧ ನಾನೇ. ॥ ೧೮ ॥

ಈ ಸರ್ವೋತ್ತಮ ಜ್ಞಾನ ಆವಶ್ಯಕವೆಂದು ಅದರ ಫಲೋಕ್ತ್ಯಾ ನಿರೂಪಿಸುವನು. ಯಾರು ನನ್ನನ್ನು ಅಜ್ಞಾನ ರಹಿತನಾಗಿ ಸರ್ವಾಂತರ್ಯಾಮಿಯನ್ನಾಗಿ ಸರ್ವೋತ್ತಮನನ್ನಾಗಿ ತಿಳಿವನೋ ಹಾಗೆ ಸೇವಿಸುವನೋ ಆತನೇ ಸಮಸ್ತವನ್ನು ತಿಳಿದವನು. ॥ ೧೯ ॥

ಇದು ಗುಹ್ಯವಾದ ಉತ್ತಮ ಪ್ರಮೇಯ. ಯಾರಿಗೂ ಅಯೋಗ್ಯರಿಗೆ ತಿಳಿಸುವುದಲ್ಲ. ಇದನ್ನು ತಿಳಿದೇ ಶ್ರವಣ ಮನನ ನಿದಿಧ್ಯಾಸನ ಪೂರ್ವಕ ಅಪರೋಕ್ಷ ಜ್ಞಾನ ಹೊಂದಿ ಕೃತಕೃತ್ಯಃ ಮುಕ್ತನೂ ಆಗುವನು. ॥ ೨೦ ॥

# ಷೋಡಶೋಽಧ್ಯಾಯಃ

॥ ಶ್ರೀಭಗವಾನುವಾಚ ॥

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ॥ ೧ ॥**

ಪೂರ್ವಾಧ್ಯಾಯದಲ್ಲಿ ನಿರ್ಮಾನಮೋಹಾ, ಇತ್ಯಾದಿ ಶ್ಲೋಕದಿಂದ ಉಕ್ತವಾದ ಪುರುಷಾರ್ಥಜ್ಞಾನಮೋಕ್ಷಸಾಧನವನ್ನು ಯತಂತೋಽಪ್ಯಕೃತಾತ್ಮಾನಃ ಇತ್ಯಾದಿಯಿಂದ ಉಕ್ತವಾದ ಪುರುಷಾರ್ಥ ವಿರೋಧಿಯನ್ನು ಈ ಅಧ್ಯಾಯದಲ್ಲಿ ವಿವರಿಸಿ ನಿರೂಪಿಸುವರು. ಸಾಧನಾನುಷ್ಠಾನಕ್ಕೆ ತದ್ವಿರೋಧಿ ಜ್ಞಾನವಿದ್ದರೆ ಅದನ್ನು ಬಿಡಲು ಶಕ್ಯವಾಗುತ್ತದೆ. ಶ್ರೀಷ್ಠತ್ವಾತ್ ದೇವಲಕ್ಷಣವನ್ನು ಪ್ರಥಮ ಹೇಳುವರು. "ಪುಮರ್ಥಸಾಧನವಿರೋಧೀನ್ಯನೇಸಾಧ್ಯಾಯೇನ ದರ್ಶಯತಿ" ಎಂತ ಭಾಷ್ಯ. ದೈವೀ ಸಂಪತ್ತನ್ನು 'ಅಭಯಂ ಸತ್ವಸಂಶುದ್ಧಿಃ' ಎಂಬ ಮೂರು ಶ್ಲೋಕದಿಂದ ನಿರೂಪಿಸುವನು.

ಅಭಯ–ತಾನು ಅನ್ಯರಿಗೆ ಭಯಮಾಡದೆ ಇರೋಣ, ಮತ್ತೊಬ್ಬರಿಂದ ಹೊಂದದಿರೋಣ, ಮತ್ತೊಬ್ಬರಿಂದ ಭಯ ಹೊಂದದಿರಬೇಕಾದ್ರೆ ಪೀಡಾಕಾರಣ ದುಃಖವನ್ನು ತಾನು ಮಾಡದಿರಬೇಕು. ಸತ್ವಸಂಶುದ್ಧಿ, ಮನೋನೈರ್ಮಲ್ಯ, ಜ್ಞಾನಯೋಗವ್ಯವಸ್ಥಿತಿಃ–ಜ್ಞಾನಸಾಧನಶ್ರವಣಾದಿಗಳಲ್ಲಿ ಆಸ್ಥಾ ದಾನಂ ಸುಪಾತ್ರದಲ್ಲಿ ದ್ರವ್ಯತ್ಯಾಗ–ಸುಪಾತ್ರದಾನಾಚ್ಚ ಭವೇದ್ಧಿ ಪುಣ್ಯಮಿತ್ಯುಕ್ತೇಃ ದಮ ಇಂದ್ರಿಯ ನಿಗ್ರಹಃ 'ಶಮೋ ಮನ್ನಿಷ್ಠತಾ ಬುದ್ಧೇಃ ದಮ ಇಂದ್ರಿಯನಿಗ್ರಹ ಇತ್ಯುಕ್ತೇಃ—ಯಜ್ಞ ಜ್ಯೋತಿಷ್ಟೋಮಾದಿ ಅಥವಾ ದೇವಪೂಜಾ ಪಿತೃತರ್ಪಣಾದಿ, ಸ್ವಾಧ್ಯಾಯ=ವೇದಾಧ್ಯಯನ ತಪಃ=ಕೃಚ್ಛ್ರ ಚಾಂದ್ರಾಯಣಾದಿ. ಅನ್ಯರೇನು ಪೂರ್ವಾಧ್ಯಾಯಾಂತದಲ್ಲಿ ಅರ್ಜುನನಿಗೆ ಅನಘನೆಂದು ಅನಘತ್ವ ದೈವೀ ಸಂಪದ್ರೂಪವಾದ್ದನ್ನು ಸಂಬೋಧಿಸಿ ತದ್ವಿವರಣಾರ್ಥಂ ಉತ್ತರಾಧ್ಯಾಯುವೆಂದು ಹೇಳುವರು. ಅನಘಃ೧೮ಕ್ಕೆ ದೈ ಸಂಪದ್ವಿಶಿಷ್ಟನೆಂದು ಅರ್ಥವು ಕ್ಲಿಷ್ಟ. ಆರ್ಜವ—ಮನಸ್ಸು ಕರ್ಮಗಳಲ್ಲಿ ಭಿನ್ನತೆ ಇಲ್ಲದಿರೋಣ ॥ ೧ ॥

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ॥**
**ದಯಾ ಭೂತೇಷ್ವಲೋಲುತ್ವಂ ಮಾರ್ದವಂ ಹ್ರೀರಚಾಪಲಮ್ ೨**
**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೩ ॥**
**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ॥ ೪ ॥**

---

ಅಹಿಂಸಾ ಅನ್ಯರ ಪ್ರಾಣವಿಯೋಗ ಮಾಡದಿರೋಣ. ಸತ್ಯ ಯಥಾರ್ಥವಚನ, ಅಕ್ರೋಧಃ-ಪರರಿಗೆ ಪೀಡೆಕೊಡುವ ಮಾನಸಿಕ ವಿಕಾರವಿಲ್ಲದಿರೋಣ, ತ್ಯಾಗ-ಔದಾರ್ಯ, ಶಮ ಬುದ್ಧಿಯಲ್ಲಿ ಭಗವದ್ವಿಷಯತೆ, ಅಪೈಶುನ, ಪರಪೀಡಾತುರ ದೋಷಾದಿಗಳನ್ನು ರಾಜಾದಿಗಳಲ್ಲಿ ಹೇಳದಿರೋಣ. ದಯಾ ಪರಹಿತಕರುಣರೂಪ ಬುದ್ಧಿಯ ಪರಿಣಾಮವಿಶೇಷ ಅಲೋಲುತ್ವ. ಸ್ರಕ್ಚಂದನಾದಿ ವಿಷಯದಲ್ಲಿ ರಾಗವಿಲ್ಲದಿರೋಣ. 'ಲೌಲ್ಯಂ ರಾಗಃ ಎಂತ ಭಾಷ್ಯ. ಮಾರ್ದವ-ಕ್ರೂರತನವಿಲ್ಲದಿರೋಣ, ಹ್ರೀ-ಶಾಸ್ತ್ರ ವಿರುದ್ಧ ಕರ್ಮದಲ್ಲಿ ಲಜ್ಜಾ, ಅಚಾಪಲ-ಸ್ಥಿರತೆ, ತೇಜಃ ಪರರಿಂದ ಸೋಲದಿರೋಣ ಕ್ಷಮಾ ಕ್ರೋಧಾಭಾವದಿಂದ ಕೂಡಿದ, ಅಪಕಾರ ಮಾಡಿದವರಿಗೂ ಅಪಕಾರಮಾಡದಿರೋಣ. ' ಧೃತಿಃ - ಆಪತ್ತಿನಲ್ಲೂ ಕರ್ತವ್ಯನಿಶ್ಚಯ, ಶೌಚ ಸದಾ ಭಗವತ್ ಸ್ಮರಣರೂಪ, ಆಂತರ ಶೌಚ-ಜಲಾದಿನಾ ಬಾಹ್ಯ ಶೌಚ ಅದ್ರೋಹ ಪರವೃತ್ತಿ ಕೆಡಿಸದಿರೋಣ, ನಾತಿಮಾನಿತಾ-ಹೆಮ್ಮೆ ಪಡದೆ ಇರೋಣ, ಈ ಪೂರ್ವೋಕ್ತ ಗುಣಗಳು ದೈವಗಳು ದೈವೀಸಂಪತ್ತು ಮುಮುಕ್ಷುವಿಗೆ ಆವಶ್ಯಕವೆಂದು ತಾತ್ಪರ್ಯ. ॥ ೨ ॥ ೩ ॥

ಯಾವದೋ ವಸ್ತುವನ್ನು ಹಿಡಿಯಲಿಕ್ಕೂ ಬಿಡಲಿಕ್ಕೂ ವಸ್ತುಜ್ಞಾನ ಆವಶ್ಯಕವಾದುದರಿಂದ ತ್ಯಾಜ್ಯವಾದ ಆಸುರಸ್ವಭಾವವನ್ನು ನಿರೂಪಿಸುವರು. ತನ್ನಲ್ಲಿ ಅಲ್ಪತ್ವಾದಿ ತಿಳಿದು ಮಹತ್ವಪ್ರದರ್ಶನವೇ ಡಂಭ. ಮನಸ್ಸಿನಲ್ಲಿ ಭೀತಿ ಕಾರಣವಿದ್ದರೂ ಹೆಮ್ಮೆಯಿಂದ ಅದನ್ನು ತೋರಿಸದಿರೋಣ. ದರ್ಪ- ತನ್ನಲ್ಲಿ ಪೂಜ್ಯತಾಬುದ್ಧಿ. ಅಭಿಮಾನ ಕ್ರೋಧಶಬ್ದಾರ್ಥ ಸ್ಪಷ್ಟ, ನಿಷ್ಠುರವಾಕ, ಪಾರುಷ್ಯ ಇವು ಆಸುರಧರ್ಮಗಳು. ಈ ಎರಡು ಸಂಪತ್ತಿನ ಫಲವನ್ನು

ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಽಽಸುರೀ ಮತಾ ।
ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥ ೫ ॥
ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬ ॥
ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।
ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭ ॥

---

ಸ್ವತಃ ಬಂಧು ವಧಾತ್ ಪಾಪಶಂಕೀ ಅರ್ಜುನನಿಗೆ ತನ್ನಲ್ಲಿ ಆಸುರಸ್ವಭಾವ ಶಂಕಾನಿವಾರಣೆ ಮಾಡುತ್ತಾರೆ. ದೈವೀಸಂಪತ್ ಮೋಕ್ಷದಾಯಕ, ಆಸುರೀ ಸಂಪತ್ತು ಪುನಃ ಪುನಃ ಸಂಸಾರದಾಯಕವಾಗಿ ಕ್ರಮೇಣ ತಮೋದಾಯಕ ನೀನು ದುಃಖಿಸುವುದು ಬೇಡ, ದೈವೀಸಂಪತ್ತಿನಿಂದ ನೀನು ಕೂಡಿದ್ದಿ. ಇಲ್ಲಿ ಪಾಂಡವ ಎಂದು ಸಂಬೋಧನದಿಂದ ಕ್ಷತ್ರಿಯಸಾದಕಾರಣ ಶೋಕಾದಿ ಮಾಡಲು ಯೋಗ್ಯನಲ್ಲವೆಂತ ಸೂಚಿಸಿದಂತಾಯಿತು. ॥ ೫ ॥

ಸೃಷ್ಟಿಯು, ದೇವ, ಆಸುರ, ರಾಕ್ಷಸ, ಪೈಶಾಚ ಮಾನುಷಾದಿ ಭೇದೇನ ಅನೇಕ ವಿಧವಿರುವಾಗ ದೈವಾಸುರವಿಭೇದೇನ ಎರಡಕ್ಕೆ ನಿರೂಪಣ ಏನೆಂದರೆ ಮೋಕ್ಷರೂಪ ಶುದ್ಧ ಶುಭಫಲದತ್ವೇನ. ಮತ್ತು ಕೇವಲ ತಮೋದುಃಖದಾಯಕತ್ವರೂಪ ಉಪಾಧಿಯಿಂದ ಎರಡೇ ಎಂದು ಎರಡೇ ಫಲತಃ ಭೂತ ಸ್ವಭಾವವೆಂದು. ಆ ಪೈಕಿ ದೈವಾಚಾರವು ಕರ್ಮಯೋಗ, ಜ್ಞಾನಯೋಗ ಭಕ್ತಿಯೋಗ ಭೇದೇನ ನಿರೂಪಿತವಾಗಿದೆ. ಆಸುರವನ್ನು ವಿಸ್ತಾರದಿಂದ ನಿರೂಪಿಸುವೆನು. ಕೇಳು. ಎಂದು ನಿರೂಪಿಸುವನು. ॥ ೬ ॥

ಪೂರ್ವದಲ್ಲಿ ನಿರೂಪ್ಯತ್ವೇನ ಹೇಳಿದ ಆಸುರಸ್ವಭಾವವನ್ನು 12 ಶ್ಲೋಕಗಳಿಂದ ತಿಳಿಸುವನು. ಆಸುರ ಜನರು ಶಾಸ್ತ್ರವಿಹಿತ ಕರ್ಮದಲ್ಲಿ ಪ್ರವೃತ್ತಿಯನ್ನಾಗಲೀ ನಿಷಿದ್ಧದಿಂದ ನಿವೃತ್ತಿಯನ್ನೂ ತಿಳಿಯುವದಿಲ್ಲ. ಆ ಜನರಲ್ಲಿ ವೈದಿಕಕರ್ಮ ಯೋಗ್ಯ ಬಾಹ್ಯಾಭ್ಯಂತರ ಶೌಚವಾಗಲೀ ಶಾಸ್ತ್ರ ಸಿದ್ಧ ಆಚಾರವಾಗಲೀ "ಯತ್ಸತಾಂ ಹಿತಮತ್ಯಂತಂ ತತ್ಸತ್ಯ" ಮಿತ್ಯುಕ್ತ ಸಜ್ಜನಹಿತ ಭಾಷಣರೂಪ ಸತ್ಯವೂ ಇಲ್ಲ. ॥ ೭ ॥

ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।
ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಮ್ ॥ ೮ ॥

ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।
ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥ ೯ ॥

ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ಪ್ರವರ್ತಂತೇಽಶುಚಿವ್ರತಾಃ ೧೦

---

ಮತ್ತು ಸತ್ಯವೆಂದರೆ ವಿಷ್ಣು. "ಜಗತ್ತು ಮೂರ್ತ ಅಮೂರ್ತವೆಂದು ದ್ವಿವಿಧ,ಮೂರ್ತವೆಂದರೆ ಚಲನವಲನ ಉಳ್ಳದ್ದೆಂದು ಅರ್ಥ. ಅಂಥ ಜಗತ್ತಿಗೆ ಸತ್ ಎಂದು ಅಮೂರ್ತವೆಂದರೆ ಕ್ರಿಯಾದಿರಹಿತ ಗಗನಾದಿ ರೂಪವಾದದ್ದು ಅದಕ್ಕೆ ತ್ಯತ್ ಎಂದು ಅರ್ಥ. ಇಂಥಾ ಜಗತ್ತನ್ನು ಸತ್ ಎಂದರೆ ಸಾದಯತಿ ನಾಶಮಾಡುವವ. ಯಮಯತಿ ಎಂದರೆ ನಿಯಮನ ಮಾಡುತ್ತಾನೆಂದು ಅರ್ಥ. ಹೀಗೆ ಸತ್ಯನೆಂದರೆ ವಿಷ್ಣು, ಜಗದಸತ್ಯ ಅಂದರೆ ಸತ್ಯ ಪದವಾಚ್ಯ ವಿಷ್ಣು ಇಲ್ಲದ್ದು ಪಾಲನ ಹೇತುತ್ವೇನ ಪ್ರತಿಷ್ಠಾಪದದಿಂದ ವಿಷ್ಣುವು ಬೋಧ್ಯನು ಜಗತ್ತು ಅಪತಿಷ್ಠಂ ವಿಷ್ಣುವಿನಿಂದ ಪಾಲಿತವಲ್ಲ. ಈಶ್ವರ ಶಬ್ದಬೋಧ್ಯ ವಿಷ್ಣುರಹಿತವೆಂತಲೂ ಹೇಳುತ್ತಾರೆ. ಈಶ್ವರ ಶಬ್ದಾರ್ಥ ನಾರಾಯಣನೆಂದು 18 ಅಧ್ಯಾಯದಲ್ಲಿ ಶಂಕರಾಚಾರ್ಯರೇ ಹೇಳಿರುವರು. ಕೇವಲ ಜಗನ್ಮಿಥ್ಯಾತ್ವವಾದಿಗಳು ಅಸುರರಲ್ಲ. ಕಿಂತು ಜಗತ್ಕಾರಣ ಪಾಲನಾದಿ ಕಾರಣತಯಾ ವಿಷ್ಣುವನ್ನು ಹೇಳದವರೂ ಅಸುರರೆಂದು ಅರ್ಥ. ಅಸುರರು ಶ್ರುತಿಯಲ್ಲಿ ಹೇಳಿದ ರೀತ್ಯಾ ಅಸ್ಮಾದ್ಭವಂತಿ ಭೂತಾನೀತ್ಯಾದಿ ರೀತ್ಯಾ ಉತ್ಪತ್ತಿ ಉಳ್ಳದ್ದಲ್ಲವೆಂದೆನ್ನುವರು. ಮತ್ತೆ ಹೇಗೆ ಹುಟ್ಟುವದೆಂದರೆ ಹೇಗೆ ಇರುವುದೆಂದರೆ ಅನ್ಯತ್ ಸದಸದ್ವಿಲಕ್ಷಣವು ಕಾಮಹೈತುಕಂ ಕಾಮರಾಗ, ಕಾಮ ಅವಿದ್ಯಾತದ್ಧೇತುಕವೆಂದನ್ನುವರು.॥೮॥

ಪುನಃ ನಿರೂಪಿಸುವರು. ಇಂಥಾಜ್ಞಾನವನ್ನು ಹೊಂದಿ ಸ್ವಾಮಿಯನ್ನು ಕಳಕೊಂಡು ಅಲ್ಪ ಜ್ಞಾನಿಗಳಾಗಿ ಕ್ರೂರ ಕರ್ಮಿಗಳಾಗಿ ಜಗನ್ನಾಶಾರ್ಥವಾಗಿ ಉತ್ಪನ್ನರಾಗುವರು. ॥ ೯ ॥

ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।
ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥
ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।
ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥
ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್ ।
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ॥ ೧೩ ॥
ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ ೧೪

---

ಅಸುರಸ್ವಭಾವ ಕಾರ್ಯವನ್ನೇ ನಿರೂಪಿಸುವನು: ಪೂರ್ಣ ಮಾಡಲು ಅಶಕ್ಯವಾದ ಕಾಮವನ್ನು ಹೊಂದಿ ದಂಭಾದಿಗಳಿಂದ ಕೂಡಿದವರಾಗಿ ವಿಪರೀತ ನಿಶ್ಚಯದಿಂದ ಭೋಗಾರ್ಥ ಯತ್ನವುಳ್ಳವರಾಗಿರುವರು. ॥ ೧೦ ॥

ಮತ್ತು ಪ್ರಲಯಪರ್ಯಂತಾ ಮರಣಾನಂತರವೂ ಹೋಗುವ (ಮಕ್ಕಳು ಮಮ್ಮಕ್ಕಳು ಹೀಗೆ) ನಿರ್ಣಯ ಮಾಡಿ ನಿಲ್ಲಿಸಲು ಅಶಕ್ಯವಾದ ಚಿಂತೆಯನ್ನು ಆಶ್ರಯಿಸಿ ಕಾಮಿತ ಭೋಗವನ್ನೇ ಮುಖ್ಯ ಫಲತ್ವೇನ ನಿಶ್ಚೈಸಿಕೊಂಡು ನೂರಾರು ಪಾಶ ಸದೃಶ ಆಶಾಧೀನನಾಗಿ ಕಾಮಕ್ರೋಧವಶರಾಗಿ ಅನ್ಯಾಯದಿಂದ ಭೋಗಾರ್ಥ ಧನೇಚ್ಛುಗಳಾಗುವರು. ॥ ೧೧ ॥

ಪೂರ್ವೋಕ್ತ ಚಿಂತಾರೀತಿಯನ್ನು ತೋರಿಸುವನು. ಇದಮಿತ್ಯಾದಿ ಮೂರು ಶ್ಲೋಕಗಳಿಂದ ಈ ಧನ ಈಗ ಈ ನನ್ನ ಕರ್ಮದಿಂದಲೇಪ್ರಾಪ್ತವಾಯಿತು. ಪುನಃ ಇಂಥಾದ್ದನ್ನು ಏತಾದೃಶಕರ್ಮದಿಂದ ಸಾಧಿಸುವೆನು. ಪುನಃ ಖ್ಯಾತ್ಯಾದಿಯನ್ನು ಹೊಂದುವೆನು. ನನ್ನ ಶತ್ರುವು ನಷ್ಟವಾದನು. ಅನ್ಯರು ನಾಶಿತರಾಗುವರು. ಎಲ್ಲ ಶತ್ರುಗಳುಹೋದ ಮೇಲೆ ನಾನೇ ನಿಯಾಮಕನು. ನಾನೇ ಐಹಿಕಾಮುಷ್ಮಿಕ ಭೋಗಿಯಾಗಿ ಬಲಯುಕ್ತನಾಗಿ ಸುಖಿಯಾಗಿರುವೆನು–ನಾನು ಧನಾದಿಸಂಪನ್ನ. ಸತ್ಕುಲಪ್ರಸೂತ. ನನ್ನ ಸದೃಶರು ಯಾರೂ ಇಲ್ಲ. ನಾನೇ ಅಂದರೆ ಈಶ್ವರಾನುಗ್ರಹಂವಿನಾ,ದಾನ ಮಾಡುವೆನು, ದಾನ ಕೊಡುವೆ. ಅತಿಶಯಿತ ಸುಖಿಯಾಗಿರುವೆನೆಂದು ಅಜ್ಞಾನಮೋಹಿತರಾಗಿರುವರು. ॥ ೧೨, ೧೩, ೧೪ ॥

ಆಢ್ಯೋऽಭಿಜನವಾನಸ್ಮಿ ಕೋऽನ್ಯೋऽಸ್ತಿ ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥೧೫॥
ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇऽಶುಚೌ ॥ ೧೬ ॥
ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।
ಯಜಂತೇ ನಾಮ ಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ೧೭
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ
ಮಾಮಾತ್ಮಪರದೇಹೇಷು ಪ್ರದ್ವಿಷಂತೋऽಭ್ಯಸೂಯಕಾಃ ॥೧೮॥

---

ಈ ಪ್ರಕಾರ ಚಿಂತಾವನ್ನು ಹೇಳಿ ತತ್ಫಲವನ್ನು ಹೇಳುವನು. ತಾನೇ ಕಾರ್ಯಕರಣ ಶಕ್ತನೆಂದು ಮನಸಾ ಭ್ರಾಂತರಾಗಿ ಕಳತ್ರಪುತ್ರಾದಿ ವಿಷಯ ಗಳಲ್ಲಿ ಜಾಲದಂತೆ ಬಂಧಕವಾದಲ್ಲಿ ಆಸಕ್ತರಾಗಿ ವಿಷಯದಲ್ಲಿ ಅತಿ ಭೋಗಾ ಸಕ್ತರಾಗಿ ನರಕವನ್ನು ಹೊಂದುವರು. ॥ ೧೬ ॥

ಯಾಗದಾನಾದಿ ಕರ್ತೃಗಳಿಗೆ ನರಕ ಹೇಗೆಂದರೆ ನಿರೂಪಿಸುವನು. ಆತ್ಮಸಂಭಾವಿತಾಃ ತಮ್ಮಿಂದಲೇ ಬಹುಮತರಾಗಿ ತಾವೇ ಯಾಗಾದಿಕರಣ ದಿಂದ ಪೂಜ್ಯರೆಂದು ತಿಳಿದುಕೊಂಡು ಅತಏವಸ್ತಭ್ದಾಃ ಧನಪ್ರಯುಕ್ತ ಅಹಂಕಾರದಿಂದ ಕೂಡಿದವರಾಗಿ ತಮಗೆ ಪೂಜ್ಯತಾ ಸಿಧ್ಯರ್ಥವಾಗಿ ವಿಧಿ ವಿರುದ್ಧವಾಗಿ ಯಾಗಾದಿಗಳನ್ನು ಮಾಡುವರು.ಆದ್ರಿಂದ ನರಕವಾಸಿಗಳಾಗು ವರು. ॥ ೧೭ ॥

ಸರ್ವ ಪ್ರೇರಕನಾದ ನಿನ್ನನ್ನುದ್ದೇಶಿಸಿ (ಅಂದ್ರೆ ನಿನ್ನ ಪ್ರೀತ್ಯರ್ಥ, ನಿನ್ನ ಅಧೀನತ್ವ ಜ್ಞಾನಪೂರ್ವಕ ಯಾಗ ಯಾಕೆ ಮಾಡುವುದಿಲ್ಲವೆಂದರೆ ಕಾರಣ ನಿರೂಪಿಸುವನು. ಅನ್ಯ ಸಹಾಯ ನಿರಪೇಕ್ಷನಾಗಿ ನಾನೇ ಯಾಗ ಮಾಡಲು ಶಕ್ತನೆಂದು ಅಹಂಕಾರ. ಸರ್ವಕಾರ್ಯಕ್ಕೂ ನನ್ನ ಶಕ್ತಿ ಸಾಕೆಂದು ಬಲ ನನ್ನ ಸದೃಶರಿಲ್ಲೆಂದು ದರ್ಪಾದಿಗಳಿಂದ ಕೂಡಿದವರಾಗಿ ಸರ್ವ ದೇಹಿಗ ಳಲ್ಲೂ ಸರ್ವತ್ರ ನಿಯಾಮಕನಾಗಿರುವ ನನ್ನನ್ನು ದ್ವೇಷಿಸುವರು. (ಅಂದರೆ ಈಶ್ವರನೇ ನಿಯಾಮಕನಾಗಿ ಇತರರಲ್ಲಿರುವುದಾದರೆ ನನ್ನ ಕೈಯಿಂದ ಈ

ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥
ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ॥
ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ೨೧
ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।
ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ॥ ೨೨ ॥

---

ಕಾರ್ಯ ನಿಲ್ಲಿಸಲಿ. ಅನ್ಯಥಾ ಪ್ರೇರಿಸಲಿ, ಇತ್ಯಾದಿ ರೂಪೇಣ ಸರ್ವಗುಣ ಪೂರ್ಣನಾದ ನನ್ನಲ್ಲಿ ದೋಷವಾದಿಗಳಾಗಿ ಯಾಗಾದಿ ಕರ್ತೃಗಳಾಗುವರು. ॥ ೧೮ ॥

ಇಂಥಾ ಅಜ್ಞಾನಿಗಳಿಗೆ ಹಿಂದೆ ಹೇಳಿದ ನರಕ ಮಾತ್ರವಲ್ಲ. ಕಿಂತು ಕೆಲವು ಕಾಲ ಜರಾಮರಣಾದಿ ಕ್ಲೇಶರೂಪ ಸಂಸಾರದಲ್ಲಿ ಹಾಕಿ ನಿತ್ಯ ನರಕ ದಲ್ಲಿ ನಾನೇ ಹಾಕುವದಾಗಿ ಎರಡು ಶ್ಲೋಕಗಳಿಂದ ನಿರೂಪಿಸುವನು. ತಾನ್- ಅಂದರೆ ಪೂರ್ವದಲ್ಲಿ ಆಸುರ ಸ್ವಭಾವಿಗಳಾಗಿ ನಿರೂಪಿಸಿದವರನ್ನು ಕ್ರೂರರೂ ನರಾಧಮರೂ ಆದ ಅತಏವ ಅಶುಭರೂ ಆದ ಜನರನ್ನು ಸದಾ ಆಸುರಯೋನಿಗಳಲ್ಲಿ ಅಂದರೆ ಕ್ಷಣೇಕ್ಷಣೇಪಿ ಪಾಪಾದಿಜನಕ ಯೋನಿಗಳಲ್ಲಿ ಹಾಕುವೆನು. ॥ ೧೯,೨೦ ॥

ಅಂಥಾ ಆಸುರಯೋನಿ ಪ್ರಾಪ್ತರಾದವರು ಪುನಃಪುನಃ ತಾದೃಶ ದುಷ್ಕರ್ಮಯುಕ್ತರೇ ಆಗಿ ಪ್ರತಿಜನ್ಮಗಳಲ್ಲೂ ಜ್ಞಾನಾಂಧರಾಗಿ ನನ್ನ ವಿಷಯಕ ಸಮೀಚೀನ ಜ್ಞಾನಾದಿರಹಿತರೇ ಆಗಿ ಅಧಮಾಂ–ನಿತ್ಯನರಕರೂಪ ಗತಿಯನ್ನು ಹೊಂದುವರು. ॥ ೨೧ ॥

ಹಿಂದೆ ನಿರೂಪಿಸಿದ ಪುರುಷಾರ್ಥವಿರೋಧಿಗಳಾದ ದಂಭಾದಿಗಳಲ್ಲಿ ಪ್ರಧಾನವಾದುದನ್ನು ನಿರೂಪಿಸಿ ಅವುಗಳು ಸರ್ವಥಾ ತ್ಯಾಜ್ಯವೆಂದು ಹೇಳುವನು. ಕಾಮ ಕ್ರೋಧ ಲೋಭ ಈ ಮೂರು ಮುಖ್ಯತಃ ನರಕಸಾಧನಗಳಾದುದರಿಂದ ಇವು ಅವಶ್ಯ ತ್ಯಾಜ್ಯ. ಕಾಮಾದಿತ್ಯಾಗವು ಕೇವಲ ನರಕಾ

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥ ೨೩ ॥
ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥೨೪॥

॥ ಇತಿ ಷೋಡಶೋಽಧ್ಯಾಯಃ ॥

---

ಪ್ರಾಪ್ತಿಸಾಧನ ಮಾತ್ರವಲ್ಲ. ಪುರುಷಾರ್ಥಪ್ರಾಪಕವೂ ಎಂದು ನಿರೂಪಿಸುವನು. ಈ ನರಕಾದಿಸಾಧನ ಕಾಮಾದಿಗಳಿಂದ ವಿರಹಿತನಾದವನು ಪ್ರತಿಬಂಧವಿಲ್ಲದಿದ್ದರೆ ಕಾರ್ಯ ಹೇಗೆ ಸಹಜ ಕ್ವಚಿತ್ ನಡೆಯುವುದೋ, ಅದೇ ರೀತ್ಯಾ ಶ್ರೇಯಸ್ಸಾಧನಾನುಷ್ಠಾನದಿಂದ ಮೋಕ್ಷ ಹೊಂದುವನು. ॥ ೨೨ ॥

ಶ್ರೇಯಸ್ಸಾಧನಾನುಷ್ಠಾನಕ್ಕೆ ಕೇವಲ ಕಾಮಾದಿವರ್ಜನಾ ಸಾಲದು. ಬೇರೆಯೂ ಸಾಧನ ಬೇಕೆಂದು ಹೇಳುವನು. ತದರ್ಥ ಅದನ್ನು ಸ್ವೀಕರಿಸದಿದ್ದರೆ ಬಾಧಕವನ್ನು ನಿರೂಪಿಸುವನು. ಯಾರು ಶಾಸ್ತ್ರೋಕ್ತರೀತಿ ಬಿಟ್ಟು ತನ್ನ ಇಚ್ಛೆಯಂತೆ ಇದೇ ಧರ್ಮವೆಂದು ನಡದರೆ ಅದು ವಸ್ತುತಃ ಧರ್ಮವಾಗದೆ ಇರಬಹುದು. ಅತಗೆ ಐಹಿಕ ಸುಖವಾಗಲೀ ಸ್ವರ್ಗಾದಿ ಪುರುಷಾರ್ಥವೂ, ಇರಲಾರದು. ॥ ೨೩ ॥

ಶಾಸ್ತ್ರೋಕ್ತ ರೀತಿ ಬಿಟ್ಟು ನಡದರೆ ಯಾಕೆ ಸುಖಾದಿ ಇಲ್ಲವೆಂದರೆ— ಆ ಶಂಕಾಪರಿಹಾರಪೂರ್ವಕ ಅಂತರಂಗ ಕಾರಣಾಂತರ ನಿರೂಪಿಸುವನು. ತಸ್ಮಾತ್ ಇದು ಕಾರ್ಯ ಅಂದರೆ ಧರ್ಮಸಾಧನ. ಇದು ಅಕಾರ್ಯವೆಂಬೋಣದರಲ್ಲಿ ಶಾಸ್ತ್ರವೇ ತೇ=ವಿವೇಕಿಯಾದ ನಿನಗೆ ಪ್ರಮಾಣವು. ಅದನ್ನು ಬಿಟ್ಟರೆ ದೋಷವೇ. ಆದುದರಿಂದ ಶಾಸ್ತ್ರೋಕ್ತರೀತ್ಯಾ ಕರ್ಮ ಮಾಡು. ಅದೇ ಪುರುಷಾರ್ಥಸಾಧನವು. ॥ ೨೪ ॥

---

# ಸಪ್ತದಶೋಽಧ್ಯಾಯಃ

॥ ಅರ್ಜುನ ಉವಾಚ ॥

ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾಽನ್ವಿತಾಃ ।
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ವಮಾಹೋ ರಜಸ್ತಮಃ ॥ ೧ ॥

॥ ಶ್ರೀಭಗವಾನುವಾಚ ॥

ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।
ಸಾತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥

---

ಹದಿನಾಲ್ಕನೇ ಅಧ್ಯಾಯದಲ್ಲಿ "ನಾನ್ಯಂ ಗುಣೇಭ್ಯಃ ಕರ್ತಾರಂ" ಇತ್ಯಾದಿ ಶ್ಲೋಕದಲ್ಲಿ ಸಾಮಾನ್ಯೇನ ಸರ್ವ ಪರಿಣಾಮವು ಗುಣಕೃತವೆಂದು ಹೇಳಿದ್ದರು- ಸತ್ವಾದಿ ಗುಣದಿಂದ ಮಾಡಲ್ಪಟ್ಟ ಶ್ರದ್ಧಾ ಆಹಾರ ತಪಸ್ಸೇ ಮೊದಲಾದ ಸದಸದ್ರೂಪ ಕರ್ಮಗಳ ಭೇದವನ್ನು ಹೇಳಿ ವಿವರವಾಗಿ ನಿರೂಪಿಸುವರು. ಪೂರ್ವಾಧ್ಯಾಯಾಂತದಲ್ಲಿ ಶಾಸ್ತ್ರವಿಧಾನವಿಹಿತ ಕರ್ತವ್ಯವೆಂದು ಹೇಳೋಣ ಲಬ್ಧಾವಸರನಾದ ಅರ್ಜುನನು ಕೇಳುವನು ಯ ಇತಿ. ಯಾರು ಶಾಸ್ತ್ರವಿಧಿಮುತ್ಸೃಜ್ಯ (ಅಂದರೆ ತಿಳಿಯದೆ) ಶ್ರದ್ಧಾಮಾತ್ರದಿಂದ ಯಾಗಾದಿಗಳನ್ನು ಮಾಡುವರೋ, ಅವರ ಸ್ಥಿತಿ ಕೀದೃಶಿ? ಅಂದರೆ ಸಾತ್ವಿಕವೊ, ರಾಜಸವೊ, ತಾಮಸವೊ? ಎಂದು. ಇಲ್ಲಿ ಶಾಸ್ತ್ರವಿಧಿಮುತ್ಸೃಜ್ಯ ಎಂಬಲ್ಲಿ ಶಾಸ್ತ್ರವಿಧಿ ಉಲ್ಲಂಘಿಸಿ ವೇದಾದಿಗಳಿಗೆ ಅಪ್ರಾಮಾಣ್ಯ ಹೇಳಿ ಎಂದರ್ಥವಲ್ಲ. ಅಂಥವರು ತಾಮಸರೇ. ತದ್ವಿಷಯಕ ಪ್ರಶ್ನವೇ ಇಲ್ಲ ಭಾಷ್ಯವೂ "ಶಾಸ್ತ್ರವಿಧಿಮುತ್ಸೃಜ್ಯ=ಅಜ್ಞಾತ್ವಾ" ಇತಿ. ಆದುದರಿಂದ ಶಾಸ್ತ್ರವಿಧಿಮುತ್ಸೃಜ್ಯ ತಿಳಿಯದೆ ಎಂತ. ॥ ೧ ॥

ಪೂರ್ವೋಕ್ತ ಶಾಸ್ತ್ರವಿಧಾನ ತಿಳಿಯದೆ ಯಾಗಾದಿ ಕರ್ತರಲ್ಲಿ ಸಾತ್ವಿಕಾದಿ ಭೇದೇನ ತ್ರಿವಿಧರೂ ಇದ್ದಾರೆಂದು ಹಿಂದಿನ ಯಾಗಾಂಗತಯಾ ಹೇಳಿದ ಶ್ರದ್ಧಾವನ್ನು ಸಾತ್ವಿಕತ್ವಾದಿನಾ ವಿಭಾಗಿಸಿ ತಾದೃಶ ಶ್ರದ್ಧಾಯುತಯಾ ಅವರವರ ಸ್ವರೂಪ ನಿರೂಪಿಸುವನು ಎರಡು ಶ್ಲೋಕಗಳಿಂದ— ಶ್ರದ್ಧಾ ಎಂದರೆ ಆಸ್ತಿಕ್ಯಬುದ್ಧಿಯಿದ್ದು ಜೀವನ ಹುಟ್ಟುಗುಣ. (ಅಂದರೆ

**ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ**
**ಯಜಂತೇ ಸಾತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ ।**
**ಭೂತಾನ್ಪ್ರೇತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪ ॥**

---

ಮನಸ್ಸಿನಿಂದ ಮಧ್ಯೇ ಹುಟ್ಟಿದ್ದಲ್ಲ. ಅಂಥಾ ಮಧ್ಯೇ ಮನಸ್ಸಿನಿಂದ ಹುಟ್ಟು ವುದಕ್ಕೆ ವ್ಯಾವೃತ್ತಿ ಉದ್ದಿಶ್ಯವೇ ಸ್ವಭಾವಜಾ ಎಂದು ಸಾವಧಾರಣವಾಗಿ ಹೇಳಿದ್ದು. ಸಾತ್ವಿಕಾದಿ ಭೇದೇನ ತ್ರಿವಿಧಾ. ಅಂಥಾ ಶ್ರದ್ಧಾತ್ರಯವನ್ನು ಕೇಳು. ಕೇಳಿ ಆದರಿಂದ ಕೂಡಿದವರು ಮಾಡುವ ಯಾಗಾದಿ ಕ್ರಮವನ್ನು ತಿಳಿ ಎಂದು. ॥ ೨ ॥

ಶ್ರದ್ಧಾ ತ್ರಿವಿಧವಾದದ್ದಾಗಲಿ. ತಾದೃಶ ಶ್ರದ್ಧಾನ್ವಿತರ ಗತಿಯೇನು? ಎಂಬ ಪ್ರಶ್ನೆಗೆ ಏನುತ್ತರವೆಂದರೆ—"ಯೋ ಯಚ್ಛ್ರದ್ಧಃ" ಯಾರು ಯಾವ ಶ್ರದ್ಧಾಸ್ವರೂಪನೋ, ಅವನಿಗೆ ಅದೇ ಗತಿ. ಅಂದರೆ ಸಾತ್ವಿಕ ಶ್ರದ್ಧೋಪೇತನು ಸಾತ್ವಿಕ. ರಾಜಸ ಶ್ರದ್ಧಾಯುಕ್ತನು ರಾಜಸ. ತಾಮಸ ಶ್ರದ್ಧಾವಂತನು ತಾಮಸನು ಎಂದರ್ಥ. ಹೀಗೆ ಯಾಕೆಂದರೆ ಉಪಪಾದನಮಾಡುವನು ಸತ್ವಾನುರೂಪಾ ಎಂದು. ಸರ್ವಸ್ಯ=ಎಲ್ಲಾ ಜಂತುವಿಗೂ ಶ್ರದ್ಧಾ ಸತ್ವಾನುರೂಪಾ=ಜೀವಸ್ವರೂಪಸದೃಶವಾಗುತ್ತದೆ. ಸತ್ವ ಎಂದರೆ ಜೀವ ಎಂದರ್ಥ. ಶ್ರದ್ಧೆಗೆ ಜೀವಾನುರೂಪತ್ವ ಯಾಕಂದರೆ ಶ್ರದ್ಧಾಮಯೋಽಯಂ ಪುರುಷಃ ಈ ಜೀವನು ಶ್ರದ್ಧಾಮಯಃ=ಶ್ರದ್ಧಾಸ್ವರೂಪನೆಂದು ನಿರೂಪಿಸುವನು. ಇಲ್ಲಿ ಮಯಃ ಎಂಬ ಮಯಟ್ ತಾದಾತ್ಮ್ಯಾರ್ಥಕ. ಶ್ರದ್ಧಾಮಯನೆಂದರೆ ಶ್ರದ್ಧಾಸ್ವರೂಪನೆಂದರ್ಥ. ॥ ೩ ॥

ಪೂರ್ವಶ್ಲೋಕದಲ್ಲಿ "ಯೋ ಯಚ್ಛ್ರದ್ಧಃ ಸ ಏವ ಸಃ" ಎಂಬುವಲ್ಲಿ ಸಾತ್ವಿಕಶ್ರದ್ಧಾವಂತ ಸಾತ್ವಿಕ. ರಾಜಸಶ್ರದ್ಧಾವಂತ ರಾಜಸ. ತಾಮಸಶ್ರದ್ಧಾವಂತ ತಾಮಸನೆಂದು ಹೇಳಿದ ಆಯಾಯ ಶ್ರದ್ಧಾವಂತರಿಗೆ ಯಾಯಾವ ಕರ್ಮಗಳೆಂದು ಜಿಜ್ಞಾಸೆಗೆ ತಾಂ ಶೃಣು ಯೆಂದು ಪ್ರತಿಜ್ಞಾ ಮಾಡಿದ್ದನ್ನು ನಿರೂಪಿಸುವನು. ಸಾತ್ವಿಕಶ್ರದ್ಧಾವಂತರು ಶಾಸ್ತ್ರವಿಧಿ ತಿಳಿಯದೇನೂ ಸಾತ್ವಿಕ ಶ್ರದ್ಧಾಯುತರಾಗಿ ದೇವತೆಗಳನ್ನುದ್ದೇಶಿಸಿ ಯಾಗಾದಿ ಮಾಡುವರು. ಹೀಗೆ

ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।
ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥
ಕರ್ಷಯಂತಶ್ಶರೀರಸ್ಥಂ ಭೂತಗ್ರಾಮಮಚೇತಸಃ ।
ಮಾಂ ಚೈವಾಂತಶ್ಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥ ೬ ॥

---

ರಾಜಸರು ಯಕ್ಷಾದಿಗಳ ಕುರಿತು, ತಾಮಸರು ಪ್ರೇತಭೂತಾದಿಗಳ ಕುರಿತು. ಯದ್ಯಪಿ ರಾಜಸರು ಯಾಗಾದಿಗಳಲ್ಲಿ ದೇವತಾನಾಮವನ್ನೇ ಉಚ್ಚರಿಸಿದರೂ ತತ್ತನ್ನಾಮಕ ಯಕ್ಷರಕ್ಷೋಜನರೇ ಪೂಜಾ ಸ್ವೀಕರಿಸುವರು. ಬ್ರಹ್ಮಾದಿ ನಾಮಧಾರಿ ರಾಕ್ಷಸರು ಇರುವರು. ಅವರಿಗೆ ದೇವ ಎಂದು ನಾಮ ಹೇಗೆಂದರೆ (ದೀನತ್ವಾದ್ದೇವನಾಮಾನಃ ಎಂದು ಸ್ಮೃತ್ಯಾ) ಉಪಪನ್ನ. ಆದರಲ್ಲಿ ದೇವತೆಗಳ ಕುರಿತು ಯಾಗಮಾಡಿದ ಸಾತ್ವಿಕ ಶ್ರದ್ಧಾವಂತರಿಗೆ ಮೋಕ್ಷವೂ, ಯಕ್ಷಾದಿಯಾಗಿ ರಾಜಸರಿಗೆ ಕಲ್ಪಿತ ಸ್ವರ್ಗವೂ, ಪ್ರೇತಾದಿ ಯಾಜಿಗಳಿಗೆ ಪ್ರೇತಾದಿ ಪ್ರಾಪ್ತಿಯೂ ಫಲವೆಂದು ತಿಳಿಯಬೇಕು. ॥ ೪ ॥

ಹಿಂದೆ ಹೇಳಿದ ತಾಮಸರಿಗೆ ಕೇವಲ ಭೂತಾದಿಪ್ರಾಪ್ತಿ ಮಾತ್ರವಲ್ಲದೆ ತಮಃಪ್ರಾಪ್ತಿಯೂ ಉಂಟೆಂದು ನಿರೂಪಿಸುವನು. ಅಶಾಸ್ತ್ರೇತ್ಯಾದಿ ಎರಡು ಶ್ಲೋಕಗಳಿಂದ ಯಾರು ದುಶ್ಶಾಸ್ತ್ರೋಕ್ತ ರೀತಿಯಿಂದ ವೃಥಾ ಮಹಾಕಷ್ಟಪ್ರದ ದಂಭಾಹಂಕಾರ ಕಾಮಾದಿಗಳಿಂದ ಕೂಡಿ ತಪಸ್ಸನ್ನು ಮಾಡುವರೋ, ಹಾಗೆ ಶರೀರದಲ್ಲಿ ಪ್ರೇರಕತ್ವೇನ ಇರುವ ಭೂತಾಭಿಮಾನಿ ದೇವತೆಗಳನ್ನೂ ತಥಾ ನನ್ನನ್ನೂ ಅಚೇತಸಃ ಅವಿವೇಕಿಗಳಾಗಿ ಕರ್ಷಯಂತಃ ಅಲ್ಪಗುಣವಿಶಿಷ್ಟತ್ವೇನ ನೋಡುವರೋ. (ಶ್ರುತಿ — ಯೋ ವೈ ಮಹಾಂತಂ ಪರಮಂ ಪುಮಾಂಸಂ ನೈವಂ ದ್ರಷ್ಟಾ ಕರ್ಶಕಃ ಸೋತಿಪಾಪೀ) ಈ ಶ್ರುತಿರೀತ್ಯಾ ಹೀಗೆ ಹೇಳಬೇಕು ಹೊರತು. ಅನ್ಯರ ರೀತ್ಯಾ ಈಶ್ವರಾನುಶಾಸನ ಮಾಡದಿರೋಣ ಎಂತಾಗಲೀ ಕೃಶೀಕರಣವೆಂತಾಗಲೀ ಹೇಳಬಾರದು. ಅಂಥವರನ್ನು ಆಸುರಜ್ಞಾನಿಗಳನ್ನಾಗಿ ತಿಳಿ. ತಮೋಯೋಗ್ಯರೆಂದಭಿಪ್ರಾಯ. ಈ ಪ್ರಕರಣದಲ್ಲಿ ತಾಮಸನಿಶ್ಚಯ ಎಂದು ಹೇಳದೆ ಆಸುರನಿಶ್ಚಯಾನೆಂದು ಯಾಕೆ ಹೇಳಿದ್ದೆಂದರೆ (ದೇವಾಸ್ತು ಸಾತ್ವಿಕಾ

ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥
ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।
ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ವಿಕಪ್ರಿಯಾಃ ॥೮॥
ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।
ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥

---

ಪ್ರೋಕ್ತಾಃ ದೈತ್ಯಾ ರಾಜಸತಾಮಸಾ ಎಂದು ಶ್ರುತಿ ಇದ್ದದ್ರಿಂದ ತಾಮಸ ಅಸುರದೈತ್ಯಾ ಇವು ಪರ್ಯಾಯಶಬ್ದವೆಂದಭಿಪ್ರಾಯ. ॥ ೫, ೬ ॥

ಶ್ರದ್ಧಾಭೇದೇನ ಸಾತ್ವಿಕಾದಿ ಪ್ರಭೇದ ಹೇಳಿ ಆಹಾರಾದಿ ಭೇದೇನಾಪಿ ತ್ರೈವಿಧ್ಯ ಏಳು ಶ್ಲೋಕಗಳಿಂದ ನಿರೂಪಿಸುವನು. ಸಾತ್ವಿಕ, ರಾಜಸ, ತಾಮಸ ಶಬ್ದವಾಚ್ಯ ಸರ್ವಸ್ಯ ಜನಸ್ಯ ಎಂದರೆ—ತ್ರಿವಿಧವಾದ್ದು ಆಹಾರ ಹಾಗೆ ಯಜ್ಞ ತಪಸ್ಸು ದಾನವೂ ತ್ರಿವಿಧ. ಅವುಗಳ ಪ್ರಭೇದ ವನ್ನು ಕೇಳು. ॥ ೭ ॥

ಪ್ರಕೃತ ಮೂರು ಶ್ಲೋಕಗಳಿಂದ ಸಾತ್ವಿಕ, ರಾಜಸ, ತಾಮಸ ಆಹಾರ ಭೇದವನ್ನು ನಿರೂಪಿಸುವನು. ಆಯುಃ=ಜೀವನ, ಸತ್ವ=ಸಾಧುತನ, ಬಲ=ಶಕ್ತಿ, ಆರೋಗ್ಯ=ರೋಗ ಇಲ್ಲದಿರೋಣ, ಸುಖ=ಒಮ್ಮೆ ಸೇವಿಸಿದರೂ ಬಹುಕಾಲದ ಸಂತೋಷಕ್ಕೆ ಸುಖವೆಂದು ಹೆಸರು. ಪ್ರೀತಿಯೆಂದರೆ ಆ ವಸ್ತು ಸೇವಾಮಾತ್ರಕಾಲದ ಸುಖ (ಪ್ರಿಯಂ ತತ್ಕಾಲಸೌಖ್ಯದಂ) ಎಂತ ವಚನ ಇಂಥಾ ಆಯುರಾರೋಗ್ಯಾದಿ ವೃದ್ಧಿಕಾರಕ ರಸಸ್ನೇಹದಿಂದ ಕೂಡಿದ ಸ್ಥಿರಾಃ=ಸೇವನದಿಂದ ಬಹುಕಾಲ ಗುಣದಾಯಕವಾದ್ದು ಘೃತಾದಿ, ಹೃದ್ಯಾ-ಒಮ್ಮೆ ಸೇವಿಸಿದರೆ ಇನ್ನೂ ಸೇವಿಸೋಣ ಎಂತ ಮನೋರಂಜಕವಾದ ಆಹಾರಗಳು ಸಾತ್ವಿಕಪ್ರಿಯಗಳು. (ದೇವಾನಾಂ ಆಜ್ಯಮಾಹಾರಃ) ಎಂದು ಪ್ರಸಿದ್ಧ. ಇದು ಸಾಮಾನ್ಯೇನ ಹೇಳಿದ್ದು. ॥ ೮ ॥

ಕಟು=ಮೆಣಸು ಮೊದಲಾದ್ದು. ಆಮ್ಲ=ಹುಳಿ, ಉಪ್ಪು ಅತಿಯಾದ ಇವುಗಳು. ಅತಿ ಉಷ್ಣ ತೀಕ್ಷ್ಣ=ಸಾಸ್ವಿ ಮೊದಲಾದ್ದು. ರೂಕ್ಷ=ಸ್ವತಃ

ಯಾತಯಾಮಂ ಗತರಸಂ ಪೂತಿಪರ್ಯುಷಿತಂ ಚ ಯತ್ ।
ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥ ೧೦ ॥
ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧ ॥
ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ॥ ೧೨ ॥
ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥
ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥

---

ಯಾವರಸವೂ ಇಲ್ಲದ್ದು. ವಿದಾಹಿ ತಾಪಪ್ರದವಾದ್ದು. ಇವೆಲ್ಲ ರಾಜಸ ಸಾಮಾನ್ಯತಃ ಇವುಗಳು ದುಃಖ ಶೋಕ ರೋಗಾದಿದಾಯಕಗಳು. ॥ ೯ ॥

ಯಾತಯಾಮ = ಅಡಿಗೆ ಮಾಡಿ ತುಂಬಾ ಹೊತ್ತಾದ್ದು. ಗತರಸ= ಮುಂಚೆ ರಸೋಪೇತವಾಗಿಮತ್ತೆ ಸ್ವಾದುತ್ವಾದಿ ಇಲ್ಲದ್ದು. ಪೂತಿ = ಹಳಸಾದಿ ವಾಸನೆ ಕೂಡಿದ್ದು. ಪರ್ಯುಷಿತಂ = ತಂಗಳು. ಉಚ್ಛಿಷ್ಟ=ಊಟ ಮಾಡಿ ಉಳಿದ್ದು. ಅಮೇಧ್ಯ = ಕ್ರಿಮಿಕೀಟಾದಿಗಳಿಂದ ಅಪವಿತ್ರವಾದುದು. ಇವು ತಾಮಸ ಆಹಾರ. ॥ ೧೦ ॥

ಯಜ್ಞದಲ್ಲಿ ತ್ರೈವಿಧ್ಯ ಉಪಪಾದನ ಮಾಡುತ್ತಾನೆ. ಯಾವ ಫಲಾಪೇಕ್ಷೆ ಇಲ್ಲದೆ ಶಾಸ್ತ್ರರೀತಿಯನ್ನು ಅನುಸರಿಸಿ ಸದ್ದ್ರವ್ಯಾದಿಗಳಿಂದ ಮಂತ್ರ ಕ್ರಿಯಾದಿಲೋಪವಿಲ್ಲದೆ ಇದು ಭಗವದಾರಾಧನವೆಂದು ಶಾಂತಚಿತ್ತನಾಗಿ ಮಾಡುವ ಯಾಗ ಸಾತ್ವಿಕ. ॥ ೧೧ ॥

ಫಲೇಚ್ಛಾದಿಂದ ಮತ್ತು ದಂಭಾರ್ಥ ಪೂಜ್ಯತಾಸಿದ್ಧಿ ಉದ್ದಿಶ್ಯ ಯಾರು ಯಾಗ ಮಾಡುವನೋ ಅದು ರಾಜಸ. ॥ ೧೨ ॥

ಶಾಸ್ತ್ರೋಕ್ತ ವಿಧಿಗೆ ವಿಹೀನ ಅನ್ನದಾನಾದಿಗಳಿಲ್ಲದ ಮಂತ್ರದಾನ ಶ್ರದ್ಧಾದಿ ಇಲ್ಲದ ಯಾಗ ತಾಮಸವೆಂದು ತಿಳಿ. ॥ ೧೩ ॥

ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥
ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥
ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ವಿಕಂ ಪರಿಚಕ್ಷತೇ ॥ ೧೭ ॥

---

ಹಿಂದೆ ನಿರೂಪ್ಯತ್ವೇನ ಪ್ರತಿಜ್ಞಾ ಮಾಡಿದ ತಪೋಭೇದೇನ ಸಾತ್ವಿಕಾದಿ ವಿವರ ತಿಳಿಸುವ ಬಗ್ಯೆ ತಪಸ್ಸೆಂಬುವುದು ಶರೀರ, ವಾಕ್, ಮನಸ್ಸು ಈ ಮೂರರಿಂದ ಸಾಧ್ಯವಾದ ಕಾರಣ ಪ್ರಥಮತಃ ಶಾರೀರಿಕ ತಪಸ್ಸನ್ನು ನಿರೂಪಿಸುವನು. ದೇವ, ಗುರು, ದ್ವಿಜ, ಜ್ಞಾನಿ ಇವರುಗಳ ಯಥಾಯೋಗ್ಯವಾದ ಪೂಜಾ ಬಾಹ್ಯಾಂತರ ಶುದ್ಧಿ (ಅಂದರೆ ಸ್ನಾನಾದಿರೂಪ ಬಾಹ್ಯ ಶುದ್ಧಿ, ಮನೋನೈರ್ಮಲ್ಯರೂಪ ಆಂತರಶುದ್ಧಿ) ಬ್ರಹ್ಮಚರ್ಯ=ಸ್ತ್ರೀಯಾದಿ ವಿಷಯಪ್ರಾಪ್ತಿ ಅಂದರೆ ಊರ್ಧ್ವರೇತಸ್ಕತಾ ಇದು ಶಾರೀರವಾದ ತಪಸ್ಸು. ॥ ೧೪ ॥

ವಾಚನಿಕ ತಪಸ್ಸನ್ನು ನಿರೂಪಿಸುವನು—ಪರದುಃಖಾಜನಕವಾಗಿರುವ ಯಥಾರ್ಥವಾದ ತಾತ್ಕಾಲಿಕ ಸುಖವನ್ನೂ, ಬಹುಕಾಲೀನ ಸುಖವನ್ನೂ ಕೊಡುವ ವಾಕ್ಯಪ್ರಯೋಗ, ಹಾಗೆಯೇ ವೇದಾಧ್ಯಯನ ತದಾವೃತ್ತಿ ಇದು ವಾಙ್ಮಯವಾದ ತಪಸ್ಸು. ॥ ೧೫ ॥

ಮಾನಸಿಕ ತಪವನ್ನು ನಿರೂಪಿಸುವನು–ಮನಃ ಪ್ರಸಾದಃ=ಕ್ರೋಧಾದ್ಯ ಕಲುಷಿತವಾದ ಮನಸ್ಸು, ಸೌಮ್ಯತಾ=ಅಕ್ರೂರನಾಗಿರೋಣ, ಮೌನಂ= ಸದಾ ಶಾಸ್ತ್ರಾದಿ ವಿಚಾರ, ಆತ್ಮವಿನಿಗ್ರಹಃ=ಸದಾ ಮನಸ್ಸನ್ನು ಪರಮಾತ್ಮನಲ್ಲಿ ಇರಿಸೋಣ, ಭಾವಸಂಶುದ್ಧಿಃ=ನಾನಾತರವಾದ ವಿಷಯೇಚ್ಛಾ ಇಲ್ಲದಿರೋಣ ಇದು ಮಾನಸಿಕ ತಪಸ್ಸು. ॥ ೧೬ ॥

ಈಗ ಸಾತ್ವಿಕ ತಪಸ್ಸುಳ್ಳವನು ಸಾತ್ವಿಕನೆಂತಲೂ, ಸಾತ್ವಿಕಾದಿ ತಪೋಭೇದದಿಂದ ಸಾತ್ವಿಕಾದಿ ಜೀವಪ್ರಭೇದವನ್ನು ೩ ಶ್ಲೋಕದಿಂದ ತಿಳಿಸುವನು. ಶ್ರದ್ಧೆಯಿಂದ ಮಾಡಿದ ತಪಸ್ಸು ಮೂರು ವಿಧ. ಆ ಪೈಕಿ ಪರಮಾತ್ಮ ಪ್ರೀತಿ

ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮ ॥

ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।
ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥೧೯॥

ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥

---

ವ್ಯತಿರಿಕ್ತ ಫಲಕಾಮನಾ ಇಲ್ಲದೆ ಮಾಡುವ ತಪಸ್ಸು ಸಾತ್ವಿಕ ತಪಸ್ಸು. ಅಂಥಾ ತಪಸ್ವಿಯೇ ಸಾತ್ವಿಕನು. ॥ ೧೭ ॥

ಲೋಕದಲ್ಲಿ ಸತ್ಕಾರ–ಮಾನಸಿಕವಾದ ಆದರ, ಮಾನ–ವಾಚನಿಕ ಸ್ತುತಿ, ಶಾರೀರವಾದ ನಮಸ್ಕಾರರೂಪವಾದ ಪೂಜಾ, ಏತದರ್ಥವಾಗಿ ದಂಭ ದಿಂದ ಯಾವ ತಪಸ್ಸು ಮಾಡಲ್ಪಡುತ್ತದೋ, ಅದು ರಾಜಸ ತಪಸ್ಸು. ಅಂತಹ ತಪಸ್ವಿಯು ರಾಜಸನು. ಅಂತಹ ತಪಸ್ಸು ನಿತ್ಯವಾದ ಸುಖವನ್ನು ಕೊಡತಕ್ಕಂತಾದ್ದಲ್ಲ. ಆತಏವ ಅದು ಚಲವೆಂತಲೂ ಅಧ್ರುವವೆಂತಲೂ ಅನ್ನಿಸಿಕೊಳ್ಳುತ್ತದೆ. ॥ ೧೮ ॥

ಇನ್ನು ತಾಮಸ ತಪಸ್ಸನ್ನೂ ತಾಮಸ ತಪಸ್ವಿಯನ್ನೂ ನಿರೂಪಿಸು ವನು—ಮೂಢಗ್ರಾಹೇಣ=ಅವಿವೇಕದಿಂದ ಅಥವಾ ದುರಾಗ್ರಹದಿಂದ ವೃಥಾ ತನಗೆ ದುಃಖದಿಂದ ಮಾಡುವ ಮತ್ತು ಶತ್ರುನಾಶಾರ್ಥವಾಗಿಯಾ ದರೂ ಮಾಡುವ ತಪಸ್ಸು ತಾಮಸವಾದದ್ದು. ಅಂತಹ ತಪಸ್ವಿಯು ತಾಮ ಸನು. ॥ ೧೯ ॥

ಹಿಂದೆ ಪ್ರತಿಜ್ಞಾ ಮಾಡಿದ ದಾನದ ತ್ರೈವಿಧ್ಯವನ್ನು ನಿರೂಪಿಸಿ ದಾನ ಭೇದೇನ ಸಾತ್ವಿಕಾದಿ ಭೇದವನ್ನು 3 ಶ್ಲೋಕದಿಂದ ನಿರೂಪಿಸುವನು. ದಾತವ್ಯಮಿತಿ=ಕೇವಲ ಆಸ್ತಿಕ್ಯಬುದ್ಧಿಯಿಂದ ತನಗೆ ಉಪಕಾರ ಮಾಡಿದವ ನೆಂದಾಗಲೀ ಮಾಡುವವನೆಂದಾಗಲೀ ವಿವಕ್ಷೆಯಿಲ್ಲದೆ ಸತ್ಪಾತ್ರನಲ್ಲಿ ಉಚಿತ ದೇಶಕಾಲದಲ್ಲಿ ಕೊಡುವ ದಾನವೇ ಸಾತ್ವಿಕವಾದುದು. ಅಂತಹ ದಾತನು ಸಾತ್ವಿಕನು. ॥ ೨೦ ॥

ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಮ್ ॥ ೨೧ ॥
ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।
ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥ ೨೨ ॥
ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥

---

ಮತ್ತೊಬ್ಬನಿಂದ ಪ್ರತ್ಯುಪಕಾರರೂಪ ಫಲವನ್ನು ಮನಸ್ಸಿನಲ್ಲಿಟ್ಟು ಕೊಂಡು ಅನ್ಯಾಯಾರ್ಜಿತವಾದ ವಸ್ತುವನ್ನು ಯಾರು ದಾನ ಮಾಡುವನೋ ಅಂತಹ ದಾತನು ರಾಜಸನು. ಆ ದಾನವು ರಾಜಸವೆನ್ನಲ್ಪಡುವುದು. ॥ ೨೧ ॥

ಅಶುಚಿಯಾದ ದೇಶ ಕಾಲದಲ್ಲಿ ಕುಪಾತ್ರದಲ್ಲಿ ಮಾನಸಿಕ ಕಾಯಿಕ ವಂದನಾರಹಿತವಾಗಿ ಅವಜ್ಞಾದಿಸಹಿತವಾದ ದಾನವು ತಾಮಸವಾದುದು. ಅಂತಹ ದಾನ ಕೊಡುವವನು ತಾಮಸನು. ॥ ೨೨ ॥

ಅಫಲಾಕಾಂಕ್ಷಿಭಿರಿತ್ಯಾದಿ ಶ್ಲೋಕಗಳಿಂದ ಯಜ್ಞ ದಾನ ತಪಸ್ಸು ಇವುಗಳಿಂದ ಸಾತ್ವಿಕತ್ವ, ರಾಜಸತ್ವಾದಿಗಳ ಕುರಿತು ಕೆಲವು ಅಸಾಧಾರಣ ಹೇತುಗಳನ್ನು ಹೇಳಿದ್ದಾರೆ. ಈಗ ಯಜ್ಞ ದಾನ ತಪಸ್ಸುಗಳ ಸಾಧಾರಣ ಧರ್ಮಗಳನ್ನು ಹೇಳುವ ಉದ್ದಿಶ್ಯ ಪೂರ್ವಿಕರ ಅನೇಕರ ಚರಿತ್ರೆ ಅನುವಾದ ಮಾಡುತ್ತಾನೆ. (ನಿರ್ದಿಶ್ಯತೇ ಅನೇನೇತಿ ನಿರ್ದೇಶಃ)ನಿರ್ದೇಶವೆಂದರೆ ನಾಮ, ಓಂ, ತತ್, ಸತ್ ಎಂತ ಪರಬ್ರಹ್ಮನದ್ದು ಮೂರು ನಾಮ. ಸಮಸ್ತವಾದ ಜಗತ್ತು ಪರಮಾತ್ಮನಲ್ಲಿ ಪ್ರವಿಷ್ಟವಾದ್ದಾದ ಕಾರಣ ಓಂ ಎಂತ ಹೆಸರು. ಕೇವಲ ವೇದವೇದ್ಯತ್ವಾತ್ ತತ್ ಎಂದು. ದೋಷರಹಿತ ನಿಖಿಲಗುಣಯುಕ್ತನಾದ್ದರಿಂದ ಸತ್ ಎಂದು ಹೆಸರು. ಈ ಪ್ರಕಾರ ಮೂರು ನಾಮ ಸ್ಮೃತ್ಯಾದಿ ವಿಹಿತವಾದ ನಾಮ. ತೇನ ಅಂದರೆ ಬ್ರಹ್ಮನಿಂದ ತನ್ನ ಪೂಜಾದಿಂದ ಫಲಪ್ರಾಪ್ತ್ಯರ್ಥವಾಗಿ ಬ್ರಾಹ್ಮಣರು ಸೃಷ್ಟಿಯ ಆದಿಕಾಲದಲ್ಲಿ ಸೃಷ್ಟರಾದರು. ವೇದಗಳೂ ಅಭಿವ್ಯಕ್ತಗಳಾದವು. ಯಾಗಾದಿಗಳೂ ಸೃಷ್ಟಗಳಾದವು. ॥ ೨೩ ॥

ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।
ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ॥೨೪॥
ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।
ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ ೨೫ ॥
ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥

---

ತಸ್ಮಾತ್ ಓಂ ಎಂಬ ನಾಮ ಭಗವನ್ನಾಮವಾದ ಕಾರಣ ಓಂ ಎಂದು ಪ್ರಥಮತಃ ಉಚ್ಚಾರಣ ಮಾಡಿ ಬ್ರಹ್ಮವಾದಿಗಳಾದವರ ಯಜ್ಞ ದಾನ ತಪಸ್ಸು ಮೊದಲಾದ ಕ್ರಿಯೆಗಳು ನಡಿಯುವವು. ತಥಾಚ ಪರಮಾತ್ಮಗೆ ಓಂ ಶಬ್ದ ಬರಲು ಏನು ಕಾರಣವೆಂದು ಓಂ ಶಬ್ದಾರ್ಥ ಜ್ಞಾನ ಪೂರ್ವಕವಾಗಿ ವೇದೋಕ್ತರೀತಿಯಿಂದ ಯಾಗಾದಿಗಳನ್ನು ಮಾಡುವುದು ಸಾತ್ವಿಕತ್ವೇ ಹೇತು ಎಂದು ಹೇಳಿದಂತಾಯಿತು. ॥ ೨೪ ॥

ಮತ್ತು ಕರ್ಮಾದಿಗಳಿಗೆ ಸಾತ್ವಿಕತ್ವೇ ಹೇತು ನಿರುಪಿಸುವನು. ತತ್ ಫಲಂ ಅನಭಿಸಂಧಾಯ—ವೇದೋಕ್ತವಾದ ಸ್ವರ್ಗಾದಿರೂಪ ಫಲವನ್ನು ಉದ್ದೇಶಿಸದೆ ತತ್‌ಶಬ್ದವಾಚ್ಯ ಪರಮಾತ್ಮನ ಉದ್ದಿಶ್ಯ. ಅಂದರೆ ತತ್ಪ್ರೀತಿ ಕಾಮನಾದಿಂದ ಮೋಕ್ಷೇಚ್ಛುಗಳಿಂದ ಯಜ್ಞದಾನ ತಪಸ್ಸಾದಿ ಕ್ರಿಯಾದಿಗಳು ಮಾಡಲ್ಪಡುವವು. ತಥಾಚ ತತ್ಪದ ವಾಚ್ಯ ಪರಮಾತ್ಮೋದ್ದೇಶದಿಂದ ಪರಮಾತ್ಮೇತರ (ಅಂದರೆ ತತ್ಪ್ರೀತಿ ವ್ಯತಿರಿಕ್ತ) ಸ್ವರ್ಗಾದ್ಯನ್ಯಕಾಮನಾರಹಿತವಾಗಿ ಯಾಗಾದಿ ಮಾಡುವುದು ಸಾತ್ವಿಕತ್ವೇ ಹೇತು ಎಂದು ಹೇಳಿದಂತಾಯಿತು. ॥ ೨೫ ॥

ಸಾಧುಗುಣೋಪೇತತಯಾ ಸಚ್ಛಬ್ದವಾಚ್ಯ ಪರಮಾತ್ಮಜ್ಞಾನ ಪೂರ್ವಕಅನುಷ್ಠಾನವು ಯಾಗಾದಿಗಳಿಗೆ ಸಾತ್ವಿಕತ್ವೇ ಹೇತು ಎಂದು ಹೇಳುತ್ತಾನೆ. ಸಧ್ಭಾವೇ ಪೂರ್ವದಲ್ಲಿ ಇಲ್ಲದ್ದಕ್ಕೆ ಸತ್ತೆಯನ್ನು ಕೊಡುವುದರಲ್ಲಿ ಕೊಡುವ ಪರಮಾತ್ಮನಲ್ಲಿ, ಸಾಧುಭಾವೇ ಸಾಧುತ್ವದಲ್ಲಿ, ಪ್ರಶಸ್ತ ಯಾಗಾದಿ ಕರ್ಮಗಳಿಗೂ ಕೂಡಾ ಸತ್ ಶಬ್ದ ಉಂಟು. ತಥಾಚ ಬ್ರಹ್ಮಜ್ಞಾನ ಭಕ್ತಿ ಪೂರ್ವಕ ಬ್ರಹ್ಮವಿಷಯಕ ಬುದ್ಧಿಯಿಂದ ಫಲಾನುಸಂಧಾನ ಇಲ್ಲದೆ

ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥
ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।
ಅಸದಿತ್ಯುಚ್ಯತೇ ಪಾರ್ಥ ನಚ ತತ್ಪ್ರೇತ್ಯ ನೋ ಇಹ ॥ ೨೮ ॥

॥ ಇತಿ ಸಪ್ತದಶೋಽಧ್ಯಾಯಃ ॥

---

ಬ್ರಾಹ್ಮಣರಿಂದ ಕೂಡಿ ಮಾಡುವ ಯಾಗಾದಿ ಸಾತ್ವಿಕ. ಇತರ ರಾಜಸ ತಾಮಸವೆಂದು ಸೂಚಿಸಿದಂತಾಯಿತು. ॥ ೨೬ ॥

ಯಜ್ಞಾದಿಕರ್ಮಗಳಲ್ಲಿ ಭಗವನ್ನಿಷ್ಠಾಪೂರ್ವಕತ್ವವೂ ಸಚ್ಛಬ್ದಾರ್ಥ ವೆಂದು ನಿರೂಪಿಸುವನು. ಸ್ಥಿತಿ ಅಂದರೆ ನಿಷ್ಠಾ ಅಂದರೆ ಪರಮಾತ್ಮನು ಈ ಯಜ್ಞದಾನ ಜಪಾದಿ ಕರ್ಮಗಳಿಂದ ಫಲ ಕೊಡುವನೆಂಬ ಬುದ್ಧಿಯು ಇಂಥಾ ಯಜ್ಞತಪಸ್ಸು ದಾನ ಇವುಗಳಲ್ಲಿರುವ ನಿಷ್ಠಾ ಸತ್ ಎಂದು ಅನಿಸಿ ಕೊಳ್ಳುತ್ತೆ. ಕರ್ಮಚ ತದರ್ಥೀಯಂ-ತ್ರೈವರ್ಣಿಕರಿಂದ ಮಾಡುವ ಕರ್ಮವು ಸತ್ ಎಂದು ಅನಿಸಿಕೊಳ್ಳುತ್ತೆ. ॥ ೨೭ ॥

ಯಜ್ಞದಾನಾದಿಗಳಿಗೆ ಸಾತ್ವಿಕತ್ವೇ ಪ್ರಯೋಜಕ ಧರ್ಮಗಳನ್ನು ಹೇಳಿ ತಾಮಸಾದಿತ್ವೇ ಪ್ರಯೋಜಕ ಧರ್ಮ ನಿರೂಪಿಸುವನು. ಪರಮಾತ್ಮನಲ್ಲಿ ಶ್ರದ್ಧಾ ಇಲ್ಲದೆ ಶಾಸ್ತ್ರೀಯವಾಗಿಯಾದರೂ ಹುತವಾದ್ದು ದಾನ ಕೊಟ್ಟದ್ದು ತಪಸ್ಸು ಮಾಡಿದ್ದು ಎಲ್ಲವೂ ಅಸತ್ ಎಂದು ಅನಿಸಿಕೊಳ್ಳುತ್ತೆ. ಇಹಪರ ಗಳಲ್ಲಿ ಫಲದಾಯಕವೂ ಅಲ್ಲ. ತಥಾಚ ಭಗವಚ್ಛ್ರದ್ಧಾ ಭಕ್ತಿಪೂರ್ವಕ ಅನುಷ್ಠಿತ ಹೋಮಾದಿ ಕರ್ಮವೇ ಇಹಪರಗಳಲ್ಲಿ ಫಲದಾಯಕ. ಆದ್ರಿಂದ ಶ್ರದ್ಧಾನೆ ಮುಖ್ಯ. ತ್ರಿವಿಧಾಭವತಿ ಶ್ರದ್ಧಾ ದೇಹಿನಾಂ ಎಂತ ಪ್ರಾಧಾನ್ಯೇನ ನಿರೂಪಿಸಿದ್ದು ಶ್ರದ್ಧಾ ಇಲ್ಲದ್ದಲ್ಲಿ ಶಾಸ್ತ್ರಾನುಸಾರಿಯಾಗುವುದೆ ಇಲ್ಲ. ॥ ೨೮ ॥

# ಅಷ್ಟಾದಶೋಽಧ್ಯಾಯಃ

॥ ಅರ್ಜುನ ಉವಾಚ ॥

**ಸನ್ನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧ ॥**

॥ ಶ್ರೀಭಗವಾನುವಾಚ ॥

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ನ್ಯಾಸಂ ಕವಯೋ ವಿದುಃ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥**

---

ಹಿಂದಿನ ಅಧ್ಯಾಯಗಳಲ್ಲಿ (ತ್ರೈಗುಣ್ಯವಿಷಯಾ ವೇದಾಃ ಇತ್ಯಾದಿನಾ) ಪುರುಷಾರ್ಥಸಾಧನವಾದ ಜ್ಞಾನಸಾಧನವನ್ನು ಅಲ್ಲಲ್ಲಿ ಹೇಳಿದ್ದನ್ನು ಅಜ್ಞಜನರ ಸೌಕರ್ಯಾರ್ಥ ಸಂಗ್ರಹೇಣ ಈ ಅಧ್ಯಾಯದಲ್ಲಿ ನಿರೂಪಿಸುವನು ಭಗವಾನ್ ಶ್ರೀಕೃಷ್ಣ. (ಸನ್ನ್ಯಾಸಶ್ಚೈವ ಯೋಗಶ್ಚ ನಿಃಶ್ರೇಯಸಕರಾವುಭೌ) ಇತ್ಯಾದಿಯಿಂದ ಪಂಚಮಾಧ್ಯಾಯದಲ್ಲಿ ಸನ್ಯಾಸಕ್ಕೆ (ತ್ಯಾಗಾಚ್ಛಾಂತಿರನಂತರಂ) ಯೆಂತ ದ್ವಾದಶಾಧ್ಯಾಯದಲ್ಲಿ ತ್ಯಾಗಕ್ಕೂ ಪುರುಷಾರ್ಥಸಾಧನತ್ವ ಹೇಳಿದೆ. ಈ ಸನ್ಯಾಸಶಬ್ದ ತ್ಯಾಗಶಬ್ದ ಏಕಾರ್ಥಕಗಳೋ ಅಥವಾ ಭಿನ್ನಾರ್ಥಕಗಳೋ, ಭಿನ್ನಾರ್ಥಕಗಳಾದರೆ ಪೃಥಕ್ಕಾಗಿ ತಿಳಿಯಲು ಅಪೇಕ್ಷಿಸುವೆನು. ಏಕಾರ್ಥಕವಾದರೂ ನಿರೂಪಿಸೆಂದು ಅರ್ಜುನನು ಪ್ರಶ್ನೆ ಮಾಡುವನು. ಕೃಷ್ಣನಲ್ಲಿ ಮಹಾ ಜ್ಞಾನಸೂಚನಾರ್ಥ ಕೇಶವನೆಂದು ಸಂಬೋಧಿಸುವನು. ಕಶ್ಚ ಈಶಶ್ಚ ಕೇಶೌ ವಾತಿ ಪ್ರೇರಯತೀತಿ ಕೇಶವ ಬ್ರಹ್ಮರುದ್ರಾದಿಗಳ ಉಪದೇಶಕ ಎಂದರ್ಥ. ಹಾಗೇ ಆಸುರಸ್ವಭಾವದ ಅಜ್ಞಾನ ನಿರಸನ ಶಕ್ತಿ ಸೂಚನಾರ್ಥ ಕೇಶಿದೈತ್ಯನಾಶಕನೆಂತಲೂ ಸಂಬೋಧಿಸುವನು. ॥ ೧ ॥

ಸನ್ನ್ಯಾಸಶಬ್ದಕ್ಕೂ ತ್ಯಾಗಶಬ್ದಕ್ಕೂ ವಿವಕ್ಷಾಭೇದೇನ ಅರ್ಥಭೇದ ಉಂಟೆಂದು ಸಮಾಧಾನ ಹೇಳುವನು ಶ್ರೀಕೃಷ್ಣ. ಜ್ಯೋತಿಷ್ಟೋಮಾದಿ ಯಾಗಗಳು ಕಾಮ್ಯಾಕಾಮ್ಯ. ಅಂದರೆ, ಸ್ವರ್ಗಕಾಮನಯಾ ಮಾಡಿದರೆ ಕಾಮ್ಯ. ಕೇವಲ ಭಗವತ್ಪ್ರೀತಿ ಕಾಮನಯಾ ಮಾಡಿದರೆ ಅಕಾಮ್ಯ. ಕಾರೀರ್ಯಾದಿ ರೂಪ ಯಾಗಗಳು ಕಾಮ್ಯಗಳೇ. ಇವುಗಳಲ್ಲಿ ಕಾಮ್ಯಾಕಾಮ್ಯವಾದ

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ। ॥ ೩ ॥**
**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪ ॥**

---

ಜ್ಯೋತಿಷ್ಟೋಮಾದಿಗಳನ್ನು ಸ್ವರ್ಗಾದಿ ಕಾಮನಯಾ ಮಾಡದಿರೋಣ ಕೇವಲ ಕಾಮ್ಯ ಕಾರೀಯಾದಿಗಳನ್ನು ಸರ್ವಥಾ ಮಾಡದಿರೋಣವನ್ನು ಸನ್ನ್ಯಾಸ ಶಬ್ದಾರ್ಥವೆಂದು ಜ್ಞಾನಿಗಳು ಸಮ್ಮತಿಸಿದ್ದಾರೆಂದು ಹೇಳುವನು. ತ್ಯಾಗವೆಂದರೆ ಸರ್ವ ಕರ್ಮಕ್ಕೂ ಭಗವತ್ಪ್ರೀತಿಕರ ಫಲತ್ಯಾಗವೇ ತ್ಯಾಗ ಶಬ್ದಾರ್ಥವೆಂದು ಹೇಳುವನು. ಕೆಲವರು ಕಾಮ್ಯಾನಾಂ ಕರ್ಮಣಾಂ ನ್ಯಾಸ ವೆಂದರೆ ಕಾಮ್ಯಗಳಾದ ಅಶ್ವಮೇಧಾದಿ ಯಾಗಗಳನ್ನು ಸರ್ವಥಾ ಮಾಡದಿರೋಣವೆ ಎಂದು ಹೇಳುವರು. ಅದು ತಪ್ಪು. ಜನಕಾದಿ ಮಹಾ ಮುಮುಕ್ಷು ರಾಜರು ಸಹಾ ಅಶ್ವಮೇಧಾದಿ ಯಾಗ ಮಾಡಿದ್ದು ಸರ್ವಪ್ರಸಿದ್ಧ. ಆದುದರಿಂದ ಸ್ವರ್ಗಾದಿ ಕ್ಷುದ್ರ ಕಾಮನಯಾ ಅನನುಷ್ಠಾನ ಮಾತ್ರ ಸನ್ನ್ಯಾಸ ಶಬ್ದಾರ್ಥತ್ವೇನ ಹೇಳಬೇಕು. ॥ ೨ ॥

ಶ್ರೀಕೃಷ್ಣನು ಪೂರ್ವಶ್ಲೋಕದಲ್ಲಿ ಸರ್ವಕರ್ಮಫಲತ್ಯಾಗಂ ಇತ್ಯಾದಿಯಿಂದ ತಾನು ಹೇಳಿದ ತ್ಯಾಗ ಶಬ್ದಾರ್ಥ ಅರ್ಜುನನಿಗೆ ನಿರ್ಧಾರಿತವಾಗುವ ಬಗ್ಗೆ ಆಪಾತತಃ ಇರುವ ವಿದ್ವದ್ವಿವಾದ ತಿಳಿಸುವನು. ಏಕೆ ಮನೀಷಿಣಃ ಜ್ಞಾನಿಗಳಿಗೆ ರಾಗಾದಿ ದೋಷಗಳು ಹೇಗೆ ತ್ಯಾಜ್ಯಗಳೋ ತದ್ವತ್ ಬಂಧಕವಾದ್ದರಿಂದ ಕರ್ಮ ಯಾವತ್ತು ಕಾಮ್ಯವಾದ್ದು ಸರ್ವಥಾ ತ್ಯಾಜ್ಯವೆಂದನ್ನುವರು. ಅಪರೇ ಮನೀಷಿಣಃ ಇನ್ನು ಕೆಲವು ಜ್ಞಾನಿಗಳು ಯಜ್ಞ, ದಾನ, ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸು ಬಿಡುವುದಲ್ಲವೆಂದನ್ನುವರು. ಹಿಂದಿನ ಕಲ್ಪದಲ್ಲೂ ಮನೀಷಿಣಃ ಎಂತ ಕೊಟ್ಟದ್ದರಿಂದ ಫಲತ್ಯಾಗ ಮಾತ್ರ ಇಟ್ಟುಕೊಳ್ಳಬೇಕು. ಸಂಪೂರ್ಣ ಕರ್ಮಕ್ಕೆ ತ್ಯಾಗವಲ್ಲ. ಆಪಾತದೃಷ್ಟ್ಯೈ ಮಾತ್ರ ಎರಡು ಪಕ್ಷಗಳಿಗೂ ವಿರೋಧವೇ ಹೊರತಾಗಿ ಫಲತಃ ಅಲ್ಲ. ॥೩॥

ಅವಿರೋಧದ ರೀತಿಯನ್ನು ಪ್ರತಿಜ್ಞಾಪೂರ್ವಕ ನಿರೂಪಿಸುವನು. ತತ್ರ ವಿವಾದಾಸ್ಪದವಾದ ತ್ಯಾಗವಿಷಯದ ನಿಶ್ಚಯವನ್ನು ಶೃಣು—ಸಾವಧಾ

ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ ೫ ॥
ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ॥ ೬ ॥
ನಿಯತಸ್ಯ ತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ ।
ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ ೭ ॥

---

ನತಃ ಕೇಳು ತ್ಯಾಗವು ಮೂರು ವಿಧವಾದ್ದು. ಫಲತ್ಯಾಗ, ಕರ್ಮದಲ್ಲಿ ನನ್ನದೆಂಬಮಮತಾತ್ಯಾಗ, ಪರಮಾತ್ಮನಲ್ಲಿ ಕರ್ತೃತ್ವಾನುಸಂಧಾನ ಪೂರ್ವಕವಾಗಿ ತನ್ನಲ್ಲಿ ಕರ್ತೃತ್ವಾಭಿಮಾನ ತ್ಯಾಗವೆಂದು. ॥ ೪ ॥

ಪ್ರತಿಜ್ಞಾತವಾದ ನಿಶ್ಚಯವನ್ನು ತಿಳಿಸುವನು. ಯಜ್ಞ–ದ್ರವ್ಯಯಜ್ಞ ಜ್ಞಾನಯಜ್ಞಾದಿ ರೂಪವಾದ್ದು. ದಾನ–ಅನ್ನಾದಿದಾನ ವಿದ್ಯಾದಾನ ಅಭಯದಾನಾದಿ ರೂಪವಾದ್ದು. ತಪಃ–ಕೃಚ್ಛ್ರ ಚಾಂದ್ರಾಯಣಾದಿ ರೂಪವಾದದ್ದು, ಸದಾ ಕಾರ್ಯವೇ. ಯಾಕಂದರೆ ಯಜ್ಞಾದಿಗಳು ಮನೀಷಿಣಾಂ ಮನನಶೀಲರಾದವರಿಗೆ ಪಾವನಾನಿ ಪಾವಿತ್ರ್ಯದಾಯಕ. ಅಂದರೆ ಅಬಂಧವೆಂದು ತಾತ್ಪರ್ಯ. ಯಜ್ಞ, ದಾನ, ತಪಸ್ಸು ಸರ್ವರಿಗೇ ಕಾರ್ಯ. ಹೇಗೆಂದರೆ ಯತ್ಯಾದಿಗಳಿಗೆ ಯಜ್ಞವೆಂದರೆ ಜ್ಞಾನಯಜ್ಞ ಅಭಯದಾನ, ಬ್ರಹ್ಮಚರ್ಯರೂಪ ತಪಸ್ಸು, ಸ್ತ್ರೀಶೂದ್ರಾದಿಗಳಿಗೂ ಭಗವನ್ನಾಮಾಧ್ಯಯನರೂಪ ಯಜ್ಞ, ಅನ್ನ ಅಭಯಾದಿದಾನ, ಸತ್ಯವಚನ ಉಪವಾಸಾದಿ ರೂಪ ತಪಸ್ಸು ಉಂಟು. ॥ ೫ ॥

ಯಜ್ಞಾದಿ ಕರ್ಮಗಳು ಕಾರ್ಯಗಳಾದರೆ ಪೂರ್ವದಲ್ಲಿ ತ್ಯಾಜ್ಯಂ ದೋಷವದಿತಿ ಉಕ್ತವಾದ ತ್ಯಾಜ್ಯತ್ವ ಹೇಗೆ ಕೂಡುವದೆಂದರೆ ಕರ್ಮಗಳಲ್ಲಿ ಮಮತ್ವ ಮತ್ತು ಫಲತ್ಯಾಗ ಮಾತ್ರ ತ್ಯಾಜ್ಯ ಹೊರತು ಸ್ವರೂಪತಃ ಯಜ್ಞಾದಿ ಕರ್ಮ ತ್ಯಾಗವಲ್ಲ, ಕರ್ತವ್ಯವೆಂದು ನನ್ನ ಸಿದ್ಧಾಂತ. ॥ ೬ ॥

(ತ್ಯಾಗೋ ಹಿ ತ್ರಿವಿಧಃ) ಎಂತ ಹೇಳಿದ್ದನ್ನೇ ವಿವರವಾಗಿ ನಿರೂಪಿಸುವನು. ನಿಯತಸ್ಯ ಕರ್ಮಣಃ ಸ್ವವರ್ಣಾಶ್ರಮೋಚಿತ ಕರ್ಮದ ತ್ಯಾಗವು ಯುಕ್ತವಲ್ಲ. (ಸ್ವಯಜ್ಞಾದೀನ್ ಪರಿತ್ಯಜ್ಯನಿರಯಂ ಯಾತ್ಯಸಂಶಯಂ) ಎಂತ ಪಾದ್ಮದಲ್ಲಿ ಉಂಟು. ಮೋಹಾತ್ತಸ್ಯ ತ್ಯಾಗಃ ಸರ್ವಥಾ ಕರ್ಮವೇ

ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥
ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥೯॥
ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥೧೦॥

---

ತ್ಯಾಜ್ಯ ಫಲತ್ಯಾಗವಲ್ಲವೆಂದು ಬಿಡೋಣವು. ತಾಮಸ ತಮೋಮೂಲ ತಮಸ್ಸು ಅಜ್ಞಾನಕ್ಕೆ ಮೂಲ (ಪ್ರಮಾದ ಮೋಹೌ ಭವತೋ ತಮಸೋಽಜ್ಞಾನಮೇವ ಚ ಎಂದು ಹೇಳಿದೆ. "ಅನ್ನಮಯಂ ಹಿ ಸೋಮ್ಯಮನಃ) ಎಂತ ಅನ್ನದಿಂದ ಮನೋಪುಷ್ಟಿ" ಆಹಾರಶುದ್ಧೌ ಸತ್ವಶುದ್ಧಿಃ ಸತ್ವಶುದ್ಧೌ ಧ್ರುವಾ ಸ್ಮೃತಿಃ ಸ್ಮೃತಿಲಂಭೆ ಸರ್ವಗ್ರಂಥೀನಾಂ ವಿಪ್ರಮೋಕ್ಷಃ)ಎಂತ ಇರೋಣದರಿಂದ ಬ್ರಹ್ಮಜ್ಞಾನಕ್ಕೆ ಆಹಾರಶುದ್ಧಿಯೂ ಅವಶ್ಯಕವಾದ್ದರಿಂದ ಯಜ್ಞಾದಿರೂಪ ಕರ್ಮ ಆವಶ್ಯಕವಾದ್ದು ॥ ೭ ॥

ತಾಮಸತ್ಯಾಗವನ್ನು ಹೇಳಿ ರಾಜಸತ್ಯಾಗವನ್ನು ನಿರೂಪಿಸುವನು. ಯಜ್ಞಾದಿ ಸ್ವವರ್ಣಾಶ್ರಮೋಚಿತ ಕರ್ಮವನ್ನು ದುಃಖಜನಕವೆಂದು ಕ್ಲೇಶ ಭಯದಿಂದಬಿಡುವುದು ರಾಜಸವು. ಅದು ತ್ಯಾಗಫಲವಾದ ಪುರುಷಾರ್ಥ ಸಾಧಕವಾಗುವುದಿಲ್ಲ. ॥ ೮ ॥

ಸಾತ್ವಿಕತ್ಯಾಗ ನಿರೂಪಿಸುವನು. ಅವಶ್ಯ ಕಾರ್ಯ ಅಂದರೆ ಸ್ವವರ್ಣಾಶ್ರಮೋಚಿತವಾದ ಯಜ್ಞಾದಿರೂಪ ಕರ್ಮ ಭಗವತ್ಪ್ರೀತಿಜನಕ. ಅನ್ಯಥಾ ಪಾಪ ಬರುವುದೆಂದು ಮಮತಾಬುದ್ಧಿಯನ್ನು ಸ್ವರ್ಗಾದಿರೂಪ ಫಲವನ್ನು ಕಾಮಿಸದೆ ಯಾರು ಮಾಡುವನೋ, ಆ ಫಲಾದಿತ್ಯಾಗವೇ ಸಾತ್ವಿಕವಾದದ್ದು. ಯಾಕಂದರೆ ಇದು ಶಾಸ್ತ್ರೋಕ್ತವಾದದ್ದು ಯಥಾರ್ಥಜ್ಞಾನ. (ಸತ್ವಾತ್ಸಂಜಾಯತೇ ಜ್ಞಾನಂ) ಯೆಂತ ಮುಂದೆ ನಿರೂಪಿಸುವನು. ॥ ೯ ॥

ಸಾತ್ವಿಕತ್ಯಾಗಿಯನ್ನು ವಿವರಿಸುವನು. ಸಾತ್ವಿಕ ಪ್ರಕೃತಿಯು ಅಕುಶಲಂ ತತ್ಕಾಲ ಸುಖದಾಯಕವಾಗದೆ ಕ್ಲೇಶದಾಯಕವಾದ ಅನಿಷ್ಟಕರ್ಮವನ್ನು ದ್ವೇಷಿಸುವುದೂ ಇಲ್ಲ. ಸ್ವರ್ಗಾದಿದಾಯಕ ಕುಶಲಕರ್ಮದಲ್ಲಿ ಸ್ನೇಹ

**ನಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**
**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನತು ಸನ್ನ್ಯಾಸಿನಾಂ ಕ್ವಚಿತ್ ॥ ೧೨ ॥**

---

ವನ್ನು ಮಾಡುವುದಿಲ್ಲ. ಅತಏವ ಭಗವದ್ವಿಷಯಕ ತತ್ವಜ್ಞಾನಿಯಾಗಿ ಸತ್ವಯುಕ್ತನೂ, ಪರಾಪರತತ್ವವಿಷಯದಲ್ಲೂ, ಭಗವದ್ಧರ್ಮಾನುಷ್ಠಾನ ದಲ್ಲೂ ಸಂದೇಹಹೀನನಾದವನೇ ತ್ಯಾಗಿಯು. ತಥಾಚ ಮಮತಾ ಫಲ ಕಾಮನಾರಹಿತತ್ಯಾಗವೇ ತ್ಯಾಗವೆಂದು ಹೇಳಿದಂತಾಯಿತು. ॥ ೧೦ ॥

ಕರ್ತವ್ಯಾ ನೀತಿಮೇ ಪಾರ್ಥ ಎಂದು ತ್ಯಾಗವನ್ನು ನಿರೂಪಿಸಿರು ವಾಗ ಪುನಃ ನಹೀತಿ ಶ್ಲೋಕ ಯಾಕೆಂದರೆ--ತ್ಯಾಜ್ಯಂ ದೋಷವದಿತಿ ಪೂರ್ವಪಕ್ಷದಲ್ಲಿ ಉಕ್ತ ತ್ಯಾಗವು ಸರ್ವಥಾ ಕರ್ಮತ್ಯಾಗವಲ್ಲವೆಂದು ದೃಢ ಪಡಿಸುವ ಉದ್ದಿಶ್ಯ. ಯಾರಿಂದಲೇ ಆಗಲಿ ಸರ್ವಥಾ ಕರ್ಮತ್ಯಾಗವು ಅಶಕ್ಯ (ನಹಿ ಕಶ್ಚಿತ್ ಕ್ಷಣಮಪಿ)ಎಂದು ಇದ್ದದ್ರಿಂದ ಸರ್ವಥಾ ಅಶಕ್ಯವು, ಶಾಸ್ತ್ರದಲ್ಲಿ ವಿಹಿತವಾಗುವುದಿಲ್ಲ. ಮತ್ತೆ ತ್ಯಾಗವೆಂದರೆ ಮಮತಾ—ಮತ್ತು ಫಲ ತ್ಯಾಗವೇ ಅಂಥವನೇ ತ್ಯಾಗಿಯೆಂದನ್ನಿಸಿಕೊಳ್ಳುವನು. ॥ ೧೧ ॥

ಸ್ವೋಕ್ತದಾರ್ಢ್ಯಾರ್ಥವಾಗಿ ಅತ್ಯಾಗಿನಿಂದಾಪೂರ್ವಕ ತ್ಯಾಗಿ ಸ್ತೋತ್ರ ಮಾಡಿ ತ್ಯಾಗಾವಶ್ಯಕತಾ ತಿಳಿಸುವನು. ಯಾವದೇ ಕರ್ಮ ಸಾಮಾನ್ಯೇನ ಅನಿಷ್ಟ ನರಕಾದಿ, ಇಷ್ಟಸ್ವರ್ಗಾದಿ, ಮಿಶ್ರ ಮನುಷ್ಯತ್ವಾದಿರೂಪ ಫಲವನ್ನು ತ್ರಿವಿಧವಾದ್ದನ್ನು ಅತ್ಯಾಗಿಗೆ ಅಂದರೆ ಮಮತಾಪೂರ್ವಕ ಫಲಾದಿಕಾಮ ನಯಾ ಮಾಡುವವಗೆ ಪ್ರೇತ್ಯ ಅಂದರೆ ಮರಣಾನಂತರ ಕೊಡುತ್ತದೆ. ಸನ್ಯಾ ಸಿನಾಂ ಇದು ನನ್ನದು ನನಗೆ ಬೇಕಾದ್ದು ಎಂಬ ಮಮತಾ ಮತ್ತು ಫಲಕಾ ಮನಾ ಇಲ್ಲದ ಸನ್ಯಾಸಿ ಅಂದರೆ ತ್ಯಾಗಿಗೆ ಕರ್ಮವು ಇಂಥಾ ಫಲದಾಯಕವಾ ಗುವುದಿಲ್ಲ. ಯದ್ಯಪಿ ಇಲ್ಲಿ ಪೂರ್ವಪ್ರಸಕ್ತವಾದ್ರಿಂದ ತ್ಯಾಗಿಶಬ್ದ ಹೇಳಬೇಕು. ಸನ್ಯಾಸಿಶಬ್ದ ಕೊಟ್ಟದ್ದು ಯಾಕೆಂದರೆ ತ್ಯಾಗಿಗೆ ತನಗೆ ಫಲಕಾಮನಾ ಮತ್ತು ಅಂಥಾ ಕಾಮ್ಯ ಕರ್ಮದಲ್ಲಿ ಪ್ರಸಕ್ತಿ ಇಲ್ಲದಿದ್ದರೂ ಪರೋಪಕಾರಾರ್ಥವಾಗಿ ಯಾದರೂ ಅಂಥಾ ಕರ್ಮ ಪ್ರಸಕ್ತಿ ಬರಬಹುದು. ಸನ್ಯಾಸಿಗಾದರೆ

ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಮ್ ॥
ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।
ವಿವಿಧಾ ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ॥೧೪॥
ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫ ॥

---

ಅದಕ್ಕೂ ಪ್ರಸಕ್ತಿ ಇಲ್ಲವೆಂದು ತಿಳಿಸಲು ಅದೇ ಅರ್ಥದಲ್ಲಿ ಸನ್ನ್ಯಾಸಿನಾಂ ಎಂತ ಹೇಳಿದ್ದು. ॥ ೧೨ ॥

ಶ್ರೀಕೃಷ್ಣನು ಪುನಃ ಸನ್ನ್ಯಾಸ ಶಬ್ದಾರ್ಥವನ್ನು ವಿವರಿಸುವ ಬಗ್ಗೆ ಕರ್ಮಕಾರಣಗಳನ್ನು ನಿರೂಪಿಸುವನು, ಮುಂದಿನ ಮೂರು ಶ್ಲೋಕಗಳಿಂದ ಕಪಿಲರೂಪಿ ಪರಮಾತ್ಮನಿಂದ ಮಾಡಿದ ಸಾಂಖ್ಯನಾಮಕ ಶಾಸ್ತ್ರದಲ್ಲಿ ಕರ್ಮಕಾರಣತ್ವೇನ ಹೇಳಿದ, ನನ್ನಿಂದ ಮುಂದೆ ನಿರೂಪಿಸಲ್ಪಡುವ ಕರ್ಮಕಾರಣಗಳನ್ನು ತಿಳಿ. ಸಾಂಖ್ಯೇ ಕೃತಾನಿ ಎಂದು ಹೇಳಿದ್ದು ಶ್ರೋತೃಗಳಿಗೆ ವಿಶ್ವಾಸ ಹುಟ್ಟಿಸುವ ಬಗ್ಗೆ. ॥ ೧೩ ॥

ಪ್ರತಿಜ್ಞಾ ಮಾಡಿದ ಕಾರಣಗಳನ್ನು ನಿರೂಪಿಸುವನು. ಅಧಿಷ್ಠಾನವೆಂದರೆ ದೇಹ ಭೂಮ್ಯಾದಿಗಳು. ಕರ್ತಾ ಮುಖ್ಯತೋ ವಿಷ್ಣುಃ ನಾನಾವಿಧ ಕರಣವೆಂದರೆ ಇಂದ್ರಿಯ ಸ್ರುಕ್ ಸ್ರುವಾದಿರೂಪ. ನಾನಾವಿಧ ಪರಸ್ಪರ ಭಿನ್ನ ಚೇಷ್ಟಾ ಹಸ್ತಾದಿ ಕ್ರಿಯಾ ಧ್ಯಾನಾದಿರೂಪ ಮಾನಸ ಕ್ರಿಯಾನೂ ಹೋಮಾದಿ ಹೇತುವಾದ ಅವಾಂತರ ಕ್ರಿಯಾನೂ. ದೈವವೆಂದರೆ ಅದೃಷ್ಟ ಅಥವಾ ಜೀವಗೂ ಅಸ್ವತಂತ್ರ ಕರ್ತೃತ್ವವಿರೋಣದರಿಂದ ಕರ್ತನೆಂದರೆ ಜೀವ. ದೈವವೆಂದರೆ ವಿಷ್ಣುವನ್ನು ಇಟ್ಟುಕೊಳ್ಳಬಹುದು. ಈ ವಿಷಯದಲ್ಲಿ ಶ್ರುತಿ "ದೇಹೋ ಬ್ರಹ್ಮಾರ್ಥೇಂದ್ರಿಯಾದ್ಯಾಃ ಕ್ರಿಯಾಶ್ಚ ತಥಾದೃಷ್ಟಂ ಪಂಚಮಂ ಕರ್ಮಹೇತುಃ" ॥ ೧೪ ॥

ಅಧಿಷ್ಠಾನಾದಿ ಪಂಚಕ್ಕೆ ಹೇಳಿದ ಕಾರಣತ್ವವನ್ನು ಸ್ಪಷ್ಟ ನಿರೂಪಿಸುವನು. ಜೀವನು ಕಾಯಿಕ ವಾಚನಿಕ ಮಾನಸಿಕವಾಗಿ ವಿಹಿತವಾಗಲೀ

ತತ್ರೈವಂಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬ ॥
ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।
ಹತ್ವಾಽಪಿ ಸ ಇಮಾನ್ಲೋಕಾನ್ನ ಹಂತಿ ನ ನಿಬಧ್ಯತೇ ॥ ೧೭ ॥
ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।
ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥

---

ನಿಷಿದ್ಧವಾದ್ದೇ ಆಗಲೀ ಯಾವ ಕರ್ಮ ಮಾಡುವನೋ ಪೂರ್ವೋಕ್ತ ಅಧಿಷ್ಠಾನಾದಿಗಳು ಐದು ಹೇತುಗಳು. ॥ ೧೫ ॥

ಕಾರಣಗಳು ಐದೇ ಆಗಲಿ ಮುಂದೇನು ಎಂದರೆ ಕರ್ಮಗಳಲ್ಲಿ ಹಿಂದೆ ನಿರೂಪಿಸಿದವುಗಳು. ಕಾರಣಗಳಾಗಿರಲು ಪರಪ್ರೇರಣಾ ಇಲ್ಲದೆ ಸ್ವತಂತ್ರವಾಗಿ ಕ್ರಿಯಾಹೀನನಾದ ಜೀವಾತ್ಮನನ್ನು ಸ್ವಾತಂತ್ರ್ಯೇಣ ಕರ್ತನನ್ನಾಗಿ ಯಾರು ತಿಳಿಯುವನೋ, ಅವನು ಶಾಸ್ತ್ರಸಂಸ್ಕಾರ ಹೀನ ಬುದ್ಧಿಯು. ತತ್ವವನ್ನು ತಿಳಿದವನಲ್ಲವೆಂದು ಅರ್ಥ. ॥ ೧೬ ॥

ಪೂರ್ವೋಕ್ತ ದುರ್ಮತಿಯಾದರೆ ಸನ್ಮತಿ ಯಾರೆಂದರೆ ಅವನ ಸ್ತುತಿಪೂರ್ವಕ ತೋರಿಸುವನು. ಯಾವಾತಗೆ ಇದು ನಾನು ಮಾಡಿದ್ದೆಂಬ ಅಹಂಕೃತೋ ಭಾವಃ ಅಹಂಕಾರವಿಲ್ಲವೋ ಅಂದರೆ ಸ್ವಾತಂತ್ರ್ಯಾಭಿಮಾನವಿಲ್ಲವೋ ಯಾರ ಬುದ್ಧಿಯು ಫಲರಾಗಾದಿಗಳಿಂದ ಲೇಪ ಉಳ್ಳದ್ದಾಗುವದಿಲ್ಲವೋ, ಅಂಥವನು ಸಮಸ್ತ ಜನರನ್ನು ಕೊಂದರೂ ದೋಷಿಯಾಗುವುದಿಲ್ಲ. ಯಾಕೆಂದರೆ ನ ಹಂತಿ ಆತಗೆ ತಾನು ಕೊಲ್ಲುವೆನೆಂಬ ಬುದ್ಧಿ ಇಲ್ಲ. ಅತಏವ ನ ನಿಬಧ್ಯತೇ ಆ ಫಲವನ್ನೂ ಹೊಂದುವುದಿಲ್ಲ. ಈ ವಿಷಯದಲ್ಲಿ ದೃಷ್ಟಾಂತ—ಲಯಕಾಲದಲ್ಲಿ ಸಂಹಾರಕನಾದ ರುದ್ರ ಮತ್ತು ಅಹರಹಃ ನಾಶಕನಾದ ಯಮನೂ, ಕರ್ತೃತ್ವಾಭಿಮಾನಿನಿಂದಾ ಅನಭಿಮಾನಿಯ ಸ್ತುತಿಯಿಂದಲೂ ಕರ್ಮದಲ್ಲಿ ಕರ್ತೃತ್ವಾಭಿಮಾನತ್ಯಾಗವೂ ಸನ್ಯಾಸಶಬ್ದಾರ್ಥವೆಂದು ಸೂಚಿಸಿದಂತಾಯಿತು. ॥ ೧೭ ॥

ಜೀವನಿಗೆ ಸ್ವತಃ ಕರ್ತೃತ್ವವಿಲ್ಲದಿದ್ದರೆ (ಕರ್ಮ ಕುರ್ವೀತ ನಿತ್ಯಶಃ) ಇತ್ಯಾದಿ ವಿಧಿ ವ್ಯರ್ಥವಷ್ಟೆ. ಈ ವಿಧಾನಕ್ಕೆ ಜಡ ಹ್ಯಾಗೂ ವಿಷಯವಲ್ಲ.

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯ ॥**

---

ಜೀವನಿಗೂ ಕರ್ತೃತ್ವವಿಲ್ಲ. ಮತ್ತಾರ ಕುರಿತು ವಿಧಿ? ಜಗತ್ತು ಜೀವಜಡ ಪೂರಿತವೆಂದರೆ ಸಮಾಧಾನ ಹೇಳುವನು—ಕರ್ಮಚೋದನಾ=ಕರ್ಮಪ್ರೇರಣಾ, ತ್ರಿವಿಧಾ=ಮೂರು ಪ್ರಕಾರ—ಜ್ಞಾನನಿಮಿತ್ತಕ, ಜ್ಞೇಯ ಜ್ಞಾನ ವಿಷಯ ವಸ್ತುನಿಮಿತ್ತಕ, ಜೀವನಿಮಿತ್ತಕವೆಂದು. ಇಲ್ಲಿ ಜ್ಞಾನಾದಿರೂಪತ್ವವೇ ತೋರುತ್ತದೆ, ನಿಮಿತ್ತತ್ವ ತೋರುವುದಿಲ್ಲವೆಂದರೆ ಮಲನಾಡು ಪ್ರದೇಶಾದಿಗಳಲ್ಲಿ ಹಗಲುನಿದ್ರೆ ಮೊಸರು ಸಾಕ್ಷಾತ್ ಜ್ವರವೆಂದು ಕಾರಣಕಾರ್ಯಗಳಿಗೆ ಐಕ್ಯವ್ಯವಹಾರ ಅನುಭವಸಿದ್ಧ ಉಂಟು. ಅದೇ ರೀತಿ ಔಪಚಾರಿಕ. ಜ್ಞಾನವೆಂದರೆ ತನ್ನಿಮಿತ್ತವೆಂದಿಟ್ಟುಕೊಳ್ಳಬೇಕು. ಕರ್ಮ ಕಾರಣಗಳು ನಿರೂಪಿತ. ಈಗ ಯಾಕೆ ನಿರೂಪಿಸುವುದೆಂದರೆ ಕರ್ಮಸಂಗ್ರಹಃ ಸಂಕ್ಷೇಪೇಣ ಕಾರಣಸಂಗ್ರಹಃ ಕಾರಣಂ ಕರ್ಮ ಕರ್ತೇತಿ. ಹಿಂದೆ ಕಾರಣ ನಿರೂಪಿಸಿದ್ದು, ಇಲ್ಲಿ ಕರ್ಮವಷ್ಟೆ. ಕರ್ಮಸಂಗ್ರಹವೆಂದರೆ ಕರ್ಮಕಾರಣಸಂಗ್ರಹವೆಂದು ಲಾಕ್ಷಣಿಕ ಪ್ರಯೋಗವು. ಹಿಂದೆ ಹೇಳಿದ ಐದು ಹೇಳಿದಂತೆ ಹ್ಯಾಗಾಯಿತು ಅಂದರೆ—ಅಧಿಷ್ಠಾನ ದೇಹ ಭೂವ್ಯಾದಿಗೆ ಕಾರಣದಲ್ಲಿ, ಪಂಚಮ ದೈವಕ್ಕೆ ಪರಿಜ್ಞಾತ್ರಲ್ಲಿ ಅಂತರ್ಭಾವ ವಿವಕ್ಷಿತ. ಋಗ್ವೇದ ಖಿಲ "ಜ್ಞಾನಂ ಜ್ಞೇಯಂ ಜ್ಞಾನಿನಂ ಚ ಹ್ಯಪೇಕ್ಷ್ಯ ವಿಧಿರುತ್ಥಿತಃ । ಕರಣಂ ಚೈವ ಕರ್ತಾ ಚ ಕರ್ಮಕಾರಣಸಂಗ್ರಹಃ" ಎಂದು. ಹಿಂದೆ ಹೇಳಿದ ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲದಿದ್ದರೆ ವಿಧಾನ ಅನುಚಿತವೆಂಬ ಶಂಕೆಗೆ ಏನು ಪರಿಹಾರವೆಂದರೆ ಸ್ವತಂತ್ರಕರ್ತನೇ ವಿಧಿವಿಷಯನೆಂದಿಲ್ಲ. ಹಾಗಾದರೆ ಈಶ್ವರನೇ ವಿಧಿವಿಷಯನಾಗಬೇಕಾದೀತು. ಮತ್ತೆ ಯಾರ ವಿಷಯವಾಗಿ ವಿಧಿ, ಜ್ಞಾನ, ಕರ್ಮಫಲ. ಇಚ್ಛಾ, ತದನುಗುಣವಾದ ಪ್ರಯತ್ನ, ಅಧಿಷ್ಠಾನಾದಿ ಕಲಾಪಸಂಬಂಧ, ಕರ್ಮಸಂಬಂಧ, ಫಲಭಾಗಿತ್ವ ಇವುಗಳೆಲ್ಲ ಉಂಟೋ, ಅವು ವಿಧಿವಿಷಯ. ಈಶಪ್ರಸಾದಾಯತ್ತವಾದದ್ದು ಇವೆಲ್ಲ ಜೀವನಿಗೆ ಉಂಟು. ಆದುದರಿಂದ ಅವನು ವಿಧ್ಯಾದಿವಿಷಯನಾಗುವನು. ಆ ವಾಕ್ಯಗಳಿಗೆ ವೈಯರ್ಥ್ಯವೂ ಇಲ್ಲ. ಇದನ್ನೇ ಮುಂದೆ ವಿವರಿಸುವನು. ॥ ೧೮ ॥

ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।
ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥ ೨೦ ॥
ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ಪೃಥಗ್ವಿಧಾನ್ ।
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ೨೧
ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಮ್ ।
ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥ ೨೨ ॥

---

ಸಾತ್ವಿಕ ಜ್ಞಾನ ಕರ್ಮಗಳು ಮೋಕ್ಷಹೇತುವಾದುದರಿಂದ ಅನುಷ್ಠಾನಾರ್ಥವಾಗಿ ಸತ್ವಾದಿಗುಣನಿಮಿತ್ತ ಜ್ಞಾನಾದಿಭೇದವನ್ನು ನಿರೂಪಿಸುವನು– ಗುಣಭೇದತಃ ಸತ್ವಾದಿಗುಣಭೇದದಿಂದ ಜ್ಞಾನ ಕರ್ಮ ಕರ್ತೃ ಜೀವಾದಿಗಳೂ ಪ್ರತ್ಯೇಕ ಮೂರು ವಿಧ. ಗುಣಸಂಖ್ಯಾನೇ ಕಪಿಲಶಾಸ್ತ್ರದಲ್ಲಿ ಗುಣಗಣನ ಪ್ರಕರಣದಲ್ಲಿ ಹೇಳಿದ್ದನ್ನು ಕೇಳು ಎಂದು ಶ್ರೀಕೃಷ್ಣನು ನಿರೂಪಿಸುವನು. ॥ ೧೯ ॥

ಮುಂದಿನ ಮೂರು ಶ್ಲೋಕಗಳಿಂದ ಪ್ರತಿಜ್ಞಾಮಾಡಿ ಜ್ಞಾನತ್ರೈವಿಧ್ಯವನ್ನು ನಿರೂಪಿಸುವನು--ವಿಭಕ್ತೇಷು ತಾರತಮ್ಯೋಪೇತಗಳಾಗಿ ಪರಸ್ಪರ ಭಿನ್ನಗಳಾದ ಸರ್ವಭೂತೇಷು ಜೀವಜಡಾತ್ಮಕ ಸರ್ವ ವಸ್ತುಗಳಲ್ಲಿ ಭಾವ ಅಂದರೆ ಸದಾ ಇರುವ ಏಕಪ್ರಧಾನ ಸರ್ವೋತ್ತಮನೆಂದರ್ಥ. ಅವಿಭಕ್ತಂ ಸ್ಥಾನಭೇದನಿಮಿತ್ತ ಭೇದವಿಲ್ಲದವನೆಂದೂ ಅವ್ಯಯಂ ಸ್ಥಾನನಾಶ ಬಂದರೂ ನಾಶಪ್ರಾಪ್ತಿಯಿಲ್ಲದವನನ್ನಾಗಿಯೂ ವಿಷ್ಣುವನ್ನು ತಿಳಿಯುವುದು ಸಾತ್ವಿಕ ಜ್ಞಾನನೆಂದು ಅನ್ನುವರು. ॥ ೨೦ ॥

ರಾಜಸಜ್ಞಾನ ನಿರೂಪಿಸುವನು—ಸರ್ವೇಷು ಭೂತೇಷು ಸರ್ವಪ್ರಾಣಿಗಳಲ್ಲಾ ಜೀವಜಡಾದಿಭೇದೇನ ಭಿನ್ನಗಳಾಗಿ ನೀಚೋಚ್ಚಭಾವಾಪನ್ನಗಳಾಗಿಯೂ ಈಶ್ವರವಿಷಯದಲ್ಲಿ ಸಂದಿಗ್ಧವಾಗಿಯೂ ತಿಳಿಯುವುದು ರಾಜಸ ಜ್ಞಾನ ॥ ೨೧ ॥

ತಾಮಸಜ್ಞಾನವನ್ನು ನಿರೂಪಿಸುವನು---ಇಲ್ಲಿ ಕಾರ್ಯಶಬ್ದಕ್ಕೆ ಜೀವನೆಂದರ್ಥ. ಜೀವ ಕಾರ್ಯ ಹೇಗೆಂದರೆ ಸಂಸಾರಿಯೇ ಮುಕ್ತನಾಗಿ ಮಾಡಲ್ಪಡುವುದರಿಂದ ಕೃತ್ಸ್ನಶಬ್ದಕ್ಕೆ ಬ್ರಹ್ಮನೆಂತಲೂ ಜಗತ್ತೆಂದೂ ಅರ್ಥ. ಕಾರ್ಯೇ

ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।
ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ೨೩ ॥
ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।
ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥ ೨೪ ॥
ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಮ್ ।
ಮೋಹಾದಾರಭ್ಯತೇ ಕರ್ಮ ತತ್ತಾಮಸಮುದಾಹೃತಮ್ ॥ ೨೫ ॥
ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬ ॥

---

ಕೃತ್ಸ್ನವತ್ ಜೀವನಲ್ಲಿ ಬ್ರಹ್ಮನೆಂಬ ಜ್ಞಾನ ತಾಮಸ. ಜೀವಬ್ರಹ್ಮಾಭೇದ ಜ್ಞಾನವು, ಜೀವಜಗದಭೇದ ಜ್ಞಾನವೂ ತಾಮಸ. ಏಕಸ್ಮಿನ್ ಕಾರ್ಯೇ ಒಬ್ಬ ಜೀವನ ಅಜ್ಞಾನಕಲ್ಪಿತ ಜಗತ್ತೆಂಬ ಏಕಜೀವವಾದವೂ ತಾಮಸ. ಯಾಕೆಂದರೆ ಅಹೈತುಕ. ಯುಕ್ತಿಶೂನ್ಯ. ಅತತ್ತ್ವಾರ್ಥವತ್ ಅಸತ್ಯವಿಷಯಕ. ಅಲ್ಪಂ ಚ ಬಹು ಅಜ್ಞಾನ ಜ್ಞಾನ ಸ್ವಲ್ಪವಾದದ್ದು. ॥ ೨೨ ॥

ಪೂರ್ವಪ್ರತಿಜ್ಞಾತ ಗುಣಕೃತ ಜ್ಞಾನತ್ರೈವಿಧ್ಯವನ್ನು ನಿರೂಪಿಸಿ ಗುಣಕೃತ ಕರ್ಮತ್ರೈವಿಧ್ಯ ನಿರೂಪಿಸುವನು ಮೂರು ಶ್ಲೋಕಗಳಿಂದ. ಪರಮಾತ್ಮನ ಸರ್ವೋತ್ತಮತ್ವಜ್ಞಾನಪೂರ್ವಕ ತದರ್ಪಣಬುಧ್ಯಾ ಸ್ವವರ್ಣಾಶ್ರಮೋಚಿತ ಕರ್ಮ ನಿಯತಕರ್ಮ. ಅದೇ ರಾಗದ್ವೇಷಾದಿರಹಿತವಾಗಿಯೂ ಫಲಕಾಮನಾ ಇಲ್ಲದೆ ಮಾಡಿದ್ದೇ ಸಾತ್ವಿಕವು. ॥ ೨೩ ॥

ಫಲಕಾಮನಾಯುಕ್ತ, ಕರ್ತೃತ್ವಾಭಿಮಾನದಿಂದ ಯದ್ಯಪಿ ಬಹ್ವಾಯಾಸಜನಕವಿದು ನಾನೇ ಮಾಡುವುದು, ಅನ್ಯರಿಂದ ಶಕ್ಯವಲ್ಲ ಏತದ್ರೂಪ ಅಭಿಮಾನಕೃತ ಕರ್ಮ ರಾಜಸ. ॥ ೨೪ ॥

ಈ ಕರ್ಮದಿಂದ ಇಂತಹ ದುಃಖ ಬರಬಹುದೆಂಬ ವಿಚಾರಕ್ಕೆ ಅನುಬಂಧವೆಂದು ಹೆಸರು. ಕರ್ಮದಿಂದಾಗುವ ದ್ರವ್ಯಾದಿನಾಶ ಪ್ರಾಣಿಪೀಡಾ ತನ್ನ ಕರ್ಮ ಮುಗಿಸುವ ಶಕ್ತಿ ಇದನ್ನು ವಿಚಾರ ಮಾಡದೆ ಕರ್ತೃತ್ವ ಈಶ್ವರಗತವೆಂದು ತಿಳಿಯದೆ ಮಾಡುವ ಕರ್ಮ ತಾಮಸವು. ॥ ೨೫ ॥

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭ ॥**
**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥**

---

ಪೂರ್ವದಲ್ಲಿ ಪ್ರತಿಜ್ಞಾ ಮಾಡಿದ ಸತ್ವಾದಿಗುಣಕೃತ ಕರ್ತೃತ್ರೈವಿಧ್ಯವನ್ನು ಮುಂದಿನ ಮೂರು ಶ್ಲೋಕಗಳಿಂದ ನಿರೂಪಿಸುವನು. ಫಲಕಾಮನಾ ಇಲ್ಲದೆ ತಾನು ಮಾಡಿದನೆಂಬುವ ಅಹಂಕಾರ ವಚನವಿರದ ತತ್ತತ್ಕರ್ಮ ಜನ್ಯ ದುಃಖ ಸಹನ ಸ್ವಭಾವವಿರುವ ಕರ್ಮದಲ್ಲಿ ಲವಲವಿಕೆ ಇರುವ ಕರ್ಮ ಫಲ ವಾದರೆ ಮಹಾ ಹರ್ಷ. ಆಗದಿದ್ದರೆ ಮಹಾ ದುಃಖಕೃತ ಉಚ್ಚ ನೀಚತ್ವವಿಲ್ಲದೆ ಕರ್ಮ ಮಾಡುವವನೇ ಸಾತ್ವಿಕ. ॥ ೨೬ ॥

ಯಶೋರ್ಥಿಯಾಗಿ, ಕರ್ಮಫಲೇಚ್ಛಾದಿಂದ, ಪರದ್ರವ್ಯೇಚ್ಛಾ ಉಳ್ಳವನಾಗಿ ಸತ್ಪಾತ್ರಾದಿಗಳಲ್ಲಿ ವ್ಯಯ ಮಾಡದೆ ಪರಹಿಂಸಾ ಸ್ವಭಾವವುಳ್ಳವನಾಗಿ, ಬಾಹ್ಯಾಭ್ಯಾಂತರ ಶುದ್ಧಿ ದ್ರವ್ಯಾದಿ ಶುದ್ಧಿ ಇಲ್ಲದೆ ಕಾರಣ ಆಗೋಣದರಿಂದ ಹರ್ಷ ಆಗದಲ್ಲಿ, ಜಾಸ್ತಿ ಶೋಕದಿಂದ ಕೂಡಿದ ಕರ್ತೃ ರಾಜಸ. ॥ ೨೭ ॥

ಕರ್ಮದಲ್ಲಿ ಭಗವದರ್ಪಣ ಬುದ್ಧಿ ಇಲ್ಲದ ವಿದ್ಯಾಶೂನ್ಯನಾದ ತಾನೇ ಉತ್ತಮನೆಂದು ಯಾರಿಗೂ ನಮ್ರನಾಗದಿರುವ ಗೂಢ ವೈರಿಯಾಗಿ ಕೆಲಸ ನಡಿಸುವ ನೀಚಕರ್ಮ ಮಾಡುವ ಕರ್ಮಕಾಲದಲ್ಲೂ ಉದಾಸೀನನಾಗಿರುವ, ಮನೋದೌರ್ಬಲ್ಯದಿಂದ ಇರುವ ಪರರಿಂದ ಬಹುಕಾಲದಿಂದ ಮಾಡಿದ ದೋಷವನ್ನು ಸಮಯ ನೋಡಿ ಉದ್ಘೋಷಿಸುವವನಾಗಿ ಯಾರಿರುವನೋ ಅತ ತಾಮಸ. ॥ ೨೮ ॥

ಈ ತನಕ ಜ್ಞಾನ, ಕರ್ಮ, ಕರ್ತೃಗಳ ಸತ್ವಾದಿ ಗುಣಕೃತ ತ್ರೈವಿಧ್ಯವನ್ನು ನಿರೂಪಿಸಿ ಈಗ ಏಳು ಶ್ಲೋಕಗಳಿಂದ ಬುದ್ಧಿ ಮತ್ತು ಧೃತಿಯ ಗುಣಕೃತ ತ್ರೈವಿಧ್ಯ ನಿರೂಪಿಸುವನು. ಆ ಪೈಕಿ ಮೂರು ಶ್ಲೋಕಗಳಿಂದ ಪ್ರಥಮತಃ ಬುದ್ಧಿಯ ತ್ರೈವಿಧ್ಯ ನಿರೂಪಿಸುವನು. ಬುದ್ಧಿ ಎಂದರೆ ವಿವೇಕ ಯುಕ್ತ ನಿಶ್ಚಯಾತ್ಮಕ ಜ್ಞಾನ. ಆರಂಭ ಮಾಡಿದ ಕಾರ್ಯದಲ್ಲಿ ಎಷ್ಟು

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥**
**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಸ್ಸಾ ಪಾರ್ಥ ಸಾತ್ತ್ವಿಕೀ ॥**
**ಯಯಾ ಧರ್ಮಮಧರ್ಮಂಚ ಕಾರ್ಯಂ ಚಾಕಾರ್ಯಮೇವ ಚ**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧ ॥**
**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽಽವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ ೩೨ ॥**

---

ವಿಘ್ನ ಬಂದರೂ ಸಹನಪೂರ್ವಕ ಸಮಾಪ್ತಿ ಮಾಡುವುದೇ ಧೃತಿ. ಇವುಗಳ ಗುಣಕೃತ ತ್ರೈವಿಧ್ಯವನ್ನು ಹೇಳುವದನ್ನು ಕೇಳಿ ನಿಷ್ಠೆಯನ್ನು ಹೊಂದು ಎಂತ ನಿರೂಪಿಸುವನು. ॥ ೨೯ ॥

ಸ್ವರ್ಗಾದಿಸಾಧನ ಧರ್ಮಕ್ಕೆ ಪ್ರವೃತ್ತಿ ಎಂತಲೂ, ಮೋಕ್ಷಸಾಧನವಾದ್ದಕ್ಕೆ ನಿವೃತ್ತಿ ಎಂತ ಹೆಸರು. ಈ ಧರ್ಮ ಸಂಸಾರಸಂಪಾದಕ ಇದು ಮೋಕ್ಷದಾಯಕವೆಂತಲೂ, ದೇಶ ಕಾಲಾದಿ ವಿಚಾರಪೂರ್ವಕ ಇದು ಕಾರ್ಯ ಇದು ಅಕಾರ್ಯವೆಂತಲೂ ಶಾಸ್ತ್ರವಿರುದ್ಧಾಚರಣ ಭಯಜನಕ. ಶಾಸ್ತ್ರವಿಹಿತಾನುಷ್ಠಾನಕಃ ಅಭಯವೆಂತಲೂ ಸಂಸಾರ ಸ್ವರೂಪವನ್ನೂ ಮೋಕ್ಷಸ್ವರೂಪವನ್ನೂ ಯಥಾರ್ಥತಃ ಯಾವ ಬುದ್ಧಿ ತಿಳಿಯುವದೋ ಅದು ಸಾತ್ವಿಕವೆಂದು ತಿಳಿಯಬೇಕು. ಯಾವ ಬುದ್ಧಿಯಿಂದ ತಿಳಿಯುವನೋ ಎಂದರ್ಥ. ಕರಣದಲ್ಲಿ ಉಪಚಾರತಃ ಕರ್ತೃತ್ವಪ್ರಯೋಗ, ಬುದ್ಧಿಃ ವೇತ್ತಿ ಯೆಂತ. ॥ ೩೧ ॥

ರಾಜಸ ಬುದ್ಧಿಯನ್ನು ನಿರೂಪಿಸುವನು. ಪೂರ್ವೋಕ್ತ ಧರ್ಮಾಧರ್ಮ ಕಾರ್ಯಾಕಾರ್ಯಾದಿಗಳನ್ನು ಯಾವ ಬುದ್ಧಿಯು ಕ್ವಚಿತ್ ಯಥಾರ್ಥವಾಗಿ ಕ್ವಚಿತ್ ಅಯಥಾರ್ಥವಾಗಿ ವಿಷಯೀಕರಿಸುತ್ತದೋ, ಅದು ರಾಜಸ. ॥ ೩೧ ॥

ಯಾವ ಬುದ್ಧಿಯು ವಸ್ತುತಃ ಧರ್ಮವಾದ್ದವುಗಳನ್ನು ಅಧರ್ಮಾದಿ ರೂಪತಃ ಇದ್ದ ರೀತಿಗೆ ವಿಪರೀತವಾಗಿ ಅಂದರೆ ಸತ್ಯವಾದ್ದನ್ನು ಮಿಥ್ಯಾ

ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।
ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಪಾರ್ಥ ಸಾತ್ತ್ವಿಕೀ ॥ ೩೩ ॥
ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ
ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ ೩೪ ॥
ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।
ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥ ೩೫ ॥
ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।
ಅಭ್ಯಾಸಾದ್ರಮತೇ ತತ್ರ ದುಃಖಾಂತಂ ಚ ನಿಗಚ್ಛತಿ ॥ ೩೬ ॥
ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ ।

---

ಎಂತ ಈಶ್ವರಕೃತವನ್ನು ಸ್ವತಃ ಉತ್ಪನ್ನತ್ವಾದಿ ರೂಪೇಣ, ಸ್ಥಾಯಿಯಾದ ವುಗಳನ್ನು ಕ್ಷಣಿಕತ್ವಾದಿ ರೂಪೇಣ ತಿಳಿಯುವದು ತಾಮಸ. ॥ ೩೨ ॥

ಪೂರ್ವ ಪ್ರತಿಜ್ಞಾತ ಧೃತಿ ತ್ರೈವಿಧ್ಯವನ್ನು ಮೂರು ಶ್ಲೋಕಗಳಿಂದ ನಿರೂಪಿಸವನು. ಯೋಗಶಬ್ದೇನ ಮೋಕ್ಷಸಾಧನ ಭಗವದುಪಾಸನೆ. ಯಾವ ವಿಹಿತ ವಿಷಯಕವಾದ ಧೃತಿಯಿಂದ ಯೋಗ ಸಹಿತವಾಗಿ ಮನಸ್ಸು ಪ್ರಾಣ ಇಂದ್ರಿಯಗಳ ಕ್ರಿಯಾಧಾರಿತವಾಗುವದೋ, ಆ ಧೃತಿಗೆ ಸಾತ್ವಿಕ ಧೃತಿ ಯೆಂದು ನಾಮ. ॥ ೩೩ ॥

ಫಲಾಕಾಂಕ್ಷಾಪೂರ್ವಕ ಇದು ನನ್ನದೆಂಬ ಮದೀಯತಾ ಸ್ನೇಹ ದಿಂದ ಕೂಡಿ ಧರ್ಮ ಕಾಮಾರ್ಥವಾಗಿ ಮನಃ ಆದಿಗಳ ಕ್ರಿಯಾಗಳನ್ನು ಯಾವ ಧೃತಿಯಿಂದ ಧರಿಸುವನೇ ಆ ಧೃತಿ ರಾಜಸ. ॥ ೩೪ ॥

ಸ್ವಪ್ನ ವಿಷಯಾನುಭವಜನ್ಯಮದ ಅಂದರೆ ಸ್ವಪ್ನಾದ್ಯುದ್ದೇಶೇನ ಮನಾದಿ ಕ್ರಿಯಾ ಧರಿಸುವನೋ, ಹಾಗೆ ನಿಷಿದ್ಧವಾದ್ದನ್ನೂ, ಭಗವದ್ವೇಷಾದಿಗ ಳನ್ನು ಬಿಡುವುದಿಲ್ಲವೋ ಅದು ತಾಮಸ ಧೃತಿ. ॥ ೩೫ ॥

ಈ ತನಕ ನಿರೂಪಿತ ಜ್ಞಾನ ಕರ್ಮಾದಿಗಳು ಯಾವ ಸುಖದ ಉದ್ದಿ ಶ್ಯವೋ, ಅಂತಹ ಸುಖದ ಗುಣಕೃತ ತ್ರೈವಿಧ್ಯ ನಿರೂಪಿಸುವನು. ನಿರಂತರ ಅಭ್ಯಾಸದಿಂದ ಯಾವ ಸುಖದಲ್ಲಿ ಕ್ರೀಡಿಸುತ್ತಾ ದುಃಖನಾಶ ಹೊಂದು ವನೋ ಅಂಥಾ ಸುಖ ಗುಣತ್ರಿವಿಧವಾದ್ದು. ॥ ೩೬ ॥

ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಸ್ವಭಾವಜಮ್ ॥ ೩೭॥
ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ॥ ೩೮ ॥
ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ ೩೯ ॥

---

ಸಾತ್ವಿಕ ಸುಖವನ್ನು ನಿರೂಪಿಸುವನು. ಯಾವ ಧ್ಯಾನಾದಿ ಜನ್ಯ ಸುಖವು ಅಭ್ಯಾಸವಿಲ್ಲದೆ ಆದಿಯಲ್ಲಿ ದುಃಖರೂಪವಾಗಿಯೂ ಕ್ರಮೇಣ ಸುಖರೂಪವಾಗಿರುವದೋ, ಅಂತಹ ಆತ್ಮ=ವಿಷ್ಣುವಿನ ಅನುಗ್ರಹದಿಂದ ಜನ್ಯವಾದ, ಮತ್ತು ಬುದ್ಧಿಪ್ರಸಾದ (ಅಂದರೆ) ಬುದ್ಧಿಯಲ್ಲಿರುವ ಸ್ವತಃ ವಿಷಯುಗಳಲ್ಲಿ ಅಪ್ರವೃತ್ತಿ, ಇವುಗಳಿಂದ ಜನ್ಯ ಸುಖ ಸಾತ್ವಿಕವೆನ್ನುವದು. ॥ ೩೭ ॥

ಈಗ ರಾಜಸ ಸುಖ ನಿರೂಪಿಸುವನು. ಪರಮಾತ್ಮಸಂಬಂಧ ರಹಿತ ವಾದ ಸ್ರಗಾದಿ ವೈಷಯಿಕ ಸುಖ ವಿಷಯೇಂದ್ರಿಯ ಸಂಬಂಧ ಜನ್ಯವಾದ್ದು ಅನುಭವದಶಾದಲ್ಲಿ ಉತ್ತಮವಾಗಿ ಕಂಡರೂ ಅಂತ್ಯದಲ್ಲಿ ದುಃಖಜನಕ, ರಾಜಸವಾದ್ದು. ॥ ೩೮ ॥

ಈಗ ತಾಮಸ ಸುಖ ನಿರೂಪಿಸುವನು. ಯಾವ ಸುಖ ಅನುಭವ ಕಾಲದಲ್ಲಿಯೂ ಅಂತ್ಯದಲ್ಲಿಯೂ ಮೋಹಕವೋ. ಮೋಹವೆಂದರೆ ಯಥಾವಸ್ಥಿತ ವಸ್ತುವಿನ ಅಪ್ರಕಾಶ ವಿವಕ್ಷಿತ. ಅಂಥಾದ್ದು ಯಾವದೆಂದರೆ ನಿದ್ರಾ ಆಲಸ್ಯ ಪ್ರಮಾದ ಜನ್ಯವಾದ್ದು. ಇದು ತಾಮಸ. ನಿದ್ರಾಕ್ಕೆ ಮೋಹ ಹೇತುತ್ವ ಸ್ಪಷ್ಟ. ಆಲಸ್ಯವೆಂದರೆ ಇಂದ್ರಿಯ ವ್ಯಾಪಾರ ಮಾಂದ್ಯ, ಪ್ರಮಾದ ವೆಂದರೆ ಅಧರ್ಮ ಬುದ್ಧಿ. ಇಂದ್ರಿಯ ವ್ಯಾಪಾರ ಮಂದವಾದಲ್ಲಿ ಜ್ಞಾನ ಮಾಂದ್ಯ ಹುಟ್ಟುವುದು. ಇಂತಹ ತಾಮಸ ರಾಜಸ ಸುಖವು ತ್ಯಾಜ್ಯ. ನಿದ್ರಾಜನ್ಯ ಸುಖ ತಾಮಸವಾದ್ದರಿಂದಲೇ ಮುಚುಕುಂದ ರಾಜನು ದೇವತೆಗಳ ಸಹಾಯಾರ್ಥ ಯುದ್ಧ ಮಾಡಿ ಶ್ರಾಂತನಾಗಿ ಅವರು ವರ ಕೇಳೆಂದಾಗ ನಿದ್ರಾ ಕೇಳಲು, ದೇವತೆಗಳ ಪ್ರಾರ್ಥನಾನುಸಾರ ನಿದ್ರಾವನ್ನು ಸಾರ್ಥಕ ಗೊಳಿಸಲು ಶ್ರೀಕೃಷ್ಣ ಕಾಲಯವನನನ್ನು ಆತನ ನೇತ್ರಾಗ್ನಿ ದಗ್ಧನನ್ನಾಗಿ

ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ॥೪೦॥
ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧ ॥
ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥೪೨॥

---

ಮಾಡಿ ಪುಣ್ಯ ಘಟಿಸುವಂತೆ ಮಾಡಿದ್ದು. ಅತಿ ನಿದ್ರಾದಿಗಳನ್ನು ಬಿಡ ಬೇಕೆಂದು ತಾತ್ಪರ್ಯ. ॥ ೩೯ ॥

ಸರ್ವ ಜೀವರಲ್ಲಿಯೂ ಗುಣತ್ರಯ ಬದ್ಧತ್ವ ನಿರೂಪಿಸುವನು. ಸಂಸಾರ ದಲ್ಲಿರುವ ಸ್ವರ್ಗಾದಿಗಳಲ್ಲಿರುವ ದೇವತೆಗಳಲ್ಲಿ ಪೃಥ್ವಿಯಲ್ಲಿರುವ ಮನುಷ್ಯ ರಲ್ಲಿ. ವಾ ಶಬ್ದ ಸೂಚಿತ ದೈತ್ಯಾದಿಗಳಲ್ಲಾಗಲೀ ಸತ್ವರಜಸ್ತಮೋಗುಣದಿಂದ ಮುಕ್ತರು ಯಾರೂ ಇಲ್ಲ. ॥ ೪೦ ॥

ಜೀವಜಾತ ಸರ್ವವೂ ಪೂರ್ವೋಕ್ತರೀತ್ಯಾ ಸತ್ವಾದಿಗುಣಬದ್ಧವೇ ಆದರೆ ಮತ್ತೂ ಬಂಧಕ ಕರ್ಮಕರಣಾತ್ ಮೋಕ್ಷ ಹೇಗಾಗಬೇಕೆಂದು ಆ ಶಂಕಾ ಬಂದರೆ ಮೋಕ್ಷಸಾಧನ ಕರ್ಮ ಜಾತ್ಯಾದಿ ಭೇದೇನ ಭಿನ್ನ ತತ್ತದ್ವಿ ಹಿತ ಕರ್ಮದಿಂದ ಮೋಕ್ಷವೆಂದು ನಿರೂಪಿಸುವ ಉದ್ದಿಶ್ಯ ಬ್ರಾಹ್ಮಣಾದ್ಯಧಿ ಕಾರಿಗಳ ಗುಣಕೃತ ಕರ್ಮಪ್ರಭೇದ ನಿರೂಪಿಸುವನು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಹಾಗೆ ಶೂದ್ರ ಇವರ ಸ್ವಕೀಯೋ ಭಾವಃ ಸ್ವಭಾವಃ ಬ್ರಾಹ್ಮ ಣಾದಿ ಜನ್ಮಕಾರಣ ಪ್ರಾಚೀನ ಕರ್ಮ. ತಜ್ಜನ್ಯಗುಣಾಃ ಸತ್ವಾದಿ ಗುಣ ಗಳು. ಇವುಗಳಿಂದ ಜನ್ಯಕರ್ಮಗಳು ಭಿನ್ನಭಿನ್ನವಾದ್ದು ಅದನ್ನು ಕೇಳು. ಇಲ್ಲಿ ಶೂದ್ರರಿಗೆ ಪ್ರತ್ಯೇಕ ನಿರ್ದೇಶವೇ ದಾನಾಧಿಕಾರ ಜ್ಞಾಪನಾರ್ಥ. ॥೪೧॥

ಆ ಪೈಕಿ ಬ್ರಾಹ್ಮಣಾದಿ ನಾಲ್ಕು ಜಾತಿಯವರ ಕರ್ಮಗಳನ್ನು ಮೂರು ಶ್ಲೋಕಗಳಿಂದ ನಿರೂಪಿಸುವನು. ಬ್ರಾಹಣನಿಗೆ ಸಹಜವಾದ ಕರ್ಮ ಯಾವ ದೆಂದರೆ ಭಗವದ್ವಿಷಯಕ ಬುದ್ಧಿ. ಇಂದ್ರಿಯನಿಗ್ರಹ, ಬ್ರಹ್ಮಚರ್ಯಾದಿ ತಪಸ್ಸು, ಬಾಹ್ಯಾಭ್ಯಂತರ ಶುದ್ಧಿ, ಕ್ಷಾಂತಿಯಿಂದ ಕ್ರೋಧ ಇಲ್ಲದೆ ಇರು ವುದು, ಆರ್ಜವವೆಂದರೆ ಮನಸ್ಸು ವಾಕ್‌ಕಾಯ ಕರ್ಮ ಇವುಗಳಲ್ಲಿ ಏಕ

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥ ೪೩ ॥
ಕೃಷಿಗೋರಕ್ಷವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ॥ ೪೪ ॥
ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ ।
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫ ॥
ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬ ॥

---

ರೀತಿ ಇರೋಣ, ಸಾಮಾನ್ಯ ಜ್ಞಾನ ವಿಶೇಷ ಜ್ಞಾನ ಧರ್ಮಾದಿಗಳಿಂದ ಈಶ್ವರಪ್ರೀತಿ ಪರಲೋಕ ಪುಣ್ಯಾದಿರೂಪ ಪ್ರಯೋಜನ ಉಂಟೆಂಬ ಭಾವನೆಯೇ ಆಸ್ತಿಕ್ಯ. ಇವು ಬ್ರಾಹ್ಮಣ ಕರ್ಮ. ॥ ೪೨ ॥

ಕ್ಷತ್ರಿಯ ಕರ್ಮ ನಿರೂಪಿಸುವನು. ಭೀರುತನ ಇಲ್ಲದೆ ತೇಜಃ ವರ್ಚಸ್ವಿಯಾಗಿ ಧೈರ್ಯ ಪಾಟವ ಯುದ್ಧದಲ್ಲಿ ಹೆದರಿ ಓಡದೆ ಸತ್ಪಾತ್ರದಲ್ಲಿ ದಾನ ಮಾಡುತ್ತಾ ಈಶ್ವರಭಾವಃ ದುಷ್ಟನಿಗ್ರಹ ಶಿಷ್ಟಪಾಲನೆ ಮಾಡುತ್ತಾ ಹಿಂದೆ ಹೇಳಿದ ರೀತಿ ಇರೋಣ ಕ್ಷತ್ರಿಯನ ಸಹಜ ಕರ್ಮ ॥೪೩॥

ಕೃಷಿ ಗೋಸಂರಕ್ಷಣ ವ್ಯಾಪಾರ ಇವುಗಳಿಂದ ಜೀವನವು ವೈಶ್ಯಕರ್ಮ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ ಸೇವಾವೃತ್ತಿಯಿಂದ ಜೀವನವು ಶೂದ್ರ ಕರ್ಮವೆನಿಸಿಕೊಳ್ಳುತ್ತದೆ. ॥ ೪೪ ॥

ವರ್ಣಭೇದೇನ ಕರ್ಮಭೇದ ಹೇಳಿ ಫಲ ನಿರೂಪಿಸುವನು. ಹಿಂದೆ ನಿರೂಪಿಸಿದ ರೀತ್ಯಾ ಸ್ವಸ್ವವರ್ಣಾಶ್ರಮ ವಿಹಿತ ಕರ್ಮಾನುಷ್ಠಾನದಿಂದ ಜ್ಞಾನದ್ವಾರಾ ಸಂಸಿದ್ಧಿಂ ಮೋಕ್ಷವನ್ನು ಹೊಂದುವನು. ಇದನ್ನೇ ವಿಸ್ತಾರದಿಂದ ನಿರೂಪಿಸುವೆನು ತಿಳಿಯೆಂದು ಹೇಳುತ್ತಾನೆ. ॥ ೪೫ ॥

ಮಾನವನು ಯಾವ ನನ್ನಿಂದ ಜಗತ್ತಿನ ಪ್ರಾಣಿವರ್ಗಕ್ಕೆ ಚೇಷ್ಟಾ ನಡಿಯುವದೊ, ಯಾವ ನನ್ನಿಂದ ಜಗತ್ತೇ ವ್ಯಾಪ್ತವಾಗಿ ಉಂಟೋ ಅಂತಹ ನನ್ನನ್ನು ತನ್ನ ವಿಹಿತ ಕರ್ಮದಿ ಶಮದಮಾದಿ ಯುಕ್ತನಾಗಿ ಪೂಜಿಸಿ ಮಾನವನು ಮೋಕ್ಷವನ್ನು ಹೊಂದುವನು ॥ ೪೬ ॥

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥ ೪೭ ॥
ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮ ॥
ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।
ನೈಷ್ಕರ್ಮ್ಯಸಿದ್ಧಿಂ ಪರಮಾಂ ಸನ್ನ್ಯಾಸೇನಾಧಿಗಚ್ಛತಿ ॥ ೪೯ ॥
ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ ।
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥

---

ಪ್ರತೀ ಒಬ್ಬನಿಗೂ ಸ್ವಧರ್ಮನಿಷ್ಠಾ, ತದಾಚರಣ ಅವಶ್ಯವೆಂದು ನಿರೂಪಿಸುವನು. ಸಾಂಗವಾಗಿ ಯಾವ ತರದ ವೈಕಲ್ಯವೂ ಇಲ್ಲದಂತೆ ಪರಧರ್ಮಾಚರಣೆಯಿಂದ ಸ್ವಲ್ಪ ವಿಕಲವಾದರೂ ಆದ ಸ್ವಧರ್ಮಾಚರಣೆ ಶ್ರೇಷ್ಠವಾದ್ದು. ಯಾವನು ಸ್ವಭಾವನಿಯತ ಅಂದರೆ ವರ್ಣಾಶ್ರಮ ವಿಹಿತ ಕರ್ಮ ಮಾಡುವವನು ಯಾವ ಕಿಲ್ಬಿಷವನ್ನೂ ಹೊಂದುವುದಿಲ್ಲ. ॥ ೪೭ ॥

ವೈಗುಣ್ಯವು ಸರ್ವತ್ರ ಇರುವುದೆ. ಆದರೂ ಸಹಜವಾದ ಕರ್ಮ ಕಿಂಚಿತ್ ದುಃಖಾದಿ ದೋಷಯುತವಾದರೂ ಬಿಡುವುದಲ್ಲ. ಹೇಗೆ ಬಹಳ ವಾಗಿ ಅಗ್ನಿಯೂ ಧೂಮಾವೃತವಾಗಿರುವದೋ ಹಾಗೆ ಸರ್ವ ಕರ್ಮವೃತ್ತಿ ಯಲ್ಲೂ ದೋಷ ಉಂಟೇ ಉಂಟು. ದೋಷ ಉಂಟೆಂದು ಕರ್ಮ ತ್ಯಾಜ್ಯ ವಲ್ಲ. ॥ ೪೮ ॥

ಹಿಂದೆ ಸ್ವಕರ್ಮನಿರತಗೆ ಸಿದ್ಧಿ ಹೇಳಿದ್ದರಲ್ಲಿ, ಅಪೇಕ್ಷಿತ ವಿಶೇಷವನ್ನು ನಿರೂಪಿಸುವನು. ಸರ್ವತ್ರ ಶಬ್ದಾದಿ ವಿಷಯುಗಳಲ್ಲಿಯೂ ಕ್ಷುದ್ರ ಆ ಮುಷ್ಮಿಕಗಳಲ್ಲಿಯೂ ಅಸಕ್ತಬುದ್ಧಿಃ ಇಚ್ಛಾ ಇಲ್ಲದವನಾಗಿರಬೇಕು. ಅತ ಏವ ಜಿತಾತ್ಮಾ ವಿರಕ್ತನಾಗಿರಬೇಕು ಹೀಗಿದ್ದು ಮಾಡಿದ ಸರ್ವ ಕರ್ಮ ವನ್ನೂ ಸನ್ಯಾಸೇನ ಭಗವದರ್ಪಣ ಬುದ್ಧಿಯಿಂದ ಕರ್ಮಾನುಷ್ಠಾತನು ಮೋಕ್ಷೋಪಯುಕ್ತ ಸಿದ್ಧಿಯನ್ನು ಹೊಂದುವನು. ॥ ೪೯ ॥

ನೈಷ್ಕರ್ಮ ಸಿದ್ಧಿ ಸಾಧನ ವಿವರಣ ಪೂರ್ವಕ ಫಲ ನಿರೂಪಿಸುವನು. ಯಾವ ರೀತಿಯಲ್ಲಿದ್ದವನು ನೈಷ್ಕರ್ಮ ಸಿದ್ಧಿಯ ಸೀಮಾ ಹೊಂದುವವ

ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽಽತ್ಮಾನಂ ನಿಯಮ್ಯ ಚ।
ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥
ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।
ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ॥೫೩
ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।
ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್॥೫೪॥

---

ನಾಗಿ ಆ ಪರಂಬ್ರಹ್ಮ ಲಕ್ಷ್ಮಿಯನ್ನೂ ಹೊಂದುವನೋ ಆ ರೀತಿ ಸಂಕ್ಷೇಪತಃ ನಿರೂಪಿಸುವೆನು ತಿಳಿ ಎಂದು ಹೇಳುವನು. ॥ ೫೦ ॥

ಪ್ರತಿಜ್ಞಾತ ಧರ್ಮಾಂತರ ನಿರೂಪಿಸುವನು. ವಿಶುದ್ಧ ಬುದ್ಧಿಯಿಂದ ಅಂದರೆ ವಿಷಯಾಸಕ್ತಿ ಬಿಟ್ಟು ಧೈರ್ಯದಿಂದ ಆತ್ಮಾನಂ ನಿಯಮ್ಯ ಮನಸ್ಸನ್ನು ವಿಷಯಗಳಿಂದ ನಿವರ್ತಿಸಿ, ವಿಷಯತ್ಯಾಗವೆಂದು·ತದನುಭವೇಚ್ಛಾ ಇಲ್ಲದೆ ಯಾವದೇ ವಸ್ತುವಿನಲ್ಲಿ ರಾಗದ್ವೇಷ ವಿಹೀನತೆಯಿಂದಿರಬೇಕು.॥೫೧॥

ಜನಸಮ್ಮರ್ದ ಇಲ್ಲದ ದೇಶದಲ್ಲಿದ್ದುಕೊಂಡು ನಿಯತಾಹಾರದಿಂದ ಮನಸ್ಸನ್ನೂ ವಾಕನ್ನೂ ಸದ್ವಿಷಯವರ್ತಿಯಾಗಿ ಮಾಡಿಕೊಂಡು ವಿರಕ್ತನಾಗಿ ಧ್ಯಾನಾಸಕ್ತನಾಗಿ ತನಗೆ ಕರ್ತೃತ್ವಾಭಿಮಾನ ಬಿಟ್ಟು, ತಾನೇ ಸಮರ್ಥನೆಂದು ತಿಳಿಯದೆ ವಿಷಯಾಭಿಲಾಷೆ ಇಲ್ಲದೆ ಕ್ರೋಧಾದಿ ವರ್ಜಿತನಾಗಿ ಕರ್ಮಗಳಲ್ಲಿ ಮಮತಾಭಿಮಾನವರ್ಜಿತನಾಗಿ, ಕೋಪ ಕಾರಣ ಒದಗಿದರೆ ಕೋಪ ಮಾಡದೆ ಬ್ರಹ್ಮನಲ್ಲಿ ಸ್ಥಿತಿ ಅಂದರೆ ಬ್ರಹ್ಮವಿಷಯಕ ಮನಸ್ಸುಳ್ಳವನಾಗುವುದಕ್ಕೆ ಶಕ್ತನಾಗುವನು ॥ ೫೨, ೫೩ ॥

ಮುಂದಿನ ಫಲ ಹೇಳುವರು. ಸದಾ ಮನಸ್ಸು ಬ್ರಹ್ಮನಲ್ಲಿ ಉಳ್ಳವನು ವಿಷಯಾಸಕ್ತಿರಹಿತನಾಗಿ ವಿಷಯೇಚ್ಛಾ ಇಲ್ಲದವನಾಗಿ, ವಿಷಯಪ್ರಾಪ್ತಿ ಪ್ರಯುಕ್ತ ದುಃಖೇನಾಪಿ ರಹಿತನಾಗಿ ಸರ್ವೇಷು ಸಮಃ ಅಂದರೆ ಸರ್ವ ವಸ್ತುಗಳಲ್ಲಿ ನಿಯಾಮಕತಯಾ ಈಶ್ವರನನ್ನು ತಿಳಿದುಕೊಂಡು, ಅತಏವ ಶ್ರೇಷ್ಠ ಭಗವದ್ಭಕ್ತಿ ಹೊಂದುವನು. ॥ ೫೪ ॥

ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।
ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ॥ ೫೫ ॥
ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।
ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ॥ ೫೬ ॥
ಚೇತಸಾ ಸರ್ವಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಃ ।
ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭ ॥
ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।
ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥

---

ಮುಂದಿನ ಫಲ ನಿರೂಪಿಸುವನು. ನಾನು ದೇಶಕಾಲಗಳಲ್ಲಿ ಎಷ್ಟೋ ಗುಣಗಳಿಂದ ವ್ಯಾಪ್ತನೋ, ತತ್ತದ್ಯೋಗ್ಯತಾನುಸಾರಿ ಭಕ್ತಿಯಿಂದ ತತ್ವತಃ ಯಥಾರ್ಥರೀತ್ಯಾ ತಿಳಿದು ಮುಕ್ತನಾಗುವನು. ॥ ೫೫ ॥

ಹಿಂದೆ ಸ್ವಕರ್ಮಣಾ ತಮಭ್ಯರ್ಚ್ಯ ಎಂತ ನಿರೂಪಿಸಿದ ಕರ್ಮಕರಣ ತತ್ಫಲ ವ್ಯಕ್ತಪಡಿಸುವನು. ಸರ್ವ ಕರ್ಮವನ್ನೂ ನನ್ನಲ್ಲೇ ಸಮರ್ಪಿಸಿ ನನ್ನ ಅನುಗ್ರಹದಿಂದ ಶಾಶ್ವತಪದಂ ನಾಶಶೂನ್ಯ ಪದ ಅಂದರೆ ಮೋಕ್ಷಂ ಪ್ರಾಪ್ನೋತಿ. ॥ ೫೬ ॥

ಭಗವದಾಶ್ರಯದಿಂದ ವಿಹಿತ ಕರ್ಮಿಗೆ ಮೋಕ್ಷವಾದರೆ ಹಿಂದೆ ಹೇಳಿದ ತ್ರೈವಿಧ್ಯನಿಗೂ ಮೋಕ್ಷವಾಗಲೆಂದರೆ ಈತನ ಮತ್ತು ತ್ರೈವಿಧ್ಯನ ವೈಲಕ್ಷಣ್ಯ ತೋರಿಸಿ ಆಶಂಕಾ ಪರಿಹಾರ ಮಾಡುವನು. ಮತ್ಪರಃ ನಾನೇ ಸರ್ವೋತ್ತಮ ನೆಂದು ಭಾವಿಸಿ ಮನಸಾ ಸರ್ವ ಕರ್ಮವನ್ನೂ ನನ್ನಲ್ಲೇ ಅರ್ಪಿಸಿ ಧ್ಯಾನಧಾರ ಣಾದಿಗಳಲ್ಲೂ ನನ್ನನ್ನೇ ಉದ್ದೇಶವಾಗಿಟ್ಟುಕೊಂಡು ಸದಾ ಮನೋವೃತ್ತಿ ನನ್ನ ವಿಷಯಕವನ್ನಾಗಿ ಮಾಡು. ತ್ರೈವಿಧ್ಯ ಇಂತಹ ರೀತಿಯವನಲ್ಲ. ಆದ್ರಿಂದ ಆತಗೆ ಮುಕ್ತಿ ಇಲ್ಲವೆಂದು ತಾತ್ಪರ್ಯ. ॥ ೫೭ ॥

ಸದಾ ಪರಮಾತ್ಮಚಿತ್ತಗೆ ಫಲ ಹೇಳುವನು. ನನ್ನಲ್ಲೇ ದೃಢ ಮನಸ್ಕನಾದ ನೀನು ನನ್ನ ಅನುಗ್ರಹದಿಂದ ಸಮಸ್ತ ದುಃಖಗಳನ್ನು ದಾಟುವಿ. ಎಂದು ವಿಹಿತ ಕರ್ಮಫಲ ಹೇಳಿ ಅಕರಣೇ ಅನಿಷ್ಟ ನಿರೂಪಿಸು ವನು. ಉತ್ತರಾರ್ಧದ ಅಥಶಬ್ದ ಅರ್ಥಾಂತರೇ ನಿನ್ನ ವಿಹಿತವಾದ ಯುದ್ಧ

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**
**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥೬೦॥**
**ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥೬೧॥**
**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ೬೨**

---

ಮಾಡೆಂಬ ವಚನವನ್ನು ಅಹಂಕಾರದಿಂದ ಕೇಳದೆ ಇದ್ದಲ್ಲಿ ವಿನಂಕ್ಷ್ಯಸಿ ಪುರುಷಾರ್ಥಹೀನನಾಗುವೆ. ॥ ೫೮ ॥

ನನ್ನ ವಚನ ಧಿಕ್ಕಾರ ಅಶಕ್ಯವು ಎಂದು ಹೇಳುವನು. ಅಹಂಕಾರ ದಿಂದ ಯುದ್ಧ ಮಾಡುವುದಿಲ್ಲನೆಂಬ ನಿನ್ನ ಆಶಯವು ಮಿಥ್ಯಾ. ಯಾಕೆಂದರೆ ಪ್ರಕೃತಿಃ ನನ್ನ ಇಚ್ಛೆಯು ನಿನ್ನನ್ನು ಯುದ್ಧಾರ್ಥ ಪ್ರೇರಿಸುತ್ತದೆ. ॥ ೫೯ ॥

ಹಿಂದೆ ಹೇಳಿದ ಈಶ್ವರೇಚ್ಛಾ ನಿಯಾಮಕತ್ವವನ್ನು ಬಿಡಿಸಿ ನಿರೂಪಿಸು ವನು. ನಿನ್ನ ಸಂಸ್ಕಾರಜನಿತ ಕರ್ಮದಿಂದ ಬದ್ಧನಾದ ನೀನು ಮೋಹಾತ್ ಇಚ್ಛಿಸದೆ ಇದ್ದರೂ ಭಗವದಿಚ್ಛಾಧೀನನಾಗಿ ಮಾಡುವಿ. ॥ ೬೦ ॥

ಈಶ್ವರಸ್ವರೂಪ ನಿರೂಪಣ ಪೂರ್ವಕ ಈಶ್ವರಗೆ ಕರ್ತೃತ್ವ ನಿರೂ ಪಿಸುವನು. (ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ) ಎಂತ ಹೇಳಿದಂತೆ ಅರ್ಜುನ ಈಶನಾನಿಯಮನ, ಶೀಲನಾದ ನಾರಾಯಣನ ಹೃದಯ ದೇಶ ದೊಳು ಇದ್ದು ಸರ್ವ ಪ್ರಾಣಿಗಳನ್ನೂ ತತ್ತತ್ಕರ್ಮಾನುಗುಣವಾಗಿ ಮಾಯಾ ಅಂದರೆ ಇಚ್ಛಾದಿಂದ ಪ್ರವರ್ತಿಸುವನು. ಇಲ್ಲಿ ಈಶ್ವರ ಎಂದರೆ ನಾರಾಯಣನೆಂದು ಶಂಕರಾಚಾರ್ಯರೂ ಒಪ್ಪಿದ್ದಾರೆ. ಹೇಗೆ ಯಾಂತ್ರಿ ಕನು ದಾರುಮಯ ವಸ್ತುವನ್ನು ತನ್ನ ಶಕ್ತಿಯಿಂದ ತಿರುಗಿಸುವನೋ ಅದೇ ರೀತಿ. ॥ ೬೧ ॥

ಹಿಂದೆ ಹೇಳಿದ ರೀತ್ಯಾ ಈಶ್ವರನೇ ಸ್ವತಂತ್ರನಾಗಿ ಕರ್ಮಕರ್ತನಾದ ಪ್ರಯುಕ್ತ ಜೀವರು ಪರಾಧೀನರಾದ ಕಾರಣ ಸರ್ವ ಪ್ರಕಾರದಿಂದ ಅಂತಹ

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥**
**ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ೬೪**
**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥೬೫॥**
**ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥**

---

ಈಶ್ವರನನ್ನೇ ಮರೆ ಹೊಂದು. ಆತನ ಅನುಗ್ರಹದಿಂದ ಉತ್ತಮ ಶಾಂತಿ ಅಂದರೆ ಬುದ್ಧಿಯು ತದ್ವಿಷಯಕವಾಗುವುದು. ಹಾಗೆ ಶಾಶ್ವತವಾದ ವೈಕುಂಠಾದಿ ಸ್ಥಾನ ಹೊಂದುವಿ. ಇಲ್ಲಿ ನನ್ನನ್ನು ಮರೆ ಹೊಂದೆಂದು ಹೇಳದೆ ಅವನನ್ನು ಎಂದು ಪರೋಕ್ಷ ನಿರ್ದೇಶ ಅರ್ಜುನನಿಗೆ ಈಶ್ವರತ್ವ ನಿಶ್ಚಯ ಕೃಷ್ಣನಲ್ಲಿದ್ದ ಪ್ರಯುಕ್ತವೆಂದು ತಿಳಿಯಬೇಕು. ॥ ೬೨ ॥

ಶ್ರೀಕೃಷ್ಣ ತೂಷ್ಣೀಂಭೂತನಾದ ಅರ್ಜುನನನ್ನು ಅಕ್ಷೇಪಿಸುವನು. ಹಿಂದೆ ಹೇಳಿದ ರೀತ್ಯಾ ಅತಿ ಗೋಪ್ಯವಾದ ಜ್ಞಾನ ಮತ್ತು ಜ್ಞೇಯ ನನ್ನಿಂದ ನಿನಗಾಗಿ ಉಪದಿಷ್ಟವಾಯಿತು. ಸಮಸ್ತವನ್ನು ಮನಸಾ ವಿಚಾರ ಮಾಡಿ ನಿನಗೆ ತೋರಿದಂತೆ ಮಾಡು. ॥ ೬೩ ॥

ಈ ತನಕ ತತ್ವ ಉಪದಿಷ್ಟವಾದ್ದನ್ನು ಉಪಸಂಹಾರ ಮಾಡಿ ಸಾಧನೋಪದೇಶ ಉಪಸಂಹರಿಸುವನು. ಹಿಂದೆ ಸಾಧನ ನಿರೂಪಿತವಾದ್ದರಿಂದ ಭೂಯಃ ಪುನಃ ಎಂದು ಭೂಯಃ ಪದದಿಂದ ಸೂಚಿಸುವನು. ನೀನು ಇಷ್ಟ, ಇದು ನಿಶ್ಚಿತ. ಆದ್ರಿಂದ ಅತಿಗುಹ್ಯವಾಗಿಯೂ ಹಿತವೂ ಆದ ವಚನವನ್ನು ಹೇಳುವೆನು. ॥ ೬೪ ॥

ನಿರೂಪಿಸುವನು. ನೀನು ನನಗೆ ಪ್ರಿಯನಾದ ಕಾರಣ ನನ್ನಲ್ಲೇ ಮನಸ್ಸಿನಿಂದ ಸ್ನೇಹಪೂರ್ವಕ ಯಾಗಾದಿಗಳನ್ನು ಮಾಡಿ ನನ್ನನ್ನೇ ವಂದಿಸು. ಇಂತಹ ಶ್ರೇಷ್ಠ ಸಾಧನಗಳಿಂದ ನಿಸ್ಸಂಶಯವಾಗಿ ತಿಳಿಸುವೆನು, ನನ್ನನ್ನು ಹೊಂದುವಿ. ॥ ೬೫ ॥

ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನಚ ಮಾಂ ಯೋಽಭ್ಯಸೂಯತಿ ೬೭

ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥

ನಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥

---

ನಿರೂಪಿತ ಮನ್ಮನಸ್ಕತ್ವ ನಿರೂಪಿಸುವನು. ಅವೈಷ್ಣವ ಸರ್ವ ಧರ್ಮ ಬಿಟ್ಟು ಸರ್ವೋತ್ತಮತ್ವ ಜ್ಞಾನಪೂರ್ವಕ ಆತ್ಮಾತ್ಮೀಯಗಳಿಂದ ಅಧಿಕ ಪ್ರೇಮದಿಂದ ರಕ್ಷಿಷ್ಯತೀವ ಎಂಬ ವಿಶ್ವಾಸದಿಂದ ನನ್ನನ್ನೇ ಶರಣು ಹೊಂದು. ನಾನು ಸರ್ವ ಪಾಪರಹಿತನನ್ನಾಗಿ ಮಾಡಿ ಪ್ರಾರಭ್ಧಾವಸಾನದಲ್ಲಿ ಮುಕ್ತನನ್ನು ಮಾಡುವೆ. ಸಂಸಾರ ವಿಷಯಕ ಶೋಕ ಬಿಡು. ॥ ೬೬ ॥

ಈ ಪೂರ್ವೋಕ್ತ ಗೀತಾ ಉಪದೇಶಕ್ಕೆ ಅನಧಿಕಾರಿಗೆ ಉಪದೇಶ ನಿಂದಾ ಪೂರ್ವಕ ಅಧಿಕಾರ ಸ್ವರೂಪ ನಿರೂಪಿಸುವನು. ಬ್ರಹ್ಮಚರ್ಯಾದಿ ತಪೋಹೀನಗೆ ಉಪದೇಶ ಮಾಡಬಾರದು. ಹಾಗೆ ಗುರುಶುಶ್ರೂಷಾರಹಿತಗೆ. ಹಾಗೆ ಭಗವದ್ಭಕ್ತಿರಹಿತಗೆ, ಒಬ್ಬನಿಂದ ಒಬ್ಬ ಹೆಚ್ಚೆಚ್ಚು ಅನಧಿಕಾರಿ ಎಂದು ತಿಳಿಸಲು ಚ ಶಬ್ದ ಈ ಮೂರು ಜನರಿಂದಲೂ ಪರಮಾತ್ಮನಲ್ಲಿ ಅಸೂಯಾವಂತಗೆ ಉಪದೇಶ ದೋಷಕರ. ಇದಕ್ಕೆ ಅಲ್ಲಿಯೂ ಚಶಬ್ಧ ॥ ೬೭ ॥

ಅಧಿಕಾರಿಯಲ್ಲಿ ಮಾಡುವ ಉಪದೇಶವನ್ನು ಫಲೋಕ್ತ್ಯಾ ಎರಡು ಶ್ಲೋಕಗಳಿಂದ ಪ್ರಶಂಸಾಮಾಡುತ್ತಾನೆ. ಈ ಅತಿಗೋಪ್ಯವಾದ ಪ್ರಮೇಯವನ್ನು ನನ್ನಲ್ಲಿ ಭಕ್ತಿಯುಳ್ಳವನಿಗೆ ಯಾರು ಉಪದೇಶಮಾಡುವನೋ, ಅವನು ನನ್ನಲ್ಲಿ ಭಕ್ತಿಮಾಡಿ ಕ್ರಮೇಣ ನನ್ನನ್ನು ಹೊಂದುವನು. ಅಂದರೆ ಮುಕ್ತನಾಗುವನು. ಮನುಷ್ಯರಲ್ಲಿ ಅಷ್ಟು ಪ್ರೀತಿಪಾತ್ರನು ಯಾರೂ ಇಲ್ಲ. ಆಗುವುದೂ ಇಲ್ಲ. ಮನುಷ್ಯೇಷು ಎಂತ ವಿಶೇಷಣವಿದ್ದ ಕಾರಣ ದೇವತೆಗಳಿಗೆ ಇನ್ನೂ ಫಲಾಧಿಕ್ಯ ಸೂಚಿಸಿದಂತಾಯಿತು. ॥ ೬೮,೬೯ ॥

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**
**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಂ**
**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಮ್ಮೋಹಃ ಪ್ರಣಷ್ಟಸ್ತೇ ಧನಂಜಯ ॥ ೭೨ ॥**

**॥ ಅರ್ಜುನ ಉವಾಚ ॥**

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩ ॥**

---

ಗೀತಾಧ್ಯಯನದ ಫಲ ನಿರೂಪಿಸುವನು. ಯಾರು ಪರಧರ್ಮಸಾಧನವಾದ ಈ ಗೀತಾವನ್ನು ಅಧ್ಯಯನಮಾಡುವನೋ, ಅದನ್ನು ಜ್ಞಾನಯಜ್ಞವೆಂದು ತಿಳಿಯಬೇಕು. ಅದರಿಂದ ನಾನು ತೃಪ್ತನಾಗುವೆನು. ॥ ೭೦ ॥

ಗೀತಾಶ್ರವಣಕ್ಕೆ ಫಲ ನಿರೂಪಿಸುವನು. ಗೀತಾ ಶ್ರವಣಾದಿಗಳಿಂದ ಫಲವುಂಟೆಂದು ಆಸ್ತಿಕ್ಯಬುದ್ಧಿಯುಕ್ತನಾಗಿ ಅಸೂಯಾದಿ ದೋಷವಿಲ್ಲದೆ, ಯಾರು ಶ್ರವಣಮಾಡುವನೋ, ಅವನು ಮುಕ್ತನಾಗಿ ಉತ್ತಮ ಸುಕೃತಿಗಳ ಲೋಕ ಹೊಂದುವನು. ಇಲ್ಲಿ ಸೋಽಪಿ ಎಂಬ ಅಪಿಪದ ಶ್ರವಣದಿಂದ ಅಧ್ಯಯನಾದಿಗಳಿಗೆ ಅಧಿಕಫಲಸೂಚಕ ಕೈಮುತ್ಯಸೂಚನಾರ್ಥ. ॥ ೭೧ ॥

ಕೃಷ್ಣನು ಶಿಷ್ಯನಿಗೆ ಉಪದೇಶಾನಂತರ ಶಿಷ್ಯನಿಗೆ ಪ್ರಮೇಯ ತಿಳಿಯಿತೋ ಯೆಂದು ವಿಚಾರಮಾಡಿ ತಿಳಿಯದಿದ್ದರೆ ಪುನಃ ಉಪಾಯಾಂತರೇಣ ತಿಳಿಸಬೇಕೆಂಬ ಲೋಕರೀತಿ ತಿಳಿಸಿಕೊಡುವ ಬಗ್ಗೆ ಅರ್ಜುನ, ಈ ತನಕ ಹೇಳಿದ ಪ್ರಮೇಯ ಸಾವಧಾನದಿಂದ ಕೇಳಿದೆಯಾ? ಮಾನಸಿಕ ಸಂಶಯವು ನಿವೃತ್ತವಾಯಿತೋ? ಎಂತ ಕೇಳಿದನು. ॥ ೭೨ ॥

ಅರ್ಜುನನು ಉತ್ತರ ಕೊಡುವನು. ಶ್ರೀಕೃಷ್ಣ! ನಿನ್ನ ಪ್ರಸಾದದಿಂದ ನನ್ನ ವಿಪರೀತಜ್ಞಾನಜನ್ಯ ಮೋಹವು ನಾಶಹೊಂದಿ ನಾರಾಯಣದ್ವೇಷಿಗಳ ನಿಗ್ರಹವು ಧರ್ಮ, ಅವಶ್ಯ ಕಾರ್ಯವೆಂದು ಸ್ಮೃತಿ ಹುಟ್ಟಿತು. ಸಂದೇಹವು ನಿವೃತ್ತವಾಯಿತು. ಯುದ್ಧದಲ್ಲಿ ಸನ್ನದ್ಧನಾಗಿರುವೆನು. ಶ್ರೀ ಕೃಷ್ಣನು

॥ ಸಂಜಯ ಉವಾಚ ॥

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್॥ ೭೪ ॥**

**ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಮ್॥**

**ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ**

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ರಾಜನ್ ಹೃಷ್ಯಾಮಿ ಚ ಪುನಃಪುನಃ ೭೭**

---

"ಯಥೇಚ್ಛಸಿ ತಥಾ ಕುರು" ಯೆಂತ ಹೇಳಿದ ಆಕ್ಷೇಪ ಪರಿಹಾರಾರ್ಥ ಅನುಸರಣ ತೋರಿಸುತ್ತಾನೆ---ನಿನ್ನ ವಚನದಂತೆ ನಡಿಯುವೆನೆಂದು. ॥ ೭೩ ॥

ಶ್ರೀ ಕೃಷ್ಣಾರ್ಜುನರ ಏಕಾಂತವಾದ ಸಂವಾದ ನಿನ್ನಿಂದ ಹೇಗೆ ತಿಳಿಯಿತೆಂಬ ಧೃತರಾಷ್ಟ್ರನ ಶಂಕೆಯನ್ನು ಮುಂದಿನ ಶ್ಲೋಕಗಳಿಂದ ಪರಿಹರಿಸುವನು. ವೇದವ್ಯಾಸದೇವರು ಯುದ್ಧಪರಿಸಮಾಪ್ತಿ ತನಕ ಅಲ್ಲಿ ನಡೆಯುವುದು ನಿನಗೆ ತಿಳಿಯಲೆಂದು ದಯಪಾಲಿಸಿದ ಅನುಗ್ರಹದಿಂದ ಶ್ರೀ ಕೃಷ್ಣಾರ್ಜುನರ ಅದ್ಭುತವೂ ರೋಮಾಂಚ ಕೊಡುವಂತಹುದೂ ಆದ ಅತಿಗೋಪ್ಯವಾದ ಯೋಗೇಶ್ವರನಾದ ಶ್ರೀ ಕೃಷ್ಣನಿಂದಲೇ ಉಪದಿಷ್ಟವಾದ ಪುರುಷಾರ್ಥೋಪಾಯಭೂತವಾದ ಸಂವಾದವನ್ನು ನಾನೇ ಸ್ವತಃ (ಅನ್ಯದ್ವಾರಾ ಅಲ್ಲವೆಂದು ಅರ್ಥ.) ಕೇಳಿದೆನು. ॥ ೭೪,೭೫ ॥

ಈ ಸಂವಾದ ಶ್ರವಣದಿಂದ ತನಗುಂಟಾದ ತಾತ್ಕಾಲಿಕ ಫಲವನ್ನು "ರಾಜನ್" ಇತ್ಯಾದಿನಾ ಧೃತರಾಷ್ಟ್ರನನ್ನು ಕುರಿತು ಸಂಜಯನು ನಿರೂಪಿಸುವನು. ಇಂಥಾ ಅದ್ಭುತ ಸಂವಾದವನ್ನು ಸ್ಮೃತಿಗೆ ತಂದುಕೊಂಡು ಅದೃಷ್ಟವಾದ ಅದ್ಭುತ ವಿಶ್ವರೂಪವನ್ನು ಸ್ಮರಿಸಿ ಪುಣ್ಯ ಪಾರತ್ರಿಕ ಸುಖಹೇತು, ಅದೃಷ್ಟಜನಕವಾದದ್ದು. ಇದನ್ನು ಪುನಃಪುನಃ ಸ್ಮರಿಸಿ ಸಂತೋಷಪಡುವೆನು. ॥ ೭೬,೭೭ ॥

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥೭೮॥**

ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ
ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ

ಸನ್ಯಾಸಯೋಗೋನಾಮ ಅಷ್ಟಾದಶೋಽಧ್ಯಾಯಃ

---

ಅರ್ಜುನನ ಯುದ್ಧನಿಶ್ಚಯ ಕೇಳಿದ ಧೃತರಾಷ್ಟ್ರಗೆ ಯಾರಿಗೆ ಜಯವೆಂಬ ಶಂಕಾಕ್ಕೆ ತನ್ನ ಅಭಿಪ್ರಾಯ ಸಂಜಯನು ತಿಳಿಸುವನು. ಸಮಸ್ತೋಪಾಯವಂತರಿಗೆ ಸ್ವಾಮಿಯಾದ ಶ್ರೀಕೃಷ್ಣ ಯಾವ ಸೇನಾದಲ್ಲಿದ್ದಾನೋ, ಧನುರ್ಧರ ಅರ್ಜುನ ಯೆಲ್ಲಿದ್ದಾನೋ, ಅಲ್ಲೇ ರಾಜ್ಯ, ಸಂಪತ್, ನ್ಯಾಯ, ಇವುಗಳು ಅಚಂಚಲಗಳಾಗಿರುವವೆಂದು ನನ್ನ ನಿರ್ಣಯವೆಂದು. ॥ ೭೮ ॥

**ಶ್ರೀ. ಶೀರೂರುಮಠದ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರಿಂದ ವಿರಚಿತವಾದ ಗೀತಾದರ್ಶವು ಮುಗಿಯಿತು.**

॥ ಶ್ರೀಕೃಷ್ಣಾರ್ಪಣಮಸ್ತು ॥



